# ರೇಷ್ಮೆಯಲ್ಲಿ ನೇಯ್ದ ವಾಸುದೇವರ ಕಲಾಕೃತಿಗಳು





ಮೈಸೂರಿನಲ್ಲಿ ೧೯೪೪ರಲ್ಲಿ ಜನಿಸಿ, ಕಲಾ ವ್ಯಾಸಂಗವನ್ನು ಮದ್ರಾಸಿನಲ್ಲಿ ಸರ್ಕಾರಿ ಕಲಾ ಕಾಲೇಜಿನಲ್ಲಿ ಮಾಡಿದ ಎಸ್. ಜಿ. ವಾಸುದೇವರವರು ಪ್ರತಿಭಾವಂತ ಕಲಾವಿದರು; ಹಲವಾರು ಕಲಾ ಮಾಧ್ಯಮಗಳಲ್ಲಿ ಕೈಯ್ಯಾಡಿಸಿದ್ದಾರೆ. ಸದಾ ಪ್ರಯೋಗಶೀಲರು ಮತ್ತು ರಚನಾತ್ಮಕತೆಗೆ ಹೆಸರಾದವರು. ತಮ್ಮ ಕೃತಿಗಳಿಗೆ ಆಯ್ಕೆ ಮಾಡಿಕೊಳ್ಳುವ ವಿಷಯಗಳು ಮಾನವೀಯತೆಗೆ ಮತ್ತು ಸ್ವಾನುಭವಕ್ಕೆ ಮುಡಿಪಾಗಿರುವುದು ಅವರ ಒಂದು ವೈಶಿಷ್ಟ್ಯ.

ವಾಸುದೇವರವರು ತೈಲ, ಜಲವರ್ಣ ಮಾಧ್ಯಮಗಳಲ್ಲದೆ ಕೆಮ್ಮಣ್ಣು, ಮರ, ಬಾತಿಕ್, ಲೋಹದ ತಗಡುಗಳಲ್ಲಿ, ಉಬ್ಬೆತ್ತಿನ ಕೆಲಸ, ಗಾಜಿನ ವರ್ಣ ಲೇಪನ, ಇವುಗಳಲ್ಲಿ ಯಶಸ್ವಿ ಪ್ರಯೋಗಗಳನ್ನು ಮಾಡಿದ್ದು, ಈಗ ರೇಷ್ಮೆ ನೇಯ್ಗೆ ಚಿತ್ರಗಳನ್ನು ಏಳು ವರ್ಷಗಳ ಸತತ ದುಡಿಮೆಯ ನಂತರ ಪ್ರದರ್ಶಿಸಿದ್ದಾರೆ.

ತಮ್ಮ ಗುರು ಕೆ.ಸಿ.ಎಸ್. ಪಣಿಕ್ಕರ್‌ರವರಿಂದ ಪ್ರಭಾವಿತರಾಗಿ ಕರಕುಶಲ ಮಾಧ್ಯಮಗಳನ್ನು ಲಲಿತ ಕಲಾಕೃತಿಗಳನ್ನಾಗಿ ಪರಿವರ್ತಿಸಬೇಕೆಂಬ ತತ್ವವನ್ನು ವಾಸುದೇವ್ ಅನುಸರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿರುವ ಸರ್ಕಾರಿ ಕ್ಷೇತ್ರದ ವೀವರ್ಸ್ ಡಿಸೈನ್ ಸೆಂಟರಿನ ನಿಷ್ಣಾತ ನೇಕಾರ ಸುಬ್ಬರಾಯಲುರವರ ಸಹಕಾರದಿಂದ ರೇಷ್ಮೆಯಲ್ಲಿ ಸೂಕ್ಷ್ಮವಾಗಿ ನೇಯ್ದ ಚಿತ್ರಗಳನ್ನು ರಚಿಸಿದ್ದಾರೆ.

ಈ ರೇಷ್ಮೆ ಚಿತ್ರ ಜವನಿಕೆಗಳಲ್ಲಿ ಗಾಢವಾದ ವಿಷಯಗಳನ್ನು ನಿಗೂಢವಾಗಿ, ಕಪ್ಪು ಬಿಳುಪು ಹಾಗೂ ವರ್ಣಗಳಲ್ಲಿ ಚಿತ್ರಿಸಿದ್ದಾರೆ. ಈ ಚಿತ್ರಗಳನ್ನು ''ಜೀವನ ನಾಟಕ'', ''ಮಾನವ ದೃಶ್ಯಾವಳಿ'', ''ವೃಕ್ಷ'', ''ಅವಳು'' ಎಂಬ ಶೀರ್ಷಿಕೆಗಳಲ್ಲಿ ವಿಂಗಡಿಸಲಾಗಿದೆ. ಮಾನವನ ಸುಖ ಸಂತೋಷಗಳೊಂದಿಗೆ, ದುಃಖ ಕಷ್ಟಕಾರ್ಪಣ್ಯಗಳನ್ನು ಆತ್ಮೀಯತೆಯಿಂದ, ಕೆಲವೊಮ್ಮೆ ನೇರವಾಗಿ, ಕೆಲವೊಮ್ಮೆ ಪರೋಕ್ಷವಾಗಿ ಸಂಕೇತಗಳ ಮೂಲಕ ವಾಸುದೇವ ಅವರು ವರ್ಣಿಸುತ್ತಾರೆ.

*– ಯು. ಎಸ್. ವೆಂಕಟರಾಮನ್*



*'ಜೀವನ ನಾಟಕ' ವಾಸುದೇವರ ನೇಯ್ಗೆ ಚಿತ್ರ*



*ವೃಕ್ಷ*

# ಹೊಸತು

## ಒಳಗೇನಿದೆ.....




*ಚಿತ್ರಗಳು : ಗುಜ್ಜಾರ್, ಹರಿಣಿ, ಸತೀಶ್ ಯಲ್ಲಾಪುರ, ವಸಂತ ಹೊಸಬೆಟ್ಟು, ಎಂ. ಪಿ. ಬಿದ್ರಿ. ಕೆ. ಗಣೇಶ ಕೋಡೂರು, ರವಿಕುಮಾರ್ ಅಜ್ಜೀಪುರ*

*ಮುಖಚಿತ್ರ : ಕೆ. ಪಿ. ಸ್ವಾಮಿ*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


ಅಂತರರಾಷ್ಟ್ರೀಯ ರಾಜಕೀಯದಲ್ಲಿ ಅಮೆರಿಕಾ ತನ್ನ ಅಧ್ಯಕ್ಷನ ಮುಖಾಂತರ ದರ್ಪವನ್ನು ಮೆರೆಯುವುದು ಇಂದು-ನಿನ್ನೆಯ ಮಾತಲ್ಲ. ಗೋವಾ ವಿಮೋಚನೆಯ ಸಂದರ್ಭದಲ್ಲಿ ಅಂದಿನ ಅಧ್ಯಕ್ಷ ಹೇಳಿದ್ದ ಮರೆಯಲಾಗದ ಮಾತುಗಳಿವು: ಪೋರ್ಚುಗಲ್‌ನ ಸಮುದ್ರದಾಚೆಯ ಪ್ರದೇಶ ಗೋವಾ. ಆದ್ದರಿಂದ ಭಾರತವು ಅಲ್ಲಿಗೆ ಪ್ರವೇಶಿಸಿದರೆ ಅದು ಆಕ್ರಮಣವೆನಿಸಿಕೊಳ್ಳುತ್ತದೆ. – ಹೀಗೆ ಬಡಬಡಿಸಿದ ಅಧ್ಯಕ್ಷ ಆಮೇಲೆ ಕ್ಯೂಬಾದ ಹಂದಿಗಳ ಕೊಲ್ಲಿಯಲ್ಲಿ ಆಕ್ರಮಣವೆಸಗಿ ಒದೆಸಿಕೊಂಡು ಹಿಂದಿರುಗಿದ. ವಿಯೆಟ್ನಾಂನಲ್ಲಿ ಬರ್ಬರ ಹತ್ಯೆಗಳನ್ನು ನಿರಂತರವಾಗಿ ನಡೆಸಿದ ಎಲ್ಲ ಅಧ್ಯಕ್ಷರುಗಳೂ ಮಾನವ ಹಕ್ಕುಗಳ ಪ್ರತಿಪಾದಕರೇ !

ಈಗ ಚೀನಾದ ಮೇಲೆರಗಿ ತನ್ನ ಕುವಿಖ್ಯಾತ ಪರಂಪರೆಯನ್ನು ಮುಂದುವರಿಸಲು ಮಾಜಿ ಸಿ.ಐ.ಎ. ನಿರ್ದೇಶಕ ಬುಷ್‌ನ ಮಗ ಅಧ್ಯಕ್ಷ ಬುಷ್ ಹವಣಿಸಿದ್ದಾನೆ. ತನ್ನಪ್ಪ ಅಧ್ಯಕ್ಷನಾಗಿ ಸದೆಬಡಿಯುವ ಪ್ರವೀಣನೆಂದು ಹೆಸರು ಪಡೆದಿದ್ದರೆ ತಾನೂ ಏಕೆ ಆ ಹಾದಿ ತುಳಿಯಬಾರದೆಂದು ಆಶಯವಿರಬೇಕು. ಅದಕ್ಕೆ ಈತ ಬಳಸಿದ್ದು ಗೂಢಚರ್ಯೆಯ ವಿಮಾನವನ್ನು. ಹಲವು ದಶಕಗಳ ಹಿಂದೆ ಇಂತಹ ಒಂದು ಯು-೨ ವಿಮಾನವನ್ನು ಸೋವಿಯೆತ್ ಒಕ್ಕೂಟ ಹೊಡೆದುರುಳಿಸಿತ್ತೆಂಬುದು ಈತನಿಗೆ ಮರೆತುಹೋಗಿದೆ. ಈಗ ಬಳಸಿರುವ ಇಪಿ-೩ ಎಂಬ ಹೆಸರಿನ ವಿಮಾನ ತಾಂತ್ರಿಕವಾಗಿ ಬಹಳ ಮುಂದುವರಿದದ್ದು. ಅದು ಶೇಖರಿಸಬಲ್ಲ ಮಾಹಿತಿ ಸರ್ವಾಂಗೀಣವಾದ್ದು. ನಾಲ್ಕು ಇಂಜಿನ್‌ಗಳ ಈ ವಿಮಾನದಲ್ಲಿ ಅಡಕವಾಗಿರುವ ವಿದ್ಯುನ್ಮಾನ ಉಪಕರಣಗಳಿಂದ ಯಾವುದೇ ದೇಶದ ವಿದ್ಯುನ್ಮಾನ ಸಂಪರ್ಕಗಳ ಸಕಲ ಸಂದೇಶಗಳನ್ನೂ ಸಂಗ್ರಹಿಸಿಕೊಳ್ಳಬಹುದು. ಸಮುದ್ರದಲ್ಲಿ ಸಂಚರಿಸುವ ಹಡಗುಗಳಿಂದ ಯಾವ ಸಂದೇಶ ಎಲ್ಲಿಗೆ ಹೋಗಿದೆ, ಎಲ್ಲಿಂದ ಏನು ಬಂದಿದೆ, ಎಂಬುದರ ಸಂಪೂರ್ಣ ಮಾಹಿತಿಯನ್ನೂ ಅದು ಹಿಡಿದಿಟ್ಟುಕೊಳ್ಳಬಲ್ಲದು. ಯಾವುದೇ ದೇಶದೊಳಕ್ಕೆ ಖಾಸಗಿ ವಿದ್ಯುನ್ಮಾನ-ಅಂಚೆ (ಈ-ಮೇಲ್) ಬಂದರೆ ಅಥವಾ ಯಾವುದಾದರೂ ಮಾಹಿತಿಯನ್ನು ಲಿಖಿತ ಪತ್ರದ ರೂಪದಲ್ಲಿ ವಿದ್ಯುನ್ಮಾನ ಸಾಧನೆಗಳ ಮೂಲಕ ಆ ದೇಶ ಪಡೆದರೆ ಅದನ್ನು ಸಹ ತಡೆದು ಸಂಗ್ರಹಿಸಿಕೊಳ್ಳುವ ವ್ಯವಸ್ಥೆ ಈ ವಿಮಾನದಲ್ಲಿದೆ. ಅಂದರೆ, ಚೀಣಾದ ಸರ್ಕಾರಿ ವ್ಯವಹಾರಗಳಲ್ಲದೆ ಖಾಸಗಿ ವ್ಯಾಪಾರದ ವಿಶಿಷ್ಟ ಅಂಶಗಳು ಕೂಡ ಈ ವಿಮಾನದ ಗೂಢಚರ್ಯೆಗೆ ವಸ್ತುಗಳಾಗಿವೆ. ಇನ್ನೆಷ್ಟು ದೇಶಗಳ ವಿವಿಧ ಮಾಹಿತಿಗಳನ್ನು ಅಮೆರಿಕಾದ ಇಂತಹ ವಿಮಾನಗಳು ಸಂಗ್ರಹಿಸಿಕೊಳ್ಳುತ್ತಿವೆಯೋ ಹೇಳುವವರಾರು ? ಅಂತರರಾಷ್ಟ್ರೀಯ ದಗಾಕೋರನಾಗಲು ಮತ್ತು ಪಾಳೆಯಗಾರನಾಗಲು ಈ ಮಾಹಿತಿ ಅಮೆರಿಕಾಕ್ಕೆ ಅಗತ್ಯ. ಆದರೆ ಸಾರ್ವಭೌಮ ರಾಷ್ಟ್ರಗಳು ಅದನ್ನು ಬಹಿರಂಗಗೊಳಿಸದಿರಲು ಸ್ವತಂತ್ರರಲ್ಲವೆ ? ಕೈ ತಿರಿಚುವ ಕ್ಷುದ್ರ ಕೆಲಸ ಮಾಡುವ ಅಮೆರಿಕಾ ಸರ್ಕಾರಕ್ಕೆ ಇದು ತೀರಾ ಗೌಣವಾದ ವಿಚಾರ. ಏಕೆಂದರೆ, ಅದರ ದೃಷ್ಟಿಯಲ್ಲಿ ಅಮೆರಿಕಾದ ಅಧ್ಯಕ್ಷನು ಜಗತ್ತಿನ ಪ್ರಭು.

ಗೂಢಚರ್ಯೆಯಲ್ಲಿ ತೊಡಗಿದ್ದ ಅಮೆರಿಕಾ ವಿಮಾನವನ್ನು ಚೀಣಾದ ವಿಮಾನವೊಂದು ತನ್ನ ಗಡಿಯಿಂದಾಚೆಗೆ ದಬ್ಬಲು ಯತ್ನಿಸಿದ್ದರೆ ಅದರಲ್ಲಿ ತಪ್ಪೇನು ? ಅಥವಾ, ತನ್ನ ಗಡಿಯೊಳಕ್ಕೆ ದಾಟಿ ಬಂದಿದ್ದಾಗ, ಅದನ್ನಿಳಿಸುವಂತೆ ಆದೇಶ ನೀಡಿದರೆ ಅದು ಸಹಜವೇ ಆಗಿರುತ್ತದೆ. ಹೀಗೆ ಮಾಡಹೋದಾಗ ಚೀಣಾದ ವಿಮಾನವು ಅಪಘಾತಕ್ಕೀಡಾಗಿ ಅದರ ಚಾಲಕ ಕಾಣೆಯಾಗಿದ್ದಾನೆ. ಇಪ್ಪತ್ತಕ್ಕೂ ಹೆಚ್ಚಿನ ಅಮೆರಿಕಾದ ಗೂಢಚಾರರು ಮತ್ತು ತಾಂತ್ರಿಕ ತಜ್ಞರು ವಿಮಾನಸಹಿತ ಚೀಣಾದ ವಶರಾಗಿದ್ದು ಈಗ ತಮ್ಮ ದೇಶಕ್ಕೆ ಹಿಂದಿರುಗಿದ್ದಾರೆ. ವಿಮಾನವನ್ನು ಶೋಧಿಸಬಾರದೆಂಬ ಅಮೆರಿಕಾ ಅಧ್ಯಕ್ಷನ ತಾಕೀತನ್ನು ಚೀಣಾ ತಳ್ಳಿಹಾಕಬೇಕಾದ್ದು ಒಂದು ಕರ್ತವ್ಯ. ಆ ವಿಮಾನದ ಒಳ-ಹೊರಗುಗಳನ್ನು ವಿಶ್ವಕ್ಕೆ ತಿಳಿಸಬೇಕಾದ ಹೊಣೆ ಚೀಣಾಕ್ಕಿದೆ. ಗೂಢಚರ್ಯೆಯಲ್ಲಿ ತೊಡಗುವ ಹೀನ ಅಪರಾಧ ಎಸಗಿದ್ದಲ್ಲದೆ ಚೀಣಾಕ್ಕೆ ಬೆದರಿಕೆ ಒಡ್ಡುವ ಮಟ್ಟಕ್ಕೆ ಈ ಅಧ್ಯಕ್ಷ ಬುಷ್ ಹೋಗಿದ್ದಾನೆ. ಪರಸ್ಪರ ಸ್ನೇಹಕ್ಕೆ ಅದು ಅಡಚಣೆ ಆಗದಿರಬೇಕಾದರೆ ವಿಮಾನವನ್ನು ಕೂಡಲೆ ಹಿಂದಿರುಗಿಸಬೇಕಂತೆ ! ಗೂಢಚರ್ಯೆಯಲ್ಲಿ ತೊಡಗಿದವನ ಸ್ನೇಹದ ಆಳ ಎಷ್ಟೆಂಬುದು ಯಾರಿಗೆ ಗೊತ್ತಿಲ್ಲ ? ಯಾವುದೇ ಕಾರಣಕ್ಕೂ ತಾನು ಕ್ಷಮೆ ಕೇಳಬೇಕಾಗಿಲ್ಲ, ಏಕೆಂದರೆ ತನ್ನ ವಿಮಾನ ಅಂತರರಾಷ್ಟ್ರೀಯ ಪ್ರದೇಶದಲ್ಲೇ ಇತ್ತು, ಚೀಣಾದ ಪ್ರದೇಶವನ್ನು ಹೊಕ್ಕಿರಲಿಲ್ಲ, ಎಂದು ಮೊದಲಿಗೆ ಸುಳ್ಳು ಹೇಳಿದ ಬುಷ್ ಆಮೇಲೆ ತನ್ನ ತಪ್ಪನ್ನು ಒಂದು ರೀತಿ ಒಪ್ಪಿಕೊಂಡಿದ್ದಾನೆ. ತನ್ನ ದೇಶದ ಗೂಢಚಾರರು, ತಾಂತ್ರಿಕ ತಜ್ಞರು ಮತ್ತು ವಿಮಾನ ಚಾಲಕರನ್ನು ಹಿಂದಕ್ಕೆ ಪಡೆದ ಮೇಲೆ ಮತ್ತೆ ಮೊದಲಿನ ಸುಳ್ಳನ್ನೇ ಪುನರುಚ್ಚರಿಸುತ್ತಿದ್ದಾನೆ ಮತ್ತು ಚೀಣಾಕ್ಕೆ ಬೆದರಿಕೆ ಹಾಕುವುದನ್ನು ತೀವ್ರಗೊಳಿಸಿದ್ದಾನೆ. ಅದು ಅಮೆರಿಕಾದ ಎಲ್ಲ ಅಧ್ಯಕ್ಷರುಗಳ ಚಾಳಿಯಾಗಿದೆ ಎಂಬುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಇಂಥವರನ್ನು ಪ್ರಜಾಪ್ರಭುತ್ವದ ರಕ್ಷಕರೆಂದು ಜಾಹೀರು ಮಾಡುವ ಮಾಧ್ಯಮಗಳ ಬಗ್ಗೆ ಕನಿಕರ ತೋರಬೇಕೋ ಕೋಪ ತಾಳಬೇಕೋ ಎಂಬುದೇ ಪ್ರಶ್ನೆಯಾಗಿದೆ. ಅಮೆರಿಕಾದ ಟಿ.ವಿ. ಪ್ರಸಾರ ಮಾಡುವುದನ್ನು ನಮ್ಮ

(೨೫ನೇ ಪುಟಕ್ಕೆ)



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೨ ಸಂಚಿಕೆ - ೧೦ ಮೇ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೮೨೬

*ಹೊಸತು ಕಚೇರಿಯ ವಿಳಾಸ*



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ಚುನಾವಣಾ ಪಕ್ಷಗಳು

**ಕಾಂ**ಗ್ರೆಸ್ ಒಂದು ರಾಜಕೀಯ ಪಕ್ಷವಲ್ಲ, ಅದು ಚುನಾವಣೆಗಳನ್ನು ಗೆಲ್ಲಲು ಮಾಡಿಕೊಂಡಿರುವ ಒಂದು ಸಂಯುಕ್ತ ರಂಗ, ಎಂದು ನಾಥ ಪೈ ಹೇಳುತ್ತಿದ್ದರು. ಸ್ವತಃ ನಾಥ ಪೈ ಅವರ ಪಕ್ಷಕ್ಕೆ ಏನಾಗಿಹೋಯಿತೆಂಬುದು ಕುತೂಹಲದ ವಿಷಯ. ಆದರೆ ಒಂದು ರಾಜಕೀಯ ಪಕ್ಷಕ್ಕೆ ಏನೋ ಸೈದ್ಧಾಂತಿಕ ಚೌಕಟ್ಟು, ಕಾರ್ಯಶೈಲಿ ಇರುತ್ತದೆ ಎಂಬುದು ನಾಥ ಪೈ ಆಶಯವಾಗಿತ್ತು. ಪಾರ್ಲಿಮೆಂಟಿನ ಹಿರಿಮೆಯನ್ನು ಸಮರ್ಥಿಸುವುದರಲ್ಲಿ ಅವರೆಂದೂ ಮುಂದಾಳುವೇ. ಸಂವಿಧಾನಕ್ಕಿಂತಲೂ ಅದನ್ನು ಅರ್ಥೈಸುವವರು ಶ್ರೇಷ್ಠರೆಂದು ಆ ಸಂವಿಧಾನಪಟು ಎಂದೂ ಒಪ್ಪಲಿಲ್ಲ. ಗೋಲಕನಾಥ ಮೊಕದ್ದಮೆಯ ನಂತರ ಪಾರ್ಲಿಮೆಂಟಿನ ಸ್ಥಾನದ ಬಗ್ಗೆ ವಿಶೇಷವಾಗಿ ಚರ್ಚೆಯನ್ನು ಆರಂಭಿಸಿದವರು ಅವರು. ಟೆಹೆರಾನ್‌ನಲ್ಲಿ ಅತಳ ಬಿಹಾರಿ ವಾಜಪೇಯಿ ಮತ್ತು ಲಿಬರ್ಹಾನ್ ಮುಂದೆ ಲಾಲಾ ಕೃಷ್ಣ ಅಧ್ವಾನಿ ಇತ್ತೀಚೆಗೆ ನೀಡಿದ ಹೇಳಿಕೆಗಳನ್ನು ಗಮನಿಸಿದ್ದರೆ ಒಂದು ರಾಜಕೀಯ ಪಕ್ಷವು ಚುನಾವಣೆಯ ಪಕ್ಷವಾಗಿ ಮಾರ್ಪಟ್ಟಾಗ ಏನೆಲ್ಲಾ ತಂತ್ರಗಳನ್ನು ಬಳಸಬಹುದೆಂಬುದು ನಾಥ ಪೈಗೆ ಅರಿವಾಗುತ್ತಿತ್ತು. ಆದರೆ ಅವರು ಗತಿಸಿ ಹಲವು ದಶಕಗಳೇ ಕಳೆದಿವೆ.

ತಾವು ಪಾರ್ಲಿಮೆಂಟಿನಲ್ಲಿ ಪ್ರತಿನಿಧಿಸುವ ಲಕ್ನೋದ ಸಂಕೀರ್ಣ ಸಂಸ್ಕೃತಿಯನ್ನು ಶ್ಲಾಘಿಸಿ ವಾಜಪೇಯಿ ಟೆಹೆರಾನಿನಲ್ಲಿ ಮಾತನಾಡುತ್ತಿದ್ದಾಗಲೇ ಅವರ ಪಕ್ಷದ ಇನ್ನೋರ್ವ ಮುಖಂಡ ಅಧ್ವಾನಿ ಲಿಬರ್ಹಾನ್ ಆಯೋಗದ ಮುಂದೆ ಸಾಕ್ಷ್ಯ ನೀಡುತ್ತಿದ್ದರು. ಅಯೋಧ್ಯೆಯಲ್ಲಿ ಮಸೀದಿಯನ್ನು ಉರುಳಿಸುವ ಪಿತೂರಿಯಲ್ಲಿ ತಮ್ಮದೇನಾದರೂ ಪಾತ್ರವಿತ್ತೇ ಎಂಬುದರ ಬಗ್ಗೆ ಸಾಕ್ಷ್ಯ ನೀಡುತ್ತಿದ್ದ ಕೇಂದ್ರ ಗೃಹ ಸಚಿವರು ಭಾರತೀಯ ಸಂಸ್ಕೃತಿಯ ಸಂಕೀರ್ಣತೆಯನ್ನು ಒಪ್ಪುವ ಮನೋಭಾವವನ್ನೇನೂ ಪ್ರಕಟಿಸಲಿಲ್ಲ. ಇಟ್ಟಿಗೆಗಳ ಸಂಗ್ರಹ, ರಥಯಾತ್ರೆ ಮುಂತಾದ ಕ್ರಮಗಳಿಗೆ ಚಾಲನೆ ಕೊಟ್ಟಿದ್ದ ಅಧ್ವಾನಿಯವರು ಅಯೋಧ್ಯೆಯ ಅಂದಿನ ಘಟನೆಯು ರಾಷ್ಟ್ರೀಯ ಹಕ್ಕೊತ್ತಾಯವಾಗಿದ್ದಿತೆಂದು ಆಯೋಗದ ಮುಂದೆ ಘೋಷಿಸಿದರು. ಟೆಹೆರಾನಿನಲ್ಲಿ ಅಲ್ಲದಿದ್ದರೆ ವಾಜಪೇಯಿ ಸಹ ಹಾಗೇ ಹೇಳುತ್ತಿದ್ದರೆಂಬುದಕ್ಕೆ ಆಧಾರವಿದೆ. ಆದರೆ ಪಾಕಿಸ್ತಾನವನ್ನು ಮಣಿಸಲು ಇರಾನಿನ ಸಹಯೋಗ ಪಡೆಯಬಹುದೆಂಬ ಅವಾಸ್ತವಿಕ ರಾಜಕೀಯ ಪರಿಪ್ರೇಕ್ಷ್ಯದ ಒತ್ತಡದಿಂದಾಗಿ ಅವರು ಲಕ್ನೋದ ಶ್ರೇಷ್ಠ ಸಂಕೀರ್ಣ ಪರಂಪರೆಯನ್ನು ಹೊಗಳಿ ಎತ್ತಿಹಿಡಿದರು. ಅದರಿಂದ ಇರಾನಿನ ಜಡ್ಡು ಸಂಪ್ರದಾಯವಾದಿಗಳಾಗಲಿ, ಸ್ವಲ್ಪಮಟ್ಟಿನ ಮುಕ್ತತೆಯನ್ನು ಅಂಗೀಕರಿಸಿರುವ ರಾಜಕೀಯ ನಾಯಕರಾಗಲಿ ಪ್ರಭಾವಿತರಾದರೇ ಇಲ್ಲವೇ ಎಂಬುದು ಸಂಶಯಾಸ್ಪದವಾದ್ದು. ಆದರೆ ರಾಜಕೀಯ ಪಕ್ಷವಾಗಿ ಭಾರತೀಯ ಜನತಾ ಪಕ್ಷ ಸಂದರ್ಭಾನುಸಾರ ಹೇಗೆ ತಿಪ್ಪರಲಾಗ ಹೊಡೆಯಲು ಸಿದ್ಧವಿದೆ ಎಂಬುದಕ್ಕೆ ಇದೂ ಒಂದು ನಿದರ್ಶನ.

ಕರ್ನಾಟಕದ ಮುಖ್ಯಮಂತ್ರಿ ಸಹ ಲಕ್ನೋದ ವರ್ತಮಾನ ಸ್ಥಿತಿಯನ್ನು ಪರಂಪರೆಯನ್ನಾಗಿ ಸ್ವೀಕರಿಸಲು ಸಿದ್ಧರಿದ್ದಾರೆ. ಅಲ್ಲಿ ಕೆಲವು ಪ್ರಕಾರದ ಮದ್ಯಗಳನ್ನು ರಸ್ತೆಬದಿಯ ಪೆಟ್ಟಿಗೆ ಅಂಗಡಿಗಳಲ್ಲಿ ಮಾರಲು ಅವಕಾಶವಿದೆ. ಸರ್ಕಾರಿ ಕಚೇರಿಗಳಿಗೆ, ಶಾಲಾ - ಕಾಲೇಜುಗಳಿಗೆ ಹೋಗುವವರು ಆ ಮದ್ಯವನ್ನು ಸುಲಭವಾಗಿ ಕೊಂಡು, ಕುಡಿದು ಹೋಗುವ ಸೌಲಭ್ಯವಿದೆ. ಅಂತಹ ಸದವಕಾಶವು ಬೆಂಗಳೂರಿನ ನಾಗರಿಕರಿಗೂ ಲಭ್ಯವಾಗುವಂತೆ ಮದ್ಯ ಮಾರಾಟದ ನೀತಿಯನ್ನು ವಿಸ್ತರಿಸುವ ಉದ್ದೇಶ ನಮ್ಮ ಮುಖ್ಯಮಂತ್ರಿಗಳದ್ದಾಗಿತ್ತು. ಹಾಗೆ ಮಾಡುವುದರಿಂದ ಮದ್ಯದ ಉದ್ಯಮಪತಿಗಳಿಗೆ ತಮ್ಮ ಕಾಣಿಕೆ ಸಲ್ಲಿಸಲು ಸಾಧ್ಯವಾಗುತ್ತಿತ್ತೆಂದು ತೋರುತ್ತದೆ. ಕಲಾವಿದರ ಬಿಡುಗಡೆಗೆ, ರಾಜಕೀಯ ಅಧಿವೇಶನದ ಯಶಸ್ಸಿಗೆ, ಸಹಕಾರ ನೀಡಿದ್ದರೆನ್ನಲಾದ ಉದ್ಯಮಪತಿಗಳಿಗೆ ಹೀಗೆ ಸಹಾಯ ಮಾಡುವುದು ಚುನಾವಣಾ ರಾಜಕೀಯ ಮಾಡುವ ಒಂದು ಪಕ್ಷಕ್ಕೆ ಅಗತ್ಯವಿರಬಹುದು. ತಮ್ಮ ಆರ್ಥಿಕ ದುರ್ನೀತಿಗಳ ಕಠೋರ ಪರಿಣಾಮಗಳು ಲಕ್ನೋದ ಜನಸಾಮಾನ್ಯರಿಗೆ ತಟ್ಟದಿರಬೇಕಾದರೆ ಅವರು ಮದ್ಯದ ಗುಂಗಿನಲ್ಲಿರುವುದು ಕ್ಷೇಮವೆಂದು ವಾಜಪೇಯಿ ಭಾವಿಸಿದರೆ ಅದು ರಾಜಕೀಯ ಸಿದ್ಧಾಂತವಾಗುವುದಿಲ್ಲ, ಕೇವಲ ಚುನಾವಣಾ ತಂತ್ರ ಎನಿಸಿಕೊಳ್ಳುತ್ತದೆ. ಅಂತೆಯೇ ಶ್ರೀ. ಎಸ್. ಎಂ. ಕೃಷ್ಣರ ಲೆಕ್ಕಾಚಾರ ಸಹ. ಇದು ಈ ಪಕ್ಷಗಳ ಬೇರೆಷ್ಟೋ ನೀತಿಗಳಿಗೂ ಅನ್ವಯಿಸುತ್ತದೆ.

ಪ್ರಜಾಪ್ರಭುತ್ವದ ಅಡಿಪಾಯವನ್ನು ಭದ್ರಗೊಳಿಸಬೇಕಾದ ಕೆಲಸವು ಪ್ರಾಯೋಗಿಕವಾಗಿ ಇನ್ನೂ ಪ್ರಾಥಮಿಕ ಹಂತದಲ್ಲಿರುವಾಗ ಭಾರತದ ರಾಜಕೀಯ ಪಕ್ಷಗಳು ಸಿದ್ಧಾಂತಗಳನ್ನೆಲ್ಲಾ ಜೊಳ್ಳೆಂದು ತೂರಿ ಕೇವಲ ಚುನಾವಣಾ ತಂತ್ರಗಳನ್ನು ರಾಜಕೀಯವೆಂದು ಮೆರೆಸುತ್ತಿರುವುದು ಒಂದು ದುರಂತ. ದೇಶದ ಸಾಮಾನ್ಯ ಪ್ರಜೆಗೆ ಎಸಗಲಾಗಿರುವ ದ್ರೋಹವೆಂದು ಇದನ್ನು ಪರಿಗಣಿಸಿದರೂ ತಪ್ಪಿಲ್ಲ. ಭಾರತ್ ಅಲ್ಯುಮಿನಿಯಂ ಕಂಪನಿಯನ್ನು ಖಾಸಗಿಯವರಿಗೆ ವಹಿಸಿಕೊಡುವುದು ಜನಪರವೋ ಅಲ್ಲವೋ, ಅದಕ್ಕೆ ನಿಗದಿಗೊಳಿಸಲಾಗಿರುವ ಮೊತ್ತವು ಸರಿಯಾಗಿದೆಯೇ ಇಲ್ಲವೇ, ಎಂಬ ಪ್ರಶ್ನೆಗಳನ್ನು ಎದುರಿಸುವಾಗ ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಮಾತನಾಡುವುದು ಅಯೋಗ್ಯತನ. ದೇಶದ ಆರ್ಥಿಕ ಸ್ವಾತಂತ್ರ್ಯವನ್ನು ಕಡೆಗಾಣಿಸುವಂತಹ ಈ ತೆರನಾದ ರಾಜಕೀಯಕ್ಕೆ ಮಾನ್ಯತೆ ಸಿಗುವುದು ನಮ್ಮಲ್ಲಿ ಭೀಕರ ಯಾತನೆಯನ್ನುಂಟುಮಾಡಬೇಕು. ಆಂಧ್ರಪ್ರದೇಶದ ಡುಬಕ್ಕ, ಸಿರ್ಸಿಲಾ, ಮುಂತಾದೆಡೆಗಳಲ್ಲಿ ನೇಕಾರರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಕರ್ನಾಟಕದಲ್ಲಿ ಅನೇಕ ರೈತರೂ ಹಾಗೆ ಮಾಡಿದ್ದಾರೆ. ಆದಾಗ್ಯೂ ನಮ್ಮ ಆರ್ಥಿಕ ನೀತಿಗಳನ್ನು ಆಳವಾಗಿ ಪರಾಮರ್ಶೆ ಮಾಡದ ರಾಜಕೀಯ ಯಾವ ಪುರುಷಾರ್ಥಕ್ಕೆ ? ಕೇಂದ್ರದ ಮುಂಗಡ ಪತ್ರದ ಮಂಡನೆಯ ನಂತರ ಎರಡು-ಮೂರು ವಾರಗಳಲ್ಲಿ ಷೇರು ಪೇಟೆಯ ಕರಾಳ ಹಾಗೂ ಬೀಭತ್ಸ ಕೈವಾಡದ ಪರಿಣಾಮವಾಗಿ ಹಣ ಹೂಡಿದ್ದವರು ಒಟ್ಟು ಒಂದು ಲಕ್ಷ ಎಂಭತ್ತು ಸಾವಿರ ಕೋಟಿ ರೂಪಾಯಿಗಳ ನಷ್ಟ ಅನುಭವಿಸಿದ್ದಾರೆ. ಇವರೆಲ್ಲಾ ದೊಡ್ಡ ದೊಡ್ಡ ಕೋಟ್ಯಾಧಿಪತಿಗಳೇ ಅಲ್ಲ . ಮೂರ್ಖತನದಿಂದ ಷೇರು ಪೇಟೆಗೆ ನುಗ್ಗಿ ತಮ್ಮ ಕೈಚಳಕ ತೋರಿಸಹೊರಟ

ಸಾವಿರಾರು ಮಂದಿ ಅತಿ ಸಾಮಾನ್ಯರು ಇವರಲ್ಲಿ ಸೇರಿದ್ದಾರೆ. ಅಂದರೆ, ಸಾರ್ವಜನಿಕರ ಅಲ್ಪ ಉಳಿತಾಯಗಳನ್ನು ಲೂಟಿ ಮಾಡಿ ನುಂಗುವ ತಿಮಿಂಗಿಲಗಳು ನಮ್ಮಲ್ಲಿ ಹೇರಳವಾಗಿವೆ. ಇದನ್ನು ಗಂಭೀರವಾಗಿ ಗಣನೆಗೆ ತೆಗೆದುಕೊಂಡು ಜನರ ಪರವಾಗಿ ಮಧ್ಯಪ್ರವೇಶ ಮಾಡದ ರಾಜಕೀಯ ಪಕ್ಷಗಳಿಗೆ ಒಂದು ದಮ್ಮಡಿ ಬೆಲೆಯೂ ಇರಲಾರದು. ನಮ್ಮ ರಾಷ್ಟ್ರದ ಆಮದು-ರಫ್ತುಗಳ ಪರಿವೀಕ್ಷಣೆ ಮಾಡಬೇಕಾದ ಎಕ್ಸೈಸ್ - ಕಸ್ಟಮ್ಸ್ ಕೇಂದ್ರ ಮಂಡಲಿಯ ನಿರ್ದೇಶಕ ಬಿ.ಪಿ. ವರ್ಮಾ ಎಂಬೊಬ್ಬ ಕ್ರಿಮಿ ನುಂಗಿರುವ ಸಾರ್ವಜನಿಕ ಸಂಪತ್ತು ಕರ್ನಾಟಕದ ಒಂದೆರಡು ಜಿಲ್ಲೆಗಳನ್ನು ಕೊಳ್ಳಬಹುದಾದಷ್ಟು! ಅವನನ್ನು ಈಗ ಬಂಧಿಸಿ ಜೈಲಿಗೆ ಕಳಿಸಿದ್ದಾರೆ. ಇಂಥವರೆಲ್ಲಾ ಜೈಲಿಂದ ಮಾರನೆಯ ದಿನವೇ ಆಸ್ಪತ್ರೆಗಳಿಗೆ ದಾಖಲಾಗುತ್ತಾರೆ. ಇಷ್ಟು ವರ್ಷ ಈ ಖದೀಮ ಕಳ್ಳತನ ಮಾಡುತ್ತಿದ್ದುದು ಅರ್ಥಮಂತ್ರಿಗೆ ಗೊತ್ತಿರಲಿಲ್ಲವೆಂದು ನಂಬಬೇಕೆ ? ತಿಳಿದಿದ್ದೂ ಆ ಸಚಿವರು ಸುಮ್ಮನಿರುತ್ತಿದ್ದರೇಕೆ ? ಈಗೇಕೆ ಜ್ಞಾನೋದಯವಾಯಿತು ? ಇದೇ ನಮ್ಮ ಕ್ಷುದ್ರ ರಾಜಕೀಯ ಪಕ್ಷಗಳ ಕಾರ್ಯಶೈಲಿ.

ದೇವಾಂಗ ಮೆಹ್ತಾ ಎಂಬ ಮಾಹಿತಿ ತಂತ್ರಜ್ಞಾನ ಪರಿಣಿತನೊಬ್ಬ ಈಚೆಗೆ ಸಿಡ್ನಿಯಲ್ಲಿ ಮೃತನಾದ. ಆತನದು ಸಹಜ ಸಾವೋ ಅಲ್ಲವೋ ಎಂಬುದರ ಜಿಜ್ಞಾಸೆ ಇನ್ನೂ ತೀವ್ರವಾಗಿ ನಡೆದಿಲ್ಲ. ಆತನ ಮರಣಾನಂತರ ಕೇಂದ್ರ ಮಾಹಿತಿ ತಂತ್ರಜ್ಞಾನ ಸಚಿವರು ಹೇಳಿದ್ದು ಭಯಾನಕವಾಗಿದೆ. ಅವರೆಂದರು : ''ನಾನು ಹೆಸರಿಗೆ ಔಪಚಾರಿಕವಾಗಿ ಮಾಹಿತಿ ತಂತ್ರಜ್ಞಾನ ಸಚಿವ; ಆದರೆ ನಿಜಾರ್ಥದಲ್ಲಿ ಸಚಿವರಾಗಿದ್ದುದು ಈ ಮೆಹ್ತಾ. ಎಲ್ಲವನ್ನೂ ನಿಯಂತ್ರಿಸುತ್ತಿದ್ದವರು ಅವರೇ.'' ಇದು ಆತನ ಕಾರ್ಯದಕ್ಷತೆಯನ್ನಷ್ಟೇ ಸೂಚಿಸುವುದಿಲ್ಲ. ಬೃಹತ್ ಉದ್ಯಮಪತಿಗಳು ತಾವೇ ನೇರವಾಗಿ ಸರ್ಕಾರದ ನಿಯಮಗಳನ್ನು ರೂಪಿಸುತ್ತಿದ್ದಾರೆಂಬುದನ್ನು ಪ್ರಮಾದವಶಾತ್ ಪ್ರಮೋದ ಮಹಾಜನ್ ತಿಳಿಸುವ ಕೃಪೆ ಮಾಡಿದ್ದಾರೆ. ನಮ್ಮ ದೇಶದ ಸ್ಥಿತಿ ಚಿಂತಾಜನಕವಾಗಿದೆ. ರಕ್ಷಣಾ ಸಚಿವರ ಮನೆಯಲ್ಲೇ ಆ ಇಲಾಖೆಯ ನಿಯಂತ್ರಣ ಮಾಡಲು ಜಯಾ ಜೈಟ್ಲಿ ತಳ ಊರಿದ್ದರೆಂದು ತೆಹೆಲ್ಕಾ ಟೇಪುಗಳು ತಿಳಿಸಿವೆ. ಸರ್ಕಾರದ ನೀತಿಗಳನ್ನು ರೂಪಿಸುವುದಿರಲಿ, ದಿನನಿತ್ಯದ ಆಡಳಿತ ಸೂತ್ರಗಳನ್ನು ಸಹ ಖಾಸಗಿಯವರಿಗೆ ವಹಿಸಿಕೊಡಲಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಈ ರೀತಿಯ ಅವ್ಯವಹಾರಗಳಿಂದಾಗಿ ಇಡೀ ದೇಶದ ಶಾಲಾ ಪಠ್ಯಕ್ರಮವನ್ನು ಅವೈಜ್ಞಾನಿಕವಾಗಿ ತಿದ್ದಲಾಗುತ್ತಿದೆ, ಜ್ಯೋತಿಷ್ಯವನ್ನು ಒಂದು ವೈಜ್ಞಾನಿಕ ವಿಷಯವನ್ನಾಗಿ ಬೋಧಿಸಲು ವಿಶ್ವವಿದ್ಯಾನಿಲಯಗಳು ಮುಂದಾಗುತ್ತಿವೆ. ಇದನ್ನೆಲ್ಲಾ ಮೂಕವಿಸ್ಮಿತರಾಗಿ ನೋಡುತ್ತಿರಲೆಂದು ರಾಜಕೀಯ ಪಕ್ಷಗಳು ಅಸ್ತಿತ್ವಕ್ಕೆ ಬಂದಿವೆಯೆ ? ಅವು ಕೇಂದ್ರದಲ್ಲಿ ಮಿತ್ರ ಪಕ್ಷಗಳಾಗಿರಲಿ, ವಿರೋಧ ಪಕ್ಷಗಳಾಗಿರಲಿ, ಅದು ಮುಖ್ಯವಲ್ಲ. ಕೇಂದ್ರದ ಆರ್ಥಿಕ-ಶೈಕ್ಷಣಿಕ ನೀತಿಗಳ ಬಗ್ಗೆ ಇವುಗಳ ನಿಲುವೇನು ? ಅದನ್ನು ಸ್ಪಷ್ಟಪಡಿಸಿ ಅದಕ್ಕೆ ತಕ್ಕಂತೆ ಕಾರ್ಯಾಚರಣೆ ನಡೆಸದ ಪಕ್ಷಗಳು ರಾಜಕೀಯ ಪಕ್ಷಗಳೆನಿಸಿಕೊಳ್ಳುವುದಿಲ್ಲ; ಅವು ಕೇವಲ ಚುನಾವಣಾ ಪಕ್ಷಗಳು, ಪ್ರಜಾಪ್ರಭುತ್ವದ ಕಡುವೈರಿಗಳು.

ಸೈದ್ಧಾಂತಿಕವಾಗಿ ಪೇಲವವಾದಾಗ ರಾಜಕೀಯ ಪಕ್ಷಗಳು ದಿಕ್ಕು ಕಳೆದುಕೊಂಡ ಜನವಿರೋಧಿ ಪಕ್ಷಗಳಾಗುತ್ತವೆ. ಆಗ ಎಂತೆಂತಹ ಮಿಶ್ರಣಗಳೂ ಸಾಧ್ಯ ಮತ್ತು ಎಲ್ಲವನ್ನೂ ಸಮರ್ಥಿಸುವ ಜಾಣತನವೂ ಬೆಳೆಯುತ್ತದೆ. ಇಂದು ಮತೀಯ ಪಕ್ಷವೆನಿಸಿಕೊಂಡದ್ದು ನಾಳೆ 'ಸೆಕ್ಯುಲರ್' ಆಗುತ್ತದೆ; ಅದಕ್ಕೆ ಪರ್ಯಾಯವಾಗಿ, ಇಂದಿನ 'ಸೆಕ್ಯುಲರ್' ಪಕ್ಷ ನಾಳೆ ಮತೀಯವಾಗಿಬಿಡುತ್ತದೆ. ಇಂದು ಭ್ರಷ್ಟ, ಆದರೆ ನಾಳೆ ಸ್ವಚ್ಛ. ಇಂದು ಇವನು ಅಧ್ಯಕ್ಷನಾಗಿ ಆಯ್ಕೆಯಾದಾಗ ಸ್ವಾಗತ; ನಾಳೆ ಅವನನ್ನು ಹೊರದೂಡಿದಾಗ ಅದಕ್ಕೂ ಸ್ವಾಗತ ! ಶಾಸನಸಭೆಗೆ ಸ್ಪರ್ಧಿಸಲು ಮಗಳಿಗೆ ಅವಕಾಶ ನೀಡಲಿಲ್ಲ , ಆದ್ದರಿಂದ ಇಂದು ಪಕ್ಷ ದಾರಿ ತಪ್ಪಿದೆ, ಕೇಂದ್ರ ಕಾರ್ಯಕಾರಿ ಸಮಿತಿಗೆ ರಾಜೀನಾಮೆ ನೀಡುತ್ತೇನೆಂಬ ದುರಾಗ್ರಹ. ಅಸ್ಸಾಂ ಗಣತಂತ್ರ ಪರಿಷತ್ತು ಇದ್ದಕ್ಕಿದ್ದಂತೆ ಭಾರತೀಯ ಜನತಾ ಪಕ್ಷದೊಂದಿಗೆ ಭ್ರಾತೃತ್ವ ಬೆಳೆಸಿಕೊಳ್ಳುತ್ತದೆ; ಅಥವಾ ಋಣಮೂಲವೋ, ತೃಣಮೂಲವೋ, ತೃಣ ಸಮಾನವೋ ಆದ ಒಂದು ಪಕ್ಷ ಹಠಾತ್ತನೆ ಸರ್ಕಾರ ರಚಿಸುವ ಕನಸು ಕಾಣುತ್ತದೆ, ಯಾರಾರೊಡನೆಯೂ ಬೆರೆಯಲು ಹಾತೊರೆಯುತ್ತದೆ. ತಮಿಳುನಾಡಿನಲ್ಲಿ ವಿ. ನಾರಾಯಣಸ್ವಾಮಿ ಎಂಬಾತನ ಒಂದೇ ರಾಜಕೀಯ ಹೆಗ್ಗಳಿಕೆಯೆಂದರೆ ತನ್ನ ಹೆಸರು ಬದಲಾಯಿಸಿಕೊಂಡು ವೈಕೋ ಆದದ್ದು. ಕರುಣಾನಿಧಿ ಪಕ್ಷದ ಅಭ್ಯರ್ಥಿಗಳ ಹೆಸರನ್ನು ಯಾವುದೋ ಪತ್ರಿಕೆ ಜಾತಿವಾರು ಪ್ರಕಟಿಸಿದ್ದಕ್ಕೆ ಇವರಿಗೆ ಆಕ್ರೋಶ. ''ದ್ರಾವಿಡರ ಚಳುವಳಿಯ ನೇತಾರರು ಅವರ ಸಮಾಧಿಗಳಲ್ಲಿ ನಲುಗುವಂತಾಗಿದೆ,'' ಎಂದು ಅವರು ವ್ಯಥಿಸುತ್ತಾರೆ. ಆದರೆ ಸ್ವತಃ ಅವರು ವಾಜಪೇಯಿಯವರೊಡನೆ ಸೇರಿಕೊಂಡದ್ದಕ್ಕೆ ದ್ರಾವಿಡ ನಾಯಕರು ಮರುಗುವುದಿಲ್ಲ ! ಬಹುಜನ ಪಕ್ಷವು ಮನುವಾದಿಗಳೊಡನೆ ಸೇರಿದರೆ ಅದು ರಾಜಕೀಯ ತಂತ್ರವೆನಿಸಿಕೊಳ್ಳುತ್ತದೆ. ವಿಶೇಷವೆಂದರೆ, ಎಡಪಕ್ಷಗಳು ಕೂಡ ಈ ಅನಾರೋಗ್ಯಕರ ಪ್ರವೃತ್ತಿಯಿಂದ ಯಾವಾಗಲೂ ದೂರ ಉಳಿದಿದ್ದೇವೆಂದು ಹೇಳಿಕೊಳ್ಳುವ ಸೈದ್ಧಾಂತಿಕ ಬಿಗಿಯನ್ನು ಕಳೆದುಕೊಂಡಿವೆ.

ಬ್ರಿಟನ್ನಿನಲ್ಲಿ ಪಶುಗಳಿಗೆ ಕಾಲು-ಮತ್ತು-ಬಾಯಿ-ರೋಗ ತಗುಲಿ ಲಕ್ಷಗಟ್ಟಲೆ ಪಶುಗಳು ಕೊಲ್ಲಲ್ಪಟ್ಟಿವೆ. ಅಲ್ಲಿ ಗೋಮಾತೆಗೆ ಕನಿಕರ ತೋರುವವರಿಲ್ಲ, ಶ್ರದ್ಧೆಯಿಂದ ಪೂಜೆ ಸಲ್ಲಿಸುವವರಿಲ್ಲ . ಆದ್ದರಿಂದಲೇ ಮದ್ದು ಕೊಡುವ ಬದಲು ರೋಗ ಅಂಟಿಸಿಕೊಂಡ ಪಶುಗಳನ್ನು ಕೊಲ್ಲಲಾಗುತ್ತಿದೆ. ಸ್ವಲ್ಪ ಗಡುಸಾಗಿ ಹೇಳುವುದಾದರೆ ನಮ್ಮ ಬಹುತೇಕ ರಾಜಕೀಯ ಪಕ್ಷಗಳಿಗೆ ಈ ರೋಗ ತಗುಲಿದೆ. ಕೆಲವಕ್ಕೆ ಸಂಪೂರ್ಣವಾಗಿ, ಇನ್ನು ಕೆಲವಕ್ಕೆ ಭಾಗಶಃ ಎನ್ನಬಹುದು. ಈ ರೋಗ ಜಾಗ್ರತೆ ಹರಡುವಂಥದ್ದು. ರಾಜಕೀಯ ಪಕ್ಷವೊಂದು ಕೇವಲ ಚುನಾವಣಾ ಪಕ್ಷವಾದರೆ ಅದಕ್ಕೆ ರೋಗ ಅಂಟಿದೆಯೆಂದರ್ಥ. ಅದರ ನಿವಾರಣೆಯೆಂದರೆ ಅದರ ನಿರ್ಮೂಲನ, ಅಷ್ಟೆ. ನಮ್ಮ ರಾಷ್ಟ್ರದ ಪ್ರಜೆಗಳು ಪ್ರಜ್ಞಾಪೂರ್ವಕವಾಗಿ ಮಧ್ಯಪ್ರವೇಶ ಮಾಡಿ ಈ ರೋಗವನ್ನು ಉತ್ಪಾಟಿಸಬೇಕಾಗಿದೆ. ನಿಜವಾದ ಸೈದ್ಧಾಂತಿಕ ರಾಜಕೀಯಕ್ಕೆ ಅದು ಮೊದಲ ಹೆಜ್ಜೆ.



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ✆ : ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ✆ : ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ✆ : ೨೪೩೦೨

### ಲೋಕಾಯುಕ್ತ ದಾಳಿಯ ಸಾಫಲ್ಯ ಎಷ್ಟು?

ನಾವು ಇತ್ತೀಚಿನ ದಿನಗಳಲ್ಲಿ ಆಗಾಗ್ಗೆ ಪತ್ರಿಕೆಗಳಲ್ಲಿ ಬರುವ ಲೋಕಾಯುಕ್ತ ದಾಳಿಗಳ ಸಮಾಚಾರವನ್ನು ಓದುತ್ತಲೇ ಇರುತ್ತೇವಲ್ಲವೆ? ಆದರೆ ನಮ್ಮಲ್ಲಿ ಇದು ಎಷ್ಟರಮಟ್ಟಿಗೆ ಫಲಕಾರಿಯಾಗಿದೆ ಎಂಬುದರ ಬಗ್ಗೆ ಗಂಭೀರವಾದ ಚಿಂತನೆಯೇ ಆಗಿಲ್ಲ. ಈ ಲೋಕಾಯುಕ್ತ ದಾಳಿಗಳ ಸುದ್ದಿಯು ದಿನಪತ್ರಿಕೆಗಳಿಗೊಂದಿಷ್ಟು ಪ್ರಕಟಣಾ ಸಾಮಗ್ರಿಯಾಗುವಂತಿದೆ, ಅಷ್ಟೆ.

ಅಲ್ಲೊಬ್ಬ ತಹಸೀಲ್ದಾರ್, ಇಲ್ಲೊಬ್ಬ ಇಂಜಿನಿಯರ್; ಒಂದು ಕಡೆ ಒಬ್ಬ ಸಬ್ ಇನ್‌ಸ್ಪೆಕ್ಟರ್, ಮತ್ತೊಂದು ಕಡೆ ಒಬ್ಬ ಐ.ಎ.ಎಸ್. ಅಧಿಕಾರಿ – ಹೀಗೆ ಲೋಕಾಯುಕ್ತರ ದಾಳಿಯಲ್ಲೇನೋ ಸಿಕ್ಕಿಬೀಳುತ್ತಾರೆ, ನಿಜ; ಅವರ ಕೋಟ್ಯಾಂತರ ರೂಪಾಯಿಗಳ ಅಕ್ರಮ ಆಸ್ತಿಯೂ ಪತ್ತೆಯಾಗುತ್ತದೆ, ಸರಿ. ಆದರೆ ಇವರಿಗೆ ಜೈಲು ಶಿಕ್ಷೆಯಾಗಿರುವ ಪ್ರಸಂಗಗಳೆಷ್ಟು? ಎಲ್ಲೋ ಕೆಲವು ಸಂದರ್ಭಗಳಲ್ಲಿ ಸಿಕ್ಕಿಬಿದ್ದ ಅಪರಾಧಿಗಳನ್ನು ಮೇಲಧಿಕಾರಿಗಳು ಅಮಾನತ್ತುಗೊಳಿಸುವ ಸುದ್ದಿಯನ್ನಷ್ಟೇ ನಾವು ಪತ್ರಿಕೆಗಳಲ್ಲಿ ನೋಡುತ್ತೇವೆಯೇ ಹೊರತು ಅವರಿಗೆ ಕಠಿಣ ಸಜೆಯನ್ನು ವಿಧಿಸಿದ ಸುದ್ದಿಯೇ ನಾವು ಪತ್ರಿಕೆಗಳಲ್ಲಿ ನೋಡಿಲ್ಲ. ಅಂದಮೇಲೆ, ಇಂಥ ದಾಳಿಗಳಿಂದ ಏನು ಪ್ರಯೋಜನ? ನಮ್ಮಲ್ಲಿ ಬಿಗಿ ಕಾನೂನುಗಳಿಲ್ಲ. ಕಮ್ಯುನಿಸ್ಟ್ ರಷ್ಯಾದಲ್ಲಿ ಭ್ರಷ್ಟ ಅಧಿಕಾರಿಗಳನ್ನು ಗಲ್ಲಿಗೇರಿಸುವ ಅಥವಾ ಗುಂಡಿಟ್ಟು ಕೊಲ್ಲುವ ಪದ್ಧತಿ ಇದ್ದುದನ್ನು ನಾವು ಕೇಳಿದ್ದೇವೆ. ಭ್ರಷ್ಟಾಚಾರಿಗಳಿಗೆ ನಮ್ಮಲ್ಲಿ ಗಲ್ಲು ಶಿಕ್ಷೆ ಅಥವಾ ಮರಣದಂಡನೆಯ ವಿಷಯ ಹಾಗಿರಲಿ, ಸೆರೆಮನೆಯ ಶಿಕ್ಷೆಯೂ ಅಪರೂಪವಾಗಿದೆ. ಹಾಗಾಗಿ, ಈ ಲೋಕಾಯುಕ್ತ ದಾಳಿ, ಈ ಅಮಾನತ್ತು – ಇವೆಲ್ಲ ಕೇವಲ ಒಂದು ನಿಷ್ಪ್ರಯೋಜಕ ಕಸರತ್ತಾಗಿವೆ ಎಂಬುದು ನನ್ನ ಅನಿಸಿಕೆ.

*ದಾವಣಗೆರೆ* — ***ಶ್ರೀನಿವಾಸ್ ವಿ. ಸುತ್ರಾವೆ***

### ಭೂಕಂಪ

ಶ್ರೀ ಟಿ. ಆರ್. ಅನಂತರಾಮು ಅವರ ಲೇಖನ 'ಹೃದಯವನ್ನು ಕಂಪಿಸುವ ಭೂಕಂಪ' (ಮಾರ್ಚ್) ಇದರಿಂದ ಬಹಳಷ್ಟು ಮಾಹಿತಿ ಸಿಕ್ಕಿತು. ಅದರಂತೆ ಜಗತ್ತಿನ ಕೆಲವೊಂದು ಉದಾಹರಣೆಗಳು ಬಹಳ ಉತ್ತಮವಾಗಿದ್ದವು.

*ಸೋಲಾಪುರ* — ***ಎಸ್. ಎಂ. ಬಹ್ರಾಣಪುರೆ***

### ಸಂದರ್ಶನ

ಏಪ್ರಿಲ್ ತಿಂಗಳ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರೊಂದಿಗಿನ ಸಂದರ್ಶನದ ಬಗ್ಗೆ: ಗೊಡ್ಡು ಆಚರಣೆ, ಡಾಂಭಿಕ ಭಕ್ತಿಗಳಿಂದ ಜನರಲ್ಲಿ ತಪ್ಪು ಕಲ್ಪನೆ ಹುಟ್ಟಿಸುವ ಮಠ ಮಂದಿರಗಳು, ಶಾಂತಿ, ಪ್ರೀತಿಯ ವಿಶ್ವ ಮಾನವ ಧರ್ಮ ಹರಡುವ ಕೇಂದ್ರಗಳಾಗಿ ಪರಿವರ್ತಿತವಾಗಲು ನಿಡುಮಾಮಿಡಿ ಮಠ ನಾಂದಿ ಹಾಡಲಿ.

*ಕಾಸರಗೋಡು* — ***ಬಿ. ಶ್ರೀಧರ ಭಟ್, ಪೈವಳಿಕೆ***

### ಹೊಣೆ ಯಾರು?

ಏಪ್ರಿಲ್ ೨೦೦೦ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಡಾ|| ಎಂ. ವಿ. ನಾಡಕರ್ಣಿ ಅವರ ಲೇಖನ 'ಆರ್ಥಿಕೋನ್ನತಿ ಮತ್ತು ಪರಿಸರ ಸಮಸ್ಯೆ' ಪುಷ್ಟಿದಾಯಕ ಬೆಳವಣಿಗೆ ಸಾಧಿಸಲು ಭವಿಷ್ಯತ್ತು ಮತ್ತು ಪರಿಸರ ಗಮನದಲ್ಲಿರಿಸಿಕೊಳ್ಳಲು ಕರೆ ನೀಡಿದೆ. ವಿಕಾಸಹೊಂದಿದ ರಾಷ್ಟ್ರಗಳೇ ಈ ಪೃಥ್ವಿಯನ್ನು ಮಲಿನಗೊಳಿಸಿ ಬಡದೇಶಗಳ ಕಡೆಗೆ ಬೆಟ್ಟುಮಾಡಿ ತೋರಿಸುತ್ತಿವೆ. ಒಂದು ರೀತಿಯಲ್ಲಿ ತೋಳ ತಿಂದು ತೇಗಿ ಕುರಿ ಮೂತಿಗೆ ಗುದ್ದಿದಂತೆ. ರಕ್ಷಣೆ ಪ್ರತಿಯೊಂದು ದೇಶದ್ದೂ ಆಗಿದೆ.

*ಸೇಡಂ* — ***ಅಣ್ಣಾ ಸಾಗರ್ ಬಿ. ಆರ್.***




### ಭೂಕಂಪ

ಭೂಕಂಪದ ಬಗ್ಗೆ ಓದಿ ತುಂಬಾ ಬೇಸರವಾಯಿತು. ಸರ್ಕಾರದ ಬೊಕ್ಕಸದಲ್ಲಿ ಕೋಟಿಗಟ್ಟಲೆ ಹಣ ಸಂಗ್ರಹವಾದರೂ ಕೂಡಾ ಕಛ್‌ನ ಜನರಿಗೆ ಪರಿಹಾರವೇ ಸಿಗಲಿಲ್ಲ. ಬಿರುಕು ಬಿಟ್ಟ ಗೋಡೆಗಳನ್ನು ಒಂದು ಗೋಣಿ ಸಿಮೆಂಟು ತಂದು ಸರಿಮಾಡಲು ಕೂಡಾ ಸರ್ಕಾರದಿಂದ ಒಂದು ಪೈಸೆನೂ ಸಿಗಲಿಲ್ಲ. ಸ್ವತಃ ನನ್ನ ಸಂಬಂಧಿಕರೇ ಹೇಳಿದ ಮಾತು. ಒಂದು ಮನೆಗೆ ದೊರೆತ ಪರಿಹಾರ ನಿಧಿ ತಲಾ ರೂ. ೬೫೦. ಇದರಲ್ಲಿ ೧ ಗೋಣಿ ಸಿಮೆಂಟು ತಂದರೆ ಹೊಟ್ಟೆ ಬಟ್ಟೆಗೆ ಗತಿ ಏನು? ಹೀಗೆಯೇ ಆದರೆ ನಮ್ಮ ಸರ್ಕಾರ ಅಲ್ಲಿಯ ಜನರಿಗೆ ಪರಿಹಾರ ದೊರಕಿಸಲು ಸಾಧ್ಯವೇ ಇಲ್ಲ.

*ಕೊಡಿಯಾಲ್‌ಬೈಲ್* — ***ಮಣಿಮಾಲ ಶೆಟ್ಟಿ***

'ಕನ್ನಡದಲ್ಲಿ ಮಕ್ಕಳ ಸಾಹಿತ್ಯ - ಒಂದು ಮುನ್ನೋಟ' ಲೇಖನದಲ್ಲಿ ಶಿಶುಸಾಹಿತ್ಯ, ಬಾಲಸಾಹಿತ್ಯ, ಕಿಶೋರ ಸಾಹಿತ್ಯ ವಿಂಗಡಣೆ ಬಗ್ಗೆ ತಿಳಿಸಿದ್ದಾರೆ. ಇದು ಅನಗತ್ಯ. ೬ರಿಂದ ೧೦ ವರುಷದ ಮಗು ಬರೆದ ಕವನವನ್ನು ಓದಿ ಬೆನ್ನು ತಟ್ಟಬೇಕಾದವರು ಹಿರಿಯರೇ. ಅಕಾಡೆಮಿ, ಪುಸ್ತಕ ಪ್ರಕಟಣೆ ಮೂಲಕ ಇವರಿಗೆ ಪ್ರೋತ್ಸಾಹ ಕಷ್ಟಸಾಧ್ಯ. ಸಾಹಿತ್ಯ ಅಕಾಡೆಮಿಯಿಂದ ಯಾವುದೇ ಸುಧಾರಣೆ ಸಾಧ್ಯವಿಲ್ಲ. ಹಣವೊಂದು ಮಾತ್ರ ದಂಡ. ಈ ಎಲ್ಲಾ ಕಾರಣದಿಂದ ಈ ಲೇಖನ ಎಲ್ಲಾ ವಿಚಾರಗಳಲ್ಲಿ ಎಡವಿದೆ ಎಂಬುದು ನನ್ನ ಅಭಿಪ್ರಾಯ.

*ಆನೆಗುಂದಿ* — ***ಎ. ರಾಧಾಕೃಷ್ಣ***

'ಕನ್ನಡದಲ್ಲಿ ಮಕ್ಕಳ ಸಾಹಿತ್ಯ – ಒಂದು ಮುನ್ನೋಟ' ಕನ್ನಡ ಮಕ್ಕಳ ಸಾಹಿತ್ಯಕ್ಕಿರುವ ಸಾಮಾಜಿಕ ಜವಾಬ್ದಾರಿಯ ಕೊರತೆಯನ್ನು ವಿವರವಾಗಿ ವಿಶ್ಲೇಷಿಸಿದೆ. 'ಮಕ್ಕಳ ಸಾಹಿತ್ಯ ಅಕಾಡೆಮಿ'ಯ ರಚನೆಯ ಅಗತ್ಯತೆಯನ್ನು ಲೇಖನ ಒತ್ತಿ ಹೇಳಿದೆ. ಇದು ಬಲು ತುರ್ತಾಗಿ ಆಗಬೇಕಾಗಿರುವ ಕಾರ್ಯವಾಗಿದೆ.

*ಮೂಡಲಗಿ* — ***ಸಂಗಮೇಶ ಗುಜಗೊಂಡ***

ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ 'ನಡುಗಿದ ಭೂಮಿ ಮಿಡಿದ ಹೃದಯಗಳು..........' ಲೇಖನ ಬರೆದ ಡಾ|| ಬಿ. ಆರ್. ಮಂಜುನಾಥರಿಗೆ ಅಭಿನಂದನೆಗಳು.

ಮಾನ್ಯ ಲೇಖಕರು ''ಏಕೆ ಕುಣಿವೆ ತೂಕ ತಪ್ಪಿ ಸಾಕು ಕಾಲಭೈರವ'' ಎಂಬ ಪದ್ಯದ ಸಾಲನ್ನು ಉದ್ಧರಿಸಿ ಅದು ಬೇಂದ್ರೆಯವರ ಕವನ ಎಂದು ಹೇಳಿದ್ದಾರೆ. ಆದರೆ ಅದು ಬೇಂದ್ರೆಯವರದಲ್ಲ, ಸಿದ್ಧಯ್ಯ ಪುರಾಣಿಕರ ಕವನ ಎಂದು ಈ ಮೂಲಕ ಜ್ಞಾಪಿಸಬಯಸುತ್ತೇನೆ.

*ಗುಲಬರ್ಗಾ* — ***ಬಾಲಚಂದ್ರ ಜಯಶೆಟ್ಟಿ***

ಮಾರ್ಚ್ ತಿಂಗಳ 'ಹೊಸತು' ಸಂಚಿಕೆಯ ಶಾಂತಾರಾಮ ಸೋಮಯಾಜಿಯವರ ತಿಂಗಳ ಕಥೆ ತುಂಬಾ ಚೆನ್ನಾಗಿದೆ.

*ಬಿ.ಎಚ್.ಇ.ಎಲ್.* — ***ಡಿ. ಬಿ. ವಿನೋದ್‌ಕುಮಾರ್***

### ಸ್ಥಾಯೀ ಅತಂತ್ರವಾದರೆ ಸಾಹಿತ್ಯ ಬೇಗ ಸಾಯುತ್ತದೆ

ಶಾಂತಾರಾಮ ಸೋಮಯಾಜಿಯವರ 'ಪಂಡಿತ ಚಾತುರ್ಯಕಾ ಮತ್ತು ಮೊಸಳೆ' ಕಥೆ ಓದಿದೆ. ಉತ್ತಮ ಕಥೆ ಬರೆದುದಕ್ಕೆ ಧನ್ಯವಾದಗಳು. ಕಥೆ ಮುಕ್ತಾಯವಾಗಬೇಕಾದಲ್ಲಿ ಮುಕ್ತಾಯವಾಗದೆ ಮತ್ತೆ ಮುಂದುವರೆದು ಮೂಲ ಸ್ಥಾಯಿ ಕಳೆದುಕೊಂಡು ಬದಲಾಗುತ್ತದೆ. ಹೀಗಾಗುವುದರಿಂದ ದ್ವಂದ್ವ ಸ್ಥಾಯಿ ಅಭಿವ್ಯಕ್ತವಾಗುತ್ತದೆ.

*ಜಮಖಂಡಿ* — ***ಅರ್ಜುನ ಕೋರಟಕರ***

ಏಪ್ರಿಲ್ ತಿಂಗಳ 'ಹೊಸತು'ವಿನಲ್ಲಿ ಅರ್ಜುನ ಕೋರಟಕರರವರ ಕಥೆ ಸುಂದರವಾಗಿ ಮೂಡಿಬಂದಿದೆ. ಮನ ಮಿಡಿಯುವಂತಿದೆ. ಇದೇ ರೀತಿ ಉತ್ತರ ಕರ್ನಾಟಕದ ಲೇಖಕರಿಗೆ ಅವಕಾಶವನ್ನು ಕೊಡಿ. ಪ್ರಾದೇಶಿಕತೆ ಭೇದ ಬೇಡ. ಉತ್ತರ ಕರ್ನಾಟಕದ ಲೇಖಕರಲ್ಲಿ ಮಣ್ಣಿನ ಗುಣವಿದೆ, ನೋವಿದೆ. ಕಾಲ್ಪನಿಕ ಆಡಂಬರವಿಲ್ಲ, ಗಮನಿಸಿ.

*ಹುನ್ನೂರು* — ***ಕೇಶವ ಉಮರ್ಜಿ***

# ಕಂಪ್ಯೂಟರ್ ತಂತ್ರಜ್ಞಾನ ಮತ್ತು ಗಣೇಶ : ಸಂಬಂಧಗಳ ಮರುವ್ಯಾಖ್ಯಾನ




ಪುರೋಹಿತಶಾಹಿ ವ್ಯವಸ್ಥೆಯನ್ನು ಪ್ರತಿನಿಧಿಸುತ್ತಿರುವ ದೇವರು ಎನ್ನುವ ಧಾರ್ಮಿಕ ವ್ಯವಸ್ಥೆಯೊಂದು ಚರಿತ್ರೆಯುದ್ದಕ್ಕೂ ಮಾನವನ ಬದುಕಿನ ಪ್ರತಿಯೊಂದು ಹಂತದಲ್ಲೂ ನಿರ್ಣಾಯಕ ಪಾತ್ರವನ್ನು ವಹಿಸುತ್ತಿರುವುದು ಆಶ್ಚರ್ಯವೆನಿಸಿದರೂ ನಿಜವೇ ಆಗಿದೆ. ಸುಮಾರು ನೂರೈವತ್ತು ವರ್ಷಗಳ ಹಿಂದೆಯೇ ಈ ಧಾರ್ಮಿಕ ರಾಜಕೀಯವನ್ನು ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಏಂಗೆಲ್ಸ್ ಸರಿಯಾಗಿಯೇ ಗುರುತಿಸಿದ್ದರು. ಅವರ ಪ್ರಕಾರ, "ತನ್ನ ಆಯ್ಕೆಯಲ್ಲದ ಸ್ಥಿತಿಯಲ್ಲಿ ಬದುಕುತ್ತಿರುವ ಮನುಷ್ಯ ತನಗೇ ಅನ್ಯವಾದ ಸಾಂಸ್ಕೃತಿಕ ಆಚರಣೆಗಳಲ್ಲಿ ತೊಡಗಿರುವುದನ್ನಷ್ಟೇ ಧರ್ಮವು ತೋರಿಸುತ್ತದೆ. ಮನುಷ್ಯತ್ವಕ್ಕೇ ಎರವಾದವರಂತೆ ಬದುಕುತ್ತಿರುವ ಮಂದಿ ತಮ್ಮ ಇರುವಿಕೆಯನ್ನು ಸ್ಥಾಪಿಸುವ ವಿಧಾನವಾಗಿದೆ ಇದು. ಅದು ಹೆಚ್ಚಿನ ಸಂದರ್ಭಗಳಲ್ಲಿ ತಾನು ಈಗಿರುವ ರೂಪ ಮತ್ತು ಆಕಾರ ಪಡೆದುಕೊಳ್ಳಲು ಕಾರಣವಾದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನೇ ಉಪೇಕ್ಷಿಸುತ್ತದೆ ಮತ್ತು ಆ ಮೂಲಕ ಇಂಥ ಪರಿಸ್ಥಿತಿಯನ್ನು ಬದಲಾಯಿಸುವ ಮನುಷ್ಯನ ಸಾಮರ್ಥ್ಯ ಮತ್ತು ಪ್ರಯತ್ನಗಳಿಗೂ ತಡೆ ಹಾಕುತ್ತದೆ." ಇದರರ್ಥ ಮಾನವ ಏನೇ ಸಾಹಸ, ಸಂಶೋಧನೆ, ಆವಿಷ್ಕಾರಗಳನ್ನು ಮಾಡಿದರೂ ಅವುಗಳನ್ನು ಹೈಜಾಕ್ ಮಾಡುವ ಸಾಮರ್ಥ್ಯ ಧರ್ಮಕ್ಕೆ ಇದೆ ಎನ್ನುವುದೇ ಆಗಿದೆ. ಇದಕ್ಕೆ ಉತ್ತಮ ಉದಾಹರಣೆ ಇಂಟರ್‌ನೆಟ್‌ನ ಅಧಿದೇವತೆಯಾಗಿ ಗಣೇಶನನ್ನು ಆಯ್ಕೆ ಮಾಡಿರುವುದು.

ಭಾರತೀಯ ಮೂಲದ ಅಮೆರಿಕನ್ನರು ಇಂಟರ್‌ನೆಟ್‌ನ ಅಧಿದೇವತೆ ಗಣೇಶ ಎಂದು ಅಧಿಕೃತವಾಗಿ ಆಯ್ಕೆ ಮಾಡಿರುವ ವಿಚಾರ ಪತ್ರಿಕೆಗಳಲ್ಲಿ ಪ್ರಕಟಗೊಂಡಿದೆ. ಸ್ಯಾನ್‌ಫ್ರಾನ್ಸಿಸ್ಕೋದಲ್ಲಿರುವ ಭಾರತೀಯ ಮೂಲದ ಸಾಫ್ಟ್‌ವೇರ್ ಕಂಪೆನಿ 'ಟಿಐಇ'ನ ಮುಖ್ಯಸ್ಥ ಬಕುಲ್ ಜೋಷಿ ಗಣೇಶನ ಆಯ್ಕೆಯನ್ನು ಸಮರ್ಥಿಸಿಕೊಂಡಿದ್ದಾರೆ. ಮೌಸ್ ಅತ್ಯುತ್ತಮ ವಾಹನ ಎನ್ನುವುದು ಅವರ ಅಭಿಪ್ರಾಯ. ಇಲ್ಲಿರುವ ಇನ್ನೊಂದು ಒಳಾರ್ಥವೆಂದರೆ ಗಣೇಶನ ವಾಹನ ಇಲಿ ಎನ್ನುವುದು. ಕಂಪ್ಯೂಟರ್ ತಂತ್ರಜ್ಞಾನದಲ್ಲಿ ಆಲೋಚನೆಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಒಯ್ಯಲು ಮೌಸ್ ಬಳಸುತ್ತೇವೆ; ಆದ್ದರಿಂದ ಗಣೇಶನ ಹೆಸರೇ ಸೂಕ್ತ ಎನ್ನುವುದು ಸಿಲಿಕಾನ್ ಕಣಿವೆಯ ಪ್ರಮುಖ ಕಂಪೆನಿ ಸೆಲೆಕ್ಟಿಕಾದ ಮುಖ್ಯ ಆಡಳಿತಾಧಿಕಾರಿ ರಾಜ್ ಜಸ್ವಾ ಹೇಳಿಕೆ. ಕಲಿಕೆಯ ದೇವತೆ ಸರಸ್ವತಿ, ಹಣದ ದೇವತೆ ಲಕ್ಷ್ಮಿ, ಬುದ್ಧಿ ಹಾಗೂ ಧೈರ್ಯದ ದೇವತೆ ಹನುಮಂತ, ಹೀಗೆ ಹಲವಾರು ಹೆಸರುಗಳು ಭಾರತೀಯರಲ್ಲಿ ಚಾಲ್ತಿಯಲ್ಲಿವೆ. ಸಿಲಿಕಾನ್ ಕಣಿವೆಯ ಭಾರತೀಯರು ಗಣೇಶನನ್ನು ಆಯ್ಕೆ ಮಾಡಿಕೊಂಡಿದ್ದಾರೆ ಎನ್ನುವ ಜಸ್ವಾ ಹೇಳಿಕೆ ಅನೇಕ ಪ್ರಶ್ನೆಗಳಿಗೆ ಎಡೆಮಾಡಿಕೊಡುತ್ತದೆ.

ಮಾನವ ಬದುಕಿನ ಅವಶ್ಯಕತೆಗಳಾದ ಶಿಕ್ಷಣ, ಹಣ, ಬುದ್ಧಿ, ಸಾಮರ್ಥ್ಯ, ತಂತ್ರಜ್ಞಾನ ಇವುಗಳೆಲ್ಲದಕ್ಕೂ ಒಬ್ಬೊಬ್ಬ ದೇವತೆಗಳನ್ನು ಆಯ್ಕೆ ಮಾಡಿದವರು ಯಾರು ಮತ್ತು ಯಾಕೆ ಎನ್ನುವ ಪ್ರಶ್ನೆಗಳು ಸಹಜವಾಗಿಯೇ ಹುಟ್ಟಿಕೊಳ್ಳುತ್ತವೆ. ಇಂಥ ಪ್ರಶ್ನೆಗಳಿಗೆ ಉತ್ತರಿಸಬೇಕಾದರೆ ಭಾರತದ ಚರಿತ್ರೆಯುದ್ದಕ್ಕೂ ನಡೆದುಬಂದ ಸಾಂಸ್ಕೃತಿಕ ಸ್ಥಿತ್ಯಂತರಗಳ ಹಾಗೂ ಸಾಂಸ್ಕೃತಿಕ ರಾಜಕೀಯದ ಅರಿವು ಇರಬೇಕಾಗುತ್ತದೆ. ಅದೇ ರೀತಿ ಭಾರತ, ಭಾರತೀಯ, ಭಾರತೀಯ ಸಂಸ್ಕೃತಿ, ನಮ್ಮ ಪರಂಪರೆ ಮುಂತಾದ ಪರಿಕಲ್ಪನೆಗಳ ಸಡಿಲೀಕೃತ ವ್ಯಾಖ್ಯಾನದ ಹಿಂದಿರುವ ಉದ್ದೇಶಗಳನ್ನು ಸ್ಪಷ್ಟವಾಗಿ ತಿಳಿದಿರಬೇಕಾಗುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಅಧಿದೇವತೆಯಾಗಿ ಗಣೇಶ ಸರ್ವಾನುಮತದಿಂದ ಆಯ್ಕೆಗೊಂಡಿರುವುದನ್ನೂ ಈ ಹಿನ್ನೆಲೆಯಿಂದಲೇ ನೋಡಬೇಕಾಗುತ್ತದೆ.

ಗಣೇಶ ಆರಂಭದಲ್ಲಿ ಅವೈದಿಕ ದೇವತೆಯಾಗಿದ್ದು ಕ್ರಮೇಣ ವೈದಿಕ ಪರಂಪರೆಯೊಳಗೆ ಪ್ರವೇಶ ಪಡೆದ ದೇವತೆ. ಗಣೇಶನನ್ನು ಕೇವಲ ದೇವತೆಯನ್ನಾಗಿ ಮಾತ್ರ ನೋಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಪುರೋಹಿತ ಶಾಹಿ ವ್ಯವಸ್ಥೆಯು ತನ್ನ ಹಿತಾಸಕ್ತಿಗಳ ಈಡೇರಿಕೆಗೆ ಗಣೇಶನನ್ನು ವೇದಿಕೆಯನ್ನಾಗಿ ಬಳಸಿಕೊಂಡಿತು. ಗಣೇಶನ ಸೃಷ್ಟಿಯೂ ಈ ಉದ್ದೇಶಕ್ಕಾಗಿಯೇ ಆಯಿತು. ಗಣೇಶನ ಮೂಲಕ ಸಮಾಜದಲ್ಲಿ ಯಜಮಾನಿಕೆಯನ್ನು ಸ್ಥಾಪಿಸುವ ಪ್ರಯತ್ನಗಳು ವ್ಯವಸ್ಥಿತವಾಗಿ ನಡೆದುಬಂದವು. ಈ ಪ್ರಯತ್ನಗಳು ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಯಥಾಪ್ರಕಾರ ಕಾಯ್ದುಕೊಂಡುಬರುವ ಜವಾಬ್ದಾರಿಯನ್ನು ಹೊತ್ತವು. ಸಂಪ್ರದಾಯವಾದಿ ಚಿಂತನೆ ಗಣೇಶನ ಪರ ವಕಾಲತ್ತು ವಹಿಸಿ ಆಧುನಿಕ ಜಗತ್ತಿನಲ್ಲೂ ನೆಲೆ ಕಂಡುಕೊಳ್ಳುವಂತೆ ಮಾಡಿತು. ಇದು ಸಂಪ್ರದಾಯದ ಹಿನ್ನೆಲೆಯಿಂದ ಆಧುನಿಕತೆಯನ್ನು ಡಿಫೈನ್ ಮಾಡುವ ಹಾಗೂ ಆಧುನಿಕತೆಯನ್ನು ಸಂಪ್ರದಾಯಗೊಳಿಸುವ ಪ್ರಯತ್ನವಾಗಿ ಕಂಡುಬರುತ್ತದೆ.

ಕೆ. ಮೋಹನ್‌ಕೃಷ್ಣ ರೈ

ಮಾನವ ಇಂದು ಕಂಪ್ಯೂಟರ್ ತಂತ್ರಜ್ಞಾನದಿಂದಾಗಿ ಈವರೆಗೆ ಸಾಧಿಸಲು ಅಸಾಧ್ಯವಾಗಿದ್ದ ಅನೇಕ ವಿಚಾರಗಳಲ್ಲಿ ಯಶಸ್ಸನ್ನು ಸಾಧಿಸಿದ್ದಾನೆ. ಈ ಯಶಸ್ಸಿಗೆ ಆತನ ಕಠಿಣ ಶ್ರಮ, ಸಾಮರ್ಥ್ಯಗಳಷ್ಟೇ ಕಾರಣವೇ ಹೊರತು ಪುರೋಹಿತಶಾಹಿ ವ್ಯವಸ್ಥೆಯಲ್ಲ ಅಥವಾ ಕಂಪ್ಯೂಟರ್ ತಂತ್ರಜ್ಞಾನದ ಅಧಿದೇವತೆಯಾಗಿ ಆಯ್ಕೆಗೊಂಡ ಗಣೇಶನಲ್ಲ. ಆದರೆ ಹಿಂದಿನಿಂದಲೂ ಸಮಾಜದಲ್ಲಿ ತಮ್ಮ ಯಜಮಾನಿಕೆಯನ್ನು ಉಳಿಸಿಕೊಂಡು ಬಂದಿರುವ ಜಾತಿ ಮತ್ತು ವರ್ಗಗಳಿಗೆ ಮುಂದುವರಿದ ತಂತ್ರಜ್ಞಾನ ಹಾಗೂ ವಿಜ್ಞಾನದ ಮೇಲೆಯೂ ಸವಾರಿ ಮಾಡುವುದು ಅನಿವಾರ್ಯವಾಗಿ ಕಂಡಿರಬೇಕು. ಇದು ಮಾನವ ತನ್ನ ಬುದ್ಧಿ, ಸಾಮರ್ಥ್ಯದ ಮೇಲೆ ತಾನು ವಿಶ್ವಾಸ ಇಡದಂತೆ ಮಾಡುವ ನಿಯಂತ್ರಣ ಶಕ್ತಿ ಇನ್ನೊಂದಿದೆ ಎಂಬುದನ್ನು ಪ್ರಚಾರಪಡಿಸುವ ಹಾಗೂ ಸಮಾಜದ ಮೇಲು-ಕೀಳು ಭಾವನೆಗಳನ್ನು ಆಧುನಿಕ ಸಂದರ್ಭದಲ್ಲೂ ಮುಂದುವರಿಸಿಕೊಂಡು ಹೋಗುವ ಪ್ರಯತ್ನವೇ ಆಗಿದೆ. ಅದೇ ರೀತಿ ಇದು ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ಒಪ್ಪಂದವಾಗಿದ್ದು ಸಮಾಜವನ್ನು ಗೊಂದಲಕ್ಕೀಡುಮಾಡುವ ಉದ್ದೇಶವನ್ನೂ ಹೊಂದಿದೆ. ಆಧುನಿಕತೆಯೊಡನೆ ಹೊಂದಾಣಿಕೆ ಮಾಡಿಕೊಳ್ಳಲು ಸಂಪ್ರದಾಯವಾದಿಗಳು ಇಷ್ಟಪಡುವುದಿಲ್ಲ. ಅವರ ಪ್ರಕಾರ ಆಧುನಿಕತೆಯು ಸಂಸ್ಕೃತಿಯನ್ನು, ಪ್ರಕೃತಿಯನ್ನು ನಾಶಪಡಿಸುತ್ತದೆ. ಆದರೆ ಆಧುನಿಕತೆಯನ್ನು ಸಂಪ್ರದಾಯದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುವ ವಿಚಾರ ಬಂದಾಗ ಅಥವಾ ಆಧುನಿಕತೆಯನ್ನು ತಮ್ಮದಾಗಿಸಿಕೊಂಡು ಅದಕ್ಕೆ ಸಂಪ್ರದಾಯದ ಪಟ್ಟ ಕಟ್ಟುವ ಸಂದರ್ಭದಲ್ಲಿ ಯಾವ ರೀತಿಯ ಒಡಂಬಡಿಕೆಗೂ ಸಂಪ್ರದಾಯವಾದಿಗಳು ಸಮ್ಮತಿಸುತ್ತಾರೆ.

ಕಂಪ್ಯೂಟರ್ ತಂತ್ರಜ್ಞಾನ ಆಧುನಿಕತೆಯನ್ನು ಪ್ರತಿನಿಧಿಸಿದರೆ ಗಣೇಶ ಪುರೋಹಿತಶಾಹಿ ವ್ಯವಸ್ಥೆಯ ಅಥವಾ ಸಂಪ್ರದಾಯದ ಸಂಕೇತ. ಹೀಗಿರುವಾಗ ಗಣೇಶ ಕಂಪ್ಯೂಟರ್ ತಂತ್ರಜ್ಞಾನದ ಅಧಿದೇವತೆಯಾಗಲು ಹೇಗೆ ಸಾಧ್ಯ ? ಈ ಪ್ರಶ್ನೆಗೆ ಉತ್ತರಿಸುವುದು ಕಷ್ಟದ ಕೆಲಸವಲ್ಲ. ಯಾವುದೇ ಮುಂದುವರೆದ ಕ್ಷೇತ್ರದಲ್ಲೂ ತಮ್ಮ ಮೇಲುಗೈಯನ್ನು ಸಾಧಿಸುವ, ಹತೋಟಿಗೆ ತರುವ ಪ್ರಯತ್ನವನ್ನು ಮೇಲ್ವರ್ಗ ಹಾಗೂ ಜಾತಿಗಳು ಮಾಡುತ್ತಿರುತ್ತವೆ. ಆಧುನಿಕತೆಯ ಎಲ್ಲ ಸೌಲಭ್ಯ ಮತ್ತು




ಸವಲತ್ತುಗಳನ್ನು ಪಡೆದುಕೊಂಡ ಬಳಿಕ ಆಧುನಿಕತೆಯನ್ನು ಟೀಕಿಸುವ ಕೆಲಸವನ್ನೂ ಸಂಪ್ರದಾಯವಾದಿಗಳು ಮಾಡುತ್ತಿರುತ್ತಾರೆ. ತಮ್ಮ ಸಂಪ್ರದಾಯ ವ್ಯವಸ್ಥೆಯೊಳಗಿನ ಬಿಕ್ಕಟ್ಟುಗಳು, ವೈರುಧ್ಯಗಳು, ಶೋಷಣೆ ಮುಂತಾದವು ಸಂಪ್ರದಾಯವಾದಿಗಳಿಗೆ ಪ್ರಾಮುಖ್ಯವೆನಿಸುವುದೇ ಇಲ್ಲ.

ಕಂಪ್ಯೂಟರ್ ಯುಗದ ಹರಿಕಾರರಾದ ಹಾಗೂ ವಿಜ್ಞಾನ, ತಂತ್ರಜ್ಞಾನಕ್ಕಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟಿರುವ ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳು ಧಾರ್ಮಿಕ ನಂಬಿಕೆಗಳಿಗೆ ಒಳಗಾಗಿರುವುದು ಆಶ್ಚರ್ಯದ ಸಂಗತಿಯಾದರೂ ಆಶ್ಚರ್ಯ ಹುಟ್ಟಿಸುವುದಿಲ್ಲ. ಏಕೆಂದರೆ ವಿಜ್ಞಾನ ಮತ್ತು ತಂತ್ರಜ್ಞಾನ ಯಾರ ಕೈಯಲ್ಲಿದೆ ಹಾಗೂ ಅದು ಯಾರಿಗೋಸ್ಕರ ಉಪಯೋಗಿಸಲ್ಪಡುತ್ತದೆ ಎನ್ನುವ ಪ್ರಶ್ನೆಗಳಿಗೆ ಉತ್ತರ ಹುಡುಕುವಾಗ ಜಾತಿ, ವರ್ಗ, ಭಾಷೆ ಹಾಗೂ ಪ್ರದೇಶ ಕೇಂದ್ರಿತ ವಿವರಣೆಗಳೇ ಕಂಡುಬರುತ್ತವೆ. ವಿಜ್ಞಾನ, ತಂತ್ರಜ್ಞಾನ ಕ್ಷೇತ್ರದಲ್ಲಿನ ಮಹತ್ತರ ಸಾಧನೆಗಳು ನೇರವಾಗಿ ಧಾರ್ಮಿಕ ಚೌಕಟ್ಟಿನೊಳಗೆ ವ್ಯಾಖ್ಯಾನಗೊಳ್ಳದಿದ್ದರೂ, ಪುರೋಹಿತ ಶಾಹಿಯ ಹಾಗೂ ಬಂಡವಾಳಶಾಹಿಯ ಒತ್ತಡ, ಒತ್ತಾಯಗಳಿಗೆ ಮಣಿಯಲೇಬೇಕಾಗುತ್ತದೆ. ಇಂಥ ಒತ್ತಡ, ಒತ್ತಾಯಗಳು ಆಧುನಿಕ ಸಂದರ್ಭದಲ್ಲಷ್ಟೇ ಅಲ್ಲದೆ ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭಗಳಲ್ಲೂ ಇತ್ತು ಎನ್ನುವುದಕ್ಕೆ ಸಾಕಷ್ಟು ಚಾರಿತ್ರಿಕ ಆಧಾರಗಳು ಲಭ್ಯವಿವೆ. ಒಟ್ಟಾರೆಯಾಗಿ ಇದು ಮಾರ್ಕ್ಸ್ ಮತ್ತು ಏಂಗೆಲ್ಸ್ ಹೇಳಿರುವಂತೆ ಮನುಷ್ಯನ ಬುದ್ಧಿ, ಸಾಮರ್ಥ್ಯ ಮತ್ತು ಪ್ರಯತ್ನಗಳಿಗೆ ಧಾರ್ಮಿಕ ವಿವರಣೆ ನೀಡುವ ಹಾಗೂ ಅವುಗಳನ್ನು ಪುರೋಹಿತಶಾಹಿ ವ್ಯವಸ್ಥೆಯೊಳಗೆ ಸೇರಿಸಿಕೊಳ್ಳುವ ವ್ಯವಸ್ಥಿತ ಷಡ್ಯಂತ್ರವೇ ಆಗಿದೆ.

**ಕೆ. ಮೋಹನ್‌ಕೃಷ್ಣ ರೈ**
ಅಧ್ಯಾಪಕ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಉಡುಗೊರೆ

ನಿನ್ನ ಚರಿತ್ರೆಯ
ಇತಿವೃತ್ತವನ್ನು
ನೆನಪಿಸಿಕೊಂಡು ಹಾಡಿಕೊಳ್ಳುವಾಗ
ಸಂತೋಷ ಉಕ್ಕಿ ಕ್ಷಣ ಮೈ ಮರೆತಾಗ
ಸಾವಿನ ರುಚಿ ನೀಡಿದಿಯಲ್ಲ ತಾಯೇ
ನೀನೆಂಥ ಮಾಯೆ !

ಭವ್ಯ ಭಾರತದ ಕನಸು ಹೊತ್ತು,
ಮತ್ತೆ ಎಂದಿನಂತೆ
ನಿನ್ನ ಆಚರಣೆ - ಆರಾಧನೆ - ಹಬ್ಬವನ್ನು
ಮೈ ಉಬ್ಬಿ ತಬ್ಬಿಕೊಳ್ಳುವ ಕಾಲಕ್ಕೆ
ನಿರೀಕ್ಷಿಸಲೂ ಸಹ್ಯಗೊಳ್ಳದ ನೀನು
ಪರಕೀಯರಂತೆ ನುಗ್ಗಿ
ಜಗ್ಗಿ ದಬ್ಬಿಬಿಟ್ಟೆಯಲ್ಲ ಜೀವ ಹರಿದು ?
ಯಾಕೆ ''ಅವ್ವ'' ಮನಸು ಕಲ್ಲು ಮಾಡಿಬಿಟ್ಟೆ !
ಜೀವಗಳ ಹಳಿದು, ಹಿಳಿದು
ಹಳ್ಳಗಳ ಪ್ರಪಾತಕ್ಕೆ ಹರಿಯಬಿಟ್ಟೆ ?
ಪಾಪಕ್ಕೆ ಪ್ರತಿಕ್ರಿಯೆಯೇ ನಿನ್ನದು,
ಹೆತ್ತು ಹೊತ್ತದಕ್ಕೆ ಸೈರಣೆಯಾಗಲಿಲ್ಲವೆ ?
ಹೇಳಮ್ಮ, ಬಸಿರ ಒತ್ತಿ ಹಿಂಸನೆಟ್ಟ ನಿನ್ನ



*(ಜನವರಿ ೨೬, ೨೦೦೧ ರಂದು ಗುಜರಾತ್‌ನಲ್ಲಿ ಭೂಮಿ ನಡುಗಿದ ಪ್ರಸಂಗ)*

ಮಕ್ಕಳ ಅಧೋಗತಿಯ ನೆತ್ತರ ಬೇಕಿತ್ತೆ ?
ಹಿಂಗಿತ್ತೆ ಒಡಲಕಿಚ್ಚು ?

ಎಷ್ಟು ಆಕ್ರಂದನ, ಏನು ಬೊಬ್ಬೆಗಳ ವಿರಾಟ
ಗುಬ್ಬಿ ಗೂಡುಗಳಲ್ಲಿ, ಹಕ್ಕಿ ಕೊಂಬೆರೆಂಬೆಗಳಲ್ಲಿ
ಬಿಕ್ಕಿ ಬಿಕ್ಕಿ ತನ್ನೊಲವನ್ನೇ ಕುಕ್ಕಿ ಕುಕ್ಕಿ
ಪ್ರಾಣಹರಿದು, ಒಂದು ಸಲ ಎಲ್ಲ ನುಂಗಿ,
ಬಿಡುಗಡೆಗೊಳ್ಳುವ ಭಾವ : ಮಣ್ಣ

ಮಲೆಗೆ ಮೆದ್ದುಹೋಯಿತು - ಇನ್ನೇನಾಯಿತು ?
ತಾಯ ಜಬ್ಬಿಹೋದ ರಕ್ತಕ್ಕೆ
ಮಗ ಬಣ್ಣ ಬಳೆದುಕೊಂಡ ಬಾಳಪುಟಕ್ಕೆ
ಗಂಡ-ಹೆಂಡಿರ ಮಧ್ಯೆ ಒಂದನುಳಿದು
ಬಿತ್ತು ಬೆಂಕಿ ಇದ್ದ ಸೂತ್ರಕ್ಕೆ :
ಹಸುಳೆ ಸಾವ ಕಂಡು
ಬಸವಳಿದ ತಾಯ - ತಂದೆ
ಏನಂಥ ಹರಸಬೇಕು ಭರತಮಾತೆಗೆ
ಅವಳು ಕೊಟ್ಟ ಈ 'ಉಡುಗೊರೆ'ಗೆ !

**ಡಾ. ಗುಂಡಣ್ಣ ಕಲಬುರ್ಗಿ**
ಕನ್ನಡ ವಿಭಾಗ, ಕಲೆ ಮತ್ತು ವಾಣಿಜ್ಯ ಮಹಾವಿದ್ಯಾಲಯ
ಮೂಡಲಗಿ - ೫೯೧೩೧೨, ಬೆಳಗಾವಿ

# ಮೇ ದಿನದ ಚಿಂತನೆಗಳು




ಕಾರ್ಮಿಕನ ಪಾತ್ರ ಒಂದು ಸಮಾಜದ ಆರ್ಥಿಕ ವ್ಯವಸ್ಥೆಯಲ್ಲಿ ಅವಿಭಾಜ್ಯ ಅಂಗ. ಈ ಸ್ವತಃಸಿದ್ಧವೆನಿಸುವ ಮಾತನ್ನು ಪುನಃ ಜ್ಞಾಪಿಸುವ ಅಗತ್ಯ ಈಗ ಒದಗಿಬಂದಿದೆ ! ಉತ್ಪಾದನಾ ಕ್ರಮ ಹೆಚ್ಚು ಹೆಚ್ಚು ವೈಜ್ಞಾನಿಕ ಮಾರ್ಗವನ್ನು, ತಾಂತ್ರಿಕ ಜಟಿಲತೆಯನ್ನು ಅಳವಡಿಸಿಕೊಂಡಂತೆಲ್ಲಾ, ಕೆಲವರು, ಶ್ರಮಜೀವಿ ಎಂದು ನಾವು ಇಲ್ಲಿಯವರೆಗೆ ಕಲ್ಪಿಸಿಕೊಂಡಿದ್ದ ಒಂದು ಪ್ರಕಾರ ಹೆಚ್ಚು ಹೆಚ್ಚು ಅಸಂಗತವೆಂದು ಕೆಲವು ಮೂಲೆಗಳಲ್ಲಿ ಗುಲ್ಲೆಬ್ಬಿಸುತ್ತಿದ್ದಾರೆ. ಐತಿಹಾಸಿಕವಾಗಿ ಆಧುನಿಕ ಅರ್ಥಶಾಸ್ತ್ರದ ಹರಿಕಾರರು ಶ್ರಮದ ಪಾತ್ರವನ್ನು ಗುರುತಿಸಿದ್ದರೂ ಕೈಗಾರಿಕಾ ಕ್ರಾಂತಿಯ ತೀವ್ರತೆಯು ಬೆಳೆದಂತೆ, ಶ್ರಮಿಕನನ್ನೂ ಶ್ರಮವನ್ನೂ ಅರ್ಥಶಾಸ್ತ್ರದ ಬಹುಮುಖ್ಯ ಭಾಗವಾಗಿ ಅಧ್ಯಯನ ಮಾಡಲಾರಂಭಿಸಿದರು. ಕಾರ್ಲ್ ಮಾರ್ಕ್ಸ್ ಕೂಲಿಕಾರನ ಶೋಷಣೆಯನ್ನು ಬಯಲಿಗೆಳದ ಮೇಲಂತೂ, ಈ ಚಿಂತನೆಯ ವಿರೋಧಿಗಳು ತಮ್ಮದೇ ಪರ್ಯಾಯ ತತ್ವವನ್ನು ಪುಷ್ಟೀಕರಿಸಿ ಹೊಸ ಹೊಸ ಸಿದ್ಧಾಂತಗಳನ್ನು ಸಾರಲಾರಂಭಿಸಿದಂತೆ ಈ ಚರ್ಚೆ ಅರ್ಥಶಾಸ್ತ್ರವನ್ನೂ ಮೀರಿ ಸಮಾಜಶಾಸ್ತ್ರ, ಇತಿಹಾಸ, ರಾಜಕೀಯಕ್ಕೂ ಪ್ರಭಾವಯುತವಾಗಿ ಹರಿಯಲಾರಂಭಿಸಿತು. ಇಂದು ಉತ್ಪಾದನೆಗೆ ಬೇಕಾಗಿರುವುದು ಶ್ರಮಜೀವಿಯಲ್ಲ, 'ತಿಳಿವಳಿಕೆಯುಳ್ಳ' ಕೆಲಸಗಾರ ಎಂದು ಹೇಳಲಾರಂಭಿಸಿದ್ದಾರೆ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ 'ಶ್ರಮ'ವೆಂದರೇನೆಂದು ಹೊಸ ನಿರೂಪಣೆ ಬರೆಯಲಾಗುತ್ತಿದೆ.

**ಕಾರ್ಮಿಕ ಚಳವಳಿಯ ಚಾರಿತ್ರಿಕ ಹಿನ್ನೆಲೆ**

ಗಿಲ್ಡ್, ಟ್ರೇಡ್ ಎಂಬ ಹೆಸರು ಹೊತ್ತ ಸಣ್ಣ ಸಣ್ಣ ಕೈಗಾರಿಕಾ ಘಟಕಗಳು ಹುಟ್ಟಿಕೊಂಡು, ಜೊತೆಗೇ ಎಲ್ಲೆಲ್ಲಿಂದಲೋ ಬಂದ ವಿಭಿನ್ನ ಹಿನ್ನೆಲೆಯ ಕಾರ್ಮಿಕರು ತಮ್ಮ ವಿಭಿನ್ನತೆಯನ್ನು ಮರೆತು ಪರಸ್ಪರ ಕಾರ್ಮಿಕರೆಂದೇ ಗುರುತಿಸಿಕೊಂಡಾಗ ಅವರ ಟ್ರೇಡ್ ಯೂನಿಯನ್ನುಗಳು ಹುಟ್ಟಿಕೊಂಡವು. ಮೊದಮೊದಲಿಗೆ ಈ ಯೂನಿಯನ್ನುಗಳ ಉದ್ದೇಶ ಕೆಲಸ ಮಾಡುವ ಪರಿಸರ, ನಿಗದಿಯಾದ ಕೆಲಸದ ವೇಳೆ, ಅನಾರೋಗ್ಯ – ಅನಾನುಕೂಲಗಳ ದಾರುಣ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವುದೇ ಆಗಿತ್ತು. ಅನುಸರಿಸಿದ ಮಾರ್ಗ ಮಾಲಿಕನಲ್ಲಿ ಒಟ್ಟಾಗಿ ಪ್ರಾರ್ಥಿಸಿಕೊಳ್ಳುವುದರಿಂದ ಪ್ರಾರಂಭವಾಗಿ, ಕ್ರಮೇಣ ಕೂಲಿಯನ್ನು ಉತ್ತಮಪಡಿಸಿಕೊಳ್ಳಲು ಅದಕ್ಕಾಗಿ ಹೋರಾಟ ಮಾಡುವ ರೂಪ ಪಡೆದುಕೊಂಡಿತು. ಬೃಹತ್ ಕೈಗಾರಿಕೆಗಳು, ಬೃಹತ್ ಕಾರ್ಮಿಕ ಸಂಘಗಳು, ಆಧುನಿಕ ನಗರಗಳು, ಕೊಳಚೆ ಪ್ರದೇಶಗಳು, ಹಳ್ಳಿಯಿಂದ ಪಟ್ಟಣಕ್ಕೆ ನಿರಂತರ ವಲಸೆ, ಇವೆಲ್ಲಾ ವಿರಾಟ್ ಸ್ವರೂಪ ತಾಳಿತು. ಇದು ಲಾಭೈಕ ದೃಷ್ಟಿಯ ಬಂಡವಳಿಗ ಮಾಲಿಕ ಮತ್ತು ಕೂಲಿಕಾರರ ನಡುವೆ ಸೌಹಾರ್ದಯುತವಲ್ಲದ ವೈಷಮ್ಯಯುತ ವೈಪರೀತ್ಯದ ಸಂಬಂಧವಾಗಿ ರೂಪ ತಾಳಿತು, ರಾಜಕೀಯ ಸ್ವರೂಪ ತಾಳಿತು. ಕಾರ್ಮಿಕ ತನ್ನ ಹಿತರಕ್ಷಣೆಗೆ ಪ್ರಭುತ್ವದ ಮೇಲೂ ಹಕ್ಕು ಸ್ಥಾಪಿಸುವ ಅಗತ್ಯ ಕಂಡುಬಂತು. ಎರಡೂ ಬಣಗಳು ರಾಜಕೀಯ ಅಧಿಕಾರಕ್ಕೆ ಲಗ್ಗೆ ಹಾಕುವ ಚಟುವಟಿಕೆಗಳಲ್ಲಿ ತೊಡಗಬೇಕಾಯಿತು. ಕೈಗಾರಿಕಾ ಕಾರ್ಮಿಕರು ತಮ್ಮ ಸಂಘಗಳ ಒಕ್ಕೂಟವನ್ನು ಕಟ್ಟಿಕೊಂಡು, ರಾಜಕೀಯ, ಸಾಮಾಜಿಕ, ಆರ್ಥಿಕ ಹಕ್ಕುಗಳಿಗಾಗಿ ಹೋರಾಡುವ, ಸೆಣಸಾಡುವ ಪ್ರಬಲ ಶಕ್ತಿಯಾಗಿ ಬೆಳೆದರು. ಈ ಹಾದಿಯಲ್ಲಿ ಹುಟ್ಟಿಕೊಂಡ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ ತತ್ವಗಳ, ಇಸಂಗಳ, ಚರ್ಚೆ ಪ್ರತ್ಯೇಕ ವಿಷಯ.

**ಉತ್ಪಾದನೆಯ ಹೊಸ ಆಯಾಮ**

ಇಂದು ವಿಶ್ವ ವಾಣಿಜ್ಯ ಸಂಸ್ಥೆ, ಉದಾರೀಕರಣ, ಮಾಹಿತಿ ತಂತ್ರಜ್ಞಾನ ಹಾಗೂ ಬಹುರಾಷ್ಟ್ರೀಯ ಕಂಪೆನಿಗಳ ರಾದ್ಧಾಂತದ ನಡುವೆ, ಸಾಮ್ಯವಾದ – ಸಮಾಜವಾದಗಳು ಪತನವಾಗಿವೆ ಎಂಬ ಗುಲ್ಲಿನ ಸಂದರ್ಭದಲ್ಲಿ ಕಾರ್ಮಿಕ-ಕಾರ್ಮಿಕ ಸಂಘ-ಕಾರ್ಮಿಕ ಚಳುವಳಿಗಳು ತಮ್ಮ ಮೂಲ ಅರ್ಥ ಕಳೆದುಕೊಳ್ಳುತ್ತಿವೆಯೇ ? ಯಾವುದೇ ಒಂದು ಜನಸಮುದಾಯದಲ್ಲಿ ಸಂಖ್ಯೆಯಲ್ಲಂತೂ ಇಲ್ಲಿಯವರೆಗೆ ಕಾರ್ಮಿಕರೇ ಹೆಚ್ಚು ಪಾಲು ಇದ್ದು ಇನ್ನು ಮುಂದೆ ಇವರು ಕಾರ್ಮಿಕರಾಗಿ ಅಸ್ತಿತ್ವ ಕಳೆದುಕೊಳ್ಳುವುದು ನಿಜವಾದರೆ, ಅವರು ಪಡೆಯಬಹುದಾದ ಹೊಸ ಸ್ವರೂಪವೇನು ? ಕಾರ್ಖಾನೆಗಳೆಲ್ಲಾ ಮಾಹಿತಿ ತಂತ್ರಜ್ಞಾನದನ್ವಯ ರೋಬೋಗಳ ಬಳಕೆಯಿಂದ ಅತಿ ಕಡಿಮೆ ಸಂಖ್ಯೆಯ ಬುದ್ಧಿವಂತ ಕಾರ್ಮಿಕರನ್ನು ಬಳಸಿ, ಉತ್ಪಾದನಾ ಪ್ರಕ್ರಿಯೆ ನಡೆಸುವುದು ಸಾಧ್ಯವಾಗಿದೆ. ಕೆಲವು ಕ್ಷೇತ್ರಗಳಲ್ಲಿ ಈಗ 'ಆಟೋಮೇಷನ್' ಪದ ಇದನ್ನು ಸಂಗ್ರಹವಾಗಿ ತಿಳಿಸುತ್ತದೆ. ಹಾಗಿದ್ದರೆ ಬಹುಸಂಖ್ಯಾತ ಜನ ಸೃಜನಶೀಲವಾಗಿ ಉಳಿಯಬೇಕಾದರೆ ಏನು ಮಾಡಬೇಕು ? ಉತ್ಪಾದನೆಯ ಪ್ರಕ್ರಿಯೆಯ ಸರಪಳಿಯಲ್ಲಿ ಕಾರ್ಮಿಕ ತನ್ನ ಪಾತ್ರವನ್ನು ಕಳೆದುಕೊಂಡಾನೆ ? ಉತ್ಪಾದಿಸಿದ ಸರಕನ್ನು ಕೊಳ್ಳುವವರು ಯಾರು ? ಸಂಪಾದನೆಯೇ ಇಲ್ಲವಾದರೆ ಕೊಳ್ಳುವುದು ಹೇಗೆ ? ಕೊಳ್ಳದಿದ್ದರೆ ಉತ್ಪಾದನೆ ಏಕೆ ? ಅದು ಮುಂದುವರಿಯುವುದು ಹೇಗೆ ? ಟ್ರೇಡ್ ಇಲ್ಲದೆ ಟ್ರೇಡ್ ಯೂನಿಯನ್ ಹೇಗೆ ? ಈ ಪ್ರಶ್ನೆಗಳಾವುವೂ ಅವಾಸ್ತವವಲ್ಲ. ಉತ್ಪಾದನೆ ಇಂದಿನ ಹೊಸ ಘಟ್ಟದಲ್ಲಿ ಇಕ್ಕಟ್ಟಿನ ತಿರುವಿನಲ್ಲಿ ಸಂದಿಗ್ಧ ಪರಿಸ್ಥಿತಿಯನ್ನು ತಲುಪಿದಂತಿದೆ. ಅದು ತನ್ನ ಸಾಮಾಜಿಕ ಸ್ವರೂಪವನ್ನು ಕಳೆದುಕೊಳ್ಳುವಂತಿದೆ. ಸುಗಮವಾಗಿ ಹರಿಯುತ್ತಿದ್ದ ನದಿಗೆ ಹಠಾತ್ತನೆ ಬೆಟ್ಟವೊಂದು ಅಡ್ಡವಾದಾಗ ಒಂದು ಕ್ಷಣ, ಮುಂದಿನ ತಿರುವು ಸ್ಪಷ್ಟವಾಗುವವರೆಗೆ ಹರಿವು ಸ್ಥಗಿತಗೊಂಡಂತೆ ಭಾಸವಾಗುತ್ತದೆ. ಕಾರ್ಮಿಕ ಸಂಘಗಳು ಮುಂದೇನು ಮಾಡಬೇಕೆಂಬ ವಿಷಯದಲ್ಲಿ ತಬ್ಬಿಬ್ಬಾಗಿವೆಯೆ ?

**ಶ್ರಮ ಅಪ್ರಸುತ್ತವೇ ?**

ಮುಕ್ತ ಮಾರುಕಟ್ಟೆ , ಉತ್ಪಾದನೆಯ ಆಧುನಿಕೀಕರಣ, ಗುಣವತ್ತತೆ, ಪರಿಸರ ರಕ್ಷಣೆ ಈ ಪದಗಳು ಮೇಲ್ನೋಟಕ್ಕೆ ಸ್ವಾಗತಾರ್ಹವಾದುವು. ಮನುಷ್ಯ ಒಂದು ಸಮಾಜವಾಗಿ ಇವಕ್ಕಾಗಿ ಬಹುಕಾಲ ಹಂಬಲಿಸಿ, ಹಂಬಲಿಸಿ, ಈಗಷ್ಟೆ, ವಿಜ್ಞಾನದ ಬೆಳವಣಿಗೆಯಿಂದ ಇವು ಕೈಗೆ ನಿಲುಕುವಂತಿದೆ. ಆದುದರಿಂದ ಇವುಗಳನ್ನು ವಿರೋಧಿಸುವುದು ಪ್ರಗತಿ ವಿರೋಧಿ ಎಂಬ ಆಪಾದನೆಗೆ ಒಳಗಾಗಬಲ್ಲದು. ಆದರೆ ಈ ಪದಗಳ ಬಳಕೆ ಪ್ರಾಮಾಣಿಕವಾಗಿ ಇಲ್ಲದೆ, ಇದರ ಹಿಂದೆ ಅಶಕ್ತ ಬಡರಾಷ್ಟ್ರಗಳ ಮೇಲೆ ಸಶಕ್ತ ರಾಷ್ಟ್ರಗಳ ದಬ್ಬಾಳಿಕೆ ನಡೆಸುವ ಹುನ್ನಾರ ಸ್ಪಷ್ಟವಾಗಿದೆ. ಕಾರ್ಮಿಕ ಸಂಘಗಳು ತಾತ್ವಿಕ ಅಸಂಗತತೆಗೆ ಎಡೆಮಾಡಿಕೊಳ್ಳದೆ ಈ ದಬ್ಬಾಳಿಕೆಯ ವಿರುದ್ಧ ಹೋರಾಟ ಮಾಡಬಲ್ಲ ಐಕ್ಯೈಕ ಶಕ್ತಿ, ಬಹುರಾಷ್ಟ್ರೀಯ

**ಪಾರ್ಥಸಾರಥಿ**

*ಕಾರ್ಮಿಕ ವರ್ಗವು ಅಂತರರಾಷ್ಟ್ರೀಯವಾಗಿ ತನ್ನ ವ್ಯಕ್ತಿತ್ವ-ಆಕಾಂಕ್ಷೆ- ಕ್ರಿಯಾಶೀಲತೆಗಳನ್ನು ಪ್ರಕಟಪಡಿಸಿಕೊಳ್ಳಲು ಮೇ ದಿನ ಒಂದು ಒಳ್ಳೆಯ ಸಂದರ್ಭ. ತಾಂತ್ರಿಕತೆಯ ವೈಭವದ ಸಂದರ್ಭದಲ್ಲಿ ಕಾರ್ಮಿಕರು ಗೌಣವಾಗುತ್ತಿದ್ದಾರೆಂಬ ಮಾತು ಕೇಳಿಬರುತ್ತಿದೆಯೆಂಬುದು ನಿಜ. ಆದರೆ ಅದು ಯಾವ ಮೂಲದಿಂದ ಬಂದಿದೆ ಮತ್ತು ಅದೆಷ್ಟರಮಟ್ಟಿಗೆ ನಿಜ ಎಂಬುದರ ಪರಿಶೀಲನೆ ಅಗತ್ಯವಾಗಿದೆ. ಕಾರ್ಮಿಕ ಚಳುವಳಿಗಳಲ್ಲಿ ಆಸಕ್ತ ಕ್ರಿಯಾಶೀಲರಾದ ಪಾರ್ಥ, ಸುರೇಂದ್ರ, ನರಸಿಂಹನ್ ಮತ್ತು ಕೃಷ್ಣರಾವ್ ಅವರು ಪರಸ್ಪರ ಚರ್ಚೆಗಳಿಂದ ಒಂದು ಲೇಖನ ಸಿದ್ಧಪಡಿಸಿದ್ದಾರೆ. ಮುಂದುವರಿದ ವ್ಯಾಪಕ ಚಿಂತನೆ-ಕ್ರಿಯೆಗಳಿಗೆ ಅದು ಇಂಬುಕೊಡುತ್ತದೆಂದು ನಿರೀಕ್ಷಿಸಲಾಗಿದೆ. ಈ ಲೇಖನದ ಇನ್ನೊಂದು ಭಾಗವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುತ್ತದೆ.*

ಗಳು ಬೃಹತ್ ಘಟಕಗಳಾಗಿ ಬೆಳೆದು, ತಮ್ಮ ಸರಕಾರಗಳಿಗಿಂತ ಪ್ರಬಲವಾಗಿ ಅಂಕೆಸಂಕೆಯಿಲ್ಲದೆ ಪ್ರಭಾವ ಬೀರುತ್ತಿದ್ದು, ಪ್ರಭುತ್ವ ಶಕ್ತಿ ಎಲ್ಲೆಲ್ಲೂ ಕುಂಠಿತವಾಗಿದೆ. ಸಮಾಜದ ಹಿತವನ್ನು ತಮಗೆ ದಕ್ಕುವ ಲಾಭದಲ್ಲಿ ಅಳೆಯುವ ವಾಣಿಜ್ಯ ಧುರೀಣರು ಸರಕಾರಗಳನ್ನು ನಿಯಂತ್ರಿಸುತ್ತಿದ್ದಾರೆ. ಜನತೆ ಪ್ರಭುತ್ವದ ಮೇಲೆ ತಮ್ಮ ಹಿಡಿತ ಕಳೆದುಕೊಂಡಂತೆ ಭಾಸವಾಗುತ್ತಿದೆ. ಮತ್ತೊಮ್ಮೆ ರಾಜಕೀಯ ಅಧಿಕಾರಕ್ಕೆ, ಪ್ರಜಾಪ್ರಭುತ್ವಕ್ಕೆ ಹೋರಾಟ ನಡೆಸುವ ಅಗತ್ಯ ಕಂಡುಬರುತ್ತಿದೆ. ಕಾರ್ಮಿಕ ವರ್ಗ ಜನಪರ ಹೋರಾಟಗಳಿಗೆ ಮಾರ್ಗದರ್ಶನ ನೀಡಬಲ್ಲ ಏಕೈಕ ವರ್ಗವಾಗಿ ಉಳಿದಿದೆ; ಆದರೆ ಅವರು ತಮ್ಮ ಪ್ರಜ್ಞೆಯನ್ನು ವಿಸ್ತೃತವಾಗಿ ಬೆಳೆಸಿಕೊಳ್ಳಬೇಕಾಗಿದೆ. ಇದೊಂದು ಕ್ರಾಂತಿಕಾರೀ ಬದಲಾವಣೆಯ ಸಂದರ್ಭ.

ಶತಮಾನಗಳ ಇತಿಹಾಸ ಉಳ್ಳ ಕಾರ್ಮಿಕ ಚಳುವಳಿಗಳು ತಮ್ಮ ಸ್ವರೂಪವನ್ನು ಕಳೆದುಕೊಳ್ಳುವಂಥ ಪರಿಸ್ಥಿತಿ ಉದ್ಭವಿಸಿರುವ ಈ ಪರಿಸ್ಥಿತಿಯಲ್ಲಿ ನಮ್ಮ ರಾಷ್ಟ್ರದ ಕಾರ್ಮಿಕ ಚಳುವಳಿ ನಡೆದುಬಂದ ದಾರಿಯನ್ನು ಒಮ್ಮೆ ಸಿಂಹಾವಲೋಕನ ಮಾಡಿ, ಇಂದು ಅದರ ಮುಂದಿರುವ ಸವಾಲುಗಳನ್ನು ಪಟ್ಟಿ ಮಾಡಲು, ಪರೀಕ್ಷಿಸಲು ಸಂದರ್ಭ ಒದಗಿಬಂದಿದೆ.

**ಸ್ವಾತಂತ್ರ್ಯ ಚಳುವಳಿಗೆ ಭಾರತೀಯ ಕಾರ್ಮಿಕನ ಕೊಡುಗೆ**

ಭಾರತದ ಕೈಗಾರಿಕಾ ಕ್ರಾಂತಿ ಪ್ರಾರಂಭವಾದುದು ತೀರಾ ತಡವಾಗಿ – ವಸಾಹತುಶಾಹಿಯ ಕಾರಣದಿಂದಾಗಿ. ಅಂತೆಯೇ ಕಾರ್ಮಿಕ ಸಂಘಗಳು ಹುಟ್ಟಿದ್ದೂ ತಡವಾಗಿ; ಕಳೆದ ಶತಮಾನದ ಪ್ರಾರಂಭದಲ್ಲಷ್ಟೆ. ಟೆಲಿಗ್ರಾಫ್ ವ್ಯವಸ್ಥೆ, ಅಂಚೆ ಪ್ರಾರಂಭ, ರೈಲು ಸಂಚಾರ, ಕಾಫಿ, ಟೀ, ಸೆಣಬಿನ ಪ್ಲಾಂಟೇಷನ್‌ಗಳು, ಉಕ್ಕು – ಕಲ್ಲಿದ್ದಲಿನ ಘಟಕಗಳ ಪ್ರಾರಂಭ, ಅವುಗಳೊಡನೆ ವ್ಯಾಪಕವಾಗಿ ಜವಳಿ ಗಿರಣಿಗಳ ಸ್ಥಾಪನೆ. ಅವುಗಳ ಬೆನ್ನಿಗೇ ಈ ಉದ್ಯಮಗಳ ಕಾರ್ಮಿಕರ ಸಂಘಗಳೂ ತಲೆದೋರಿದುವು. ಆಧುನಿಕ ಅರ್ಥದಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ ಉಂಟಾದ ಕಾರ್ಮಿಕ ಚಳುವಳಿಗಳು ಭಾರತದಲ್ಲಿ ಅರ್ಧ ಶತಮಾನದಷ್ಟು ತಡವಾಯಿತೆನ್ನಬಹುದು. ಅಂದಿನ ಕಾರ್ಮಿಕ ಸ್ವಯಂಪ್ರೇರಿತವಾಗಿ ಪ್ರತಿಭಟಿಸಿದ್ದು, ಮುಷ್ಕರ ಹೂಡಿದ್ದು, ಹೊಡೆತ ತಿಂದದ್ದು, ಬಾಲ - ಮಹಿಳಾ ಕಾರ್ಮಿಕರ ದಾರುಣ ಪರಿಸ್ಥಿತಿ, ಯಾವೊಂದು ನಿಗದಿತವೂ ಅಲ್ಲದ ಕೆಲಸದ ವೇಳೆ, ಅನಾರೋಗ್ಯಕರ ಕೆಲಸದ ಪರಿಸರಗಳ ವಿರುದ್ಧ. ದಾಖಲೆಯಾದ ಬಹಳ ಹಳೆಯ ಕಾರ್ಮಿಕ ಮುಷ್ಕರವೆಂದರೆ ೧೮೭೭ರಲ್ಲಿ ನಾಗಪುರದ ಎಂಪ್ರೆಸ್ ಹತ್ತಿ ಗಿರಣಿಯಲ್ಲಿ. ೧೮೮೮-೯೦ರ ನಡುವೆ ಸುಮಾರು ೨೫ ಮುಷ್ಕರಗಳು ನಡೆದುವು. ೧೮೯೫ರಲ್ಲಿ ಸೆಣಬು, ಹತ್ತಿ ಗಿರಣಿಗಳಲ್ಲಿ ಮುಷ್ಕರ ನಡೆದವು. ೧೯೦೫-೦೮ರಲ್ಲಿ ಬಾಲ ಗಂಗಾಧರ ತಿಲಕರಂಥವರ ಮುಂದಾಳುತನದಲ್ಲಿ ರೈಲ್ವೆ-ಟೆಲಿಗ್ರಾಫ್ ನೌಕರರ ಸಂಪು ನಡೆದಿತ್ತು. ಅಂದಿನ ಕಾರ್ಮಿಕರು ರಾಜಕೀಯ ವಿಷಯಗಳಿಗೂ ಪ್ರತಿಭಾಯುತವಾಗಿ ಮುಷ್ಕರ ನಡೆಸಿದ್ದೂ ದಾಖಲೆಯಾಗಿದೆ. ತಮ್ಮ ನಾಯಕ ತಿಲಕರಿಗೆ ಆರು ವರ್ಷ ಕಠಿಣ ಸಜಾ ಆದಾಗ, ಒಂದೊಂದು ವರ್ಷಕ್ಕೆ ಒಂದು ದಿನದಂತೆ, ಮುಂಬಯಿಯ ಕಾರ್ಮಿಕರು ಆರು ದಿನ ಪ್ರಚಂಡ ಮುಷ್ಕರ ನಡೆಸಿದ್ದರು. ಪ್ರಿನ್ಸ್ ಆಫ್ ವೇಲ್ಸ್ ಮುಂಬಯಿಗೆ ಬಂದಾಗ ಅವನನ್ನು ಮರ್ಯಾದೆಯಿಂದ ಬರಮಾಡಿಕೊಳ್ಳಲು ಅಂದಿನ ಕಾಂಗ್ರೆಸ್ ಪಕ್ಷ ಬಯಸಿದರೆ, ಮುಂಬಯಿಯ ಕಾರ್ಮಿಕರು ಅವನ ಆಗಮನದ ವಿರುದ್ಧ ಮೂರು ದಿನಗಳ ತೀವ್ರ ಮುಷ್ಕರ ನಡೆಸಿ, ಜನತೆಯ ಆಗ್ರಹ ವ್ಯಕ್ತಪಡಿಸಿದ್ದೂ ಅವಿಸ್ಮರಣೀಯ. ಕಾಂಗ್ರೆಸ್ ನೇತೃತ್ವದ ಬೂರ್ಷ್ವಾ ವರ್ಗ, ಮಧ್ಯಮ ವರ್ಗ ಮತ್ತು ಕೆಲವು ಬೌದ್ಧಿಕ ವರ್ಗ ಬ್ರಿಟಿಷರಿಗೆ ಬಿನ್ನವತ್ತಳೆಯಿತ್ತು, ಸ್ವಾಯತ್ತ ಆಡಳಿತಕ್ಕಾಗಿ ಬೇಡಿಕೆ ಇರಿಸುತ್ತಿದ್ದ ಕಾಲದಲ್ಲಿ ಅಖಿಲ ಭಾರತ ಕಾರ್ಮಿಕ ಒಕ್ಕೂಟವು ಸಂಪೂರ್ಣ ಸ್ವಾತಂತ್ರ್ಯವೇ ಭಾರತದ ಜನತೆಯ ಹೋರಾಟದ ಪರಮೋದ್ದೇಶವೆಂದು ಸಾರಿ, ಕಾಂಗ್ರೆಸ್ ತನ್ನ ಉದ್ದೇಶವನ್ನು ತಿದ್ದಿಕೊಳ್ಳಲು ಒತ್ತಡ ತಂದ ಕೀರ್ತಿ ಕಾರ್ಮಿಕರದು.

ಅನೇಕ ಪ್ರಾಂತೀಯ ಕಾರ್ಮಿಕ ಸಂಘಗಳು ಒಕ್ಕೂಟವಾಗಿ ಮೊಟ್ಟಮೊದಲ ಟ್ರೇಡ್ ಯೂನಿಯನ್ ಮದರಾಸಿನಲ್ಲಿ ಬಿ. ಪಿ. ವಾಡಿಯಾ ನೇತೃತ್ವದಲ್ಲಿ ೧೯೧೮ರಲ್ಲಿ ಸ್ಥಾಪಿತವಾಯಿತು. ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ ಮೇ ೧೯೨೦ರಲ್ಲಿ ಮುಂಬಯಿಯಲ್ಲಿ ರಚಿತವಾಯಿತು. ತಿಲಕರೇ ಇದರ ಸಂಘಟನಾ ಕಾರ್ಯ ನಡೆಸಿದ್ದು. ಅವರೇ ಅಧ್ಯಕ್ಷರಾಗಬೇಕಾಗಿತ್ತು. ಆದರೆ ಅವರ ಅಕಾಲ ಮರಣದಿಂದಾಗಿ ಈ ಮಹಾಸಂಸ್ಥೆಯ ಪ್ರಪ್ರಥಮ ಅಧ್ಯಕ್ಷರಾಗಿ ಲಾಲಾ ಲಜಪತ ರಾಯರು ಚುನಾಯಿತರಾದರು. ಮುಂದೆ ಮೇ ೯, ೧೯೪೭ರಲ್ಲಿ ಭಾರತೀಯ ರಾಷ್ಟ್ರೀಯ ಟ್ರೇಡ್ ಯೂನಿಯನ್ ಕಾಂಗ್ರೆಸ್ ಎಂಬ ಹೆಸರಿನಲ್ಲಿ ಕಾಂಗ್ರೆಸ್ ಪಕ್ಷ ತನ್ನ ಸ್ವಂತದ ಕಾರ್ಮಿಕ ಸಂಘವನ್ನು ಸ್ಥಾಪಿಸಿಕೊಳ್ಳುವವರೆಗೆ ಇಡೀ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಭಾರತದ ಕಾರ್ಮಿಕರ ಏಕೈಕ ಪ್ರತಿನಿಧಿಯಾಗಿ ಬೆಳಗಿದ ಕೀರ್ತಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನದು. ಈ ಅವಧಿಯಲ್ಲಿ ಅದು ಎಂದೂ ಕೇವಲ ಕಮ್ಯುನಿಸ್ಟ್ ಸಮರ್ಥಕ ಸಂಘವೆನಿಸಿಕೊಂಡಿರಲಿಲ್ಲ. ನೆಹರೂರವರು ಸೇರಿದಂತೆ ಅನೇಕ ರಾಷ್ಟ್ರೀಯ ನಾಯಕರು ಅದರ ಅಧ್ಯಕ್ಷರಾಗುವ ಸುಯೋಗ ಪಡೆದಿದ್ದರು. ರಾಷ್ಟ್ರೀಯ ಚಳುವಳಿಯ ಗಂಭೀರ ತಿರುವುಗಳಲ್ಲಿ ಈ ಸಂಘ ರಾಜಕೀಯ ಮುಷ್ಕರಗಳನ್ನು ನಡೆಸಿ ಬೂರ್ಷ್ವಾ ನಾಯಕರುಗಳ ಮೇಲೆ ನಿರ್ಣಾಯಕ ಪರಿಣಾಮವನ್ನುಂಟುಮಾಡಿದ್ದು ದಾಖಲೆಯಾಗಿರುವ ಸಂಗತಿ. ರಾಷ್ಟ್ರದ ನಾಯಕರುಗಳನ್ನು ಸೆರೆ ಹಿಡಿದಾಗ, ಸದೆಬಡಿದಾಗ, ಕಾರ್ಮಿಕ ಸಂಘಗಳು ಲೆಕ್ಕವಿಲ್ಲದಷ್ಟು ಬಾರಿ ಪ್ರತಿಭಟನಾ ಚಳುವಳಿಗಳನ್ನು ಹೂಡಿವೆ. ರಾಷ್ಟ್ರೀಯ ಚಳುವಳಿಯ ನಾಯಕರು ತಮ್ಮ ಚಳುವಳಿಗೆ ಅಗತ್ಯ ಬಿದ್ದಾಗಲೆಲ್ಲಾ ಕಾರ್ಮಿಕ ಸಂಘಗಳನ್ನು ಸಾಮೂಹಿಕ ಚಳುವಳಿಗೆ ಬಳಸಿಕೊಂಡಿದ್ದಾರೆ. ''ಭಾರತ ಬಿಟ್ಟು ತೊಲಗಿ'' ಎಂಬ ಕರೆ ನೀಡಿ, ನಾಯಕರೆಲ್ಲಾ ಸೆರೆಮನೆ ಸೇರಿಬಿಟ್ಟಾಗ, ಜನತೆಯ ಚಳುವಳಿಗೆ ನಿರ್ದೇಶನ ನೀಡುವ ಜವಾಬ್ದಾರಿ ತಪ್ಪಿಸಿಕೊಂಡಾಗ, ಅಗತ್ಯಬಿದ್ದ ನಿರ್ದೇಶನ ನೀಡಿ, ಅಪರಿಮಿತ ಕಷ್ಟ ಅನುಭವಿಸಿ, ಹೋರಾಟವನ್ನು ನಿರ್ಣಾಯಕ ಘಟ್ಟಕ್ಕೆ ಕೊಂಡೊಯ್ದುದು ಕಾರ್ಮಿಕ ಚಳುವಳಿ. ಐ.ಎನ್.ಎ. ವಿಚಾರಣೆಯಾಗಲಿ, ನೌಕಾದಳದವರ ಪ್ರತಿಭಟನಾ ಚಳುವಳಿಯಾಗಲಿ ರಾಷ್ಟ್ರದ ನಾಯಕರು ಅವರಿಗೆ ನೇರ ಬೆಂಬಲ ನೀಡದೆ, ದ್ವಂದ್ವದ ಮರ್ಮದಲ್ಲಿ ತೊಡಗಿದ್ದಾಗ, ಮುಂಬಯಿಯ ಕಾರ್ಮಿಕರು ಮುಂದೆ ಬಂದು ಅವರ ಪರ ಉಗ್ರ ಚಳುವಳಿ ನಡೆಸಿದ್ದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಬಹುಶಃ ಬ್ರಿಟಿಷರು, ಕಾರ್ಮಿಕರ ಈ ಪಾತ್ರ ಹೀಗೆ ಮುಂದುವರೆದರೆ ಬರಲಿರುವ ರಾಜಕೀಯ ಸ್ವಾತಂತ್ರ್ಯಕ್ಕೆ ಕಾರ್ಮಿಕ ಕ್ರಾಂತಿಯ ಸ್ವರೂಪ ಬರಬಹುದೆಂದು ಹೆದರಿರಬೇಕು. ಕಮ್ಯುನಿಸ್ಟ್ ರಷ್ಯಾ ಆಗಷ್ಟೆ ಮಹಾಯುದ್ಧದಲ್ಲಿ ವಿಶ್ವ ಬೆರಗಾಗುವಂತೆ ನಿರ್ಣಾಯಕ ಪಾತ್ರ ವಹಿಸಿತ್ತು. ಚೀಣದಲ್ಲಿ ಕಮ್ಯುನಿಸ್ಟರು ಜಯಗಳಿಸುವುದು ಸನ್ನಿಹಿತವಾಗಿತ್ತು. ಭಾರತದಲ್ಲಿ ಕಾರ್ಮಿಕರ ಕ್ರಾಂತಿಕಾರಿ ನೇತೃತ್ವದಲ್ಲಿ ಸ್ವಾತಂತ್ರ್ಯ ದಕ್ಕಿಬಿಟ್ಟರೆ ವಿಶ್ವ ಸಾಮ್ರಾಜ್ಯಶಾಹಿಯ ಪರಿಸ್ಥಿತಿ ಚಿಂತಾಜನಕವಾಗಬಹುದಿತ್ತು. ಅಂಥ ಪರಿಸ್ಥಿತಿಯಲ್ಲಿ ದೇಶ ಒಡೆದು, ಬೂರ್ಷ್ವಾ ವರ್ಗಕ್ಕೆ ಅಧಿಕಾರ ವಹಿಸಿ, ಭಾರತ ಬಿಟ್ಟು ಅವಸರದಲ್ಲಿ ತೊಲಗಿದ ಬ್ರಿಟಿಷ್ ಸರ್ಕಾರದ ನೀತಿಯಲ್ಲಿ ಆಶ್ಚರ್ಯವೇನಿರಲಿಲ್ಲ. ಸ್ವಾತಂತ್ರ್ಯ ದಿವಸದ ಕೆಲವೇ ತಿಂಗಳು ಮುಂಚೆ ಕಾಂಗ್ರೆಸ್ ಪಕ್ಷ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್‌ಅನ್ನು ಒಡೆದು ತನ್ನದೇ ಕಾರ್ಮಿಕ ಸಂಘವನ್ನು ಕಟ್ಟಿ, ತನ್ನ ತಾತ್ವಿಕ ಇಬ್ಬಂದಿ ನೆಲೆಯನ್ನು ಸ್ಪಷ್ಟಪಡಿಸಿತು. ಕಾಂಗ್ರೆಸ್ಸಿನಿಂದ ಸಿಡಿದುಬಂದ ಅನೇಕ ಹೊಸ ರಾಜಕೀಯ ಪಕ್ಷಗಳೂ ತಮ್ಮ ತಮ್ಮ ಸಮರ್ಥಕರನ್ನು ಸೇರಿಸಿಕೊಂಡು ಅನೇಕ ಕಾರ್ಮಿಕ ಸಂಘಗಳನ್ನು ಕಟ್ಟಿಕೊಂಡವು. ಅದರ ಪರಿಣಾಮವಾಗಿ ಕಾರ್ಮಿಕ ಐಕ್ಯಮತ್ಯ ಭಾರತಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿ ಬಹುಮಟ್ಟಿಗೆ ಕೃಶವಾಯಿತು. ಇದರಿಂದ ಸ್ವಾತಂತ್ರ್ಯಾನಂತರ ರಾಜಕೀಯ ವಿಷಯಗಳಲ್ಲಿ ಕಾರ್ಮಿಕ ಚಳುವಳಿ ಬಹುವಾಗಿ ಒಕ್ಕೊರಲಿನಿಂದ ಭಾಗವಹಿಸುವುದು ಸಾಧ್ಯವಾಗದೇ ಹೋಯಿತು.

ಸ್ವಾತಂತ್ರ್ಯಾನಂತರ ದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಸಗುಣಾತ್ಮಕ ಬದಲಾವಣೆಗಳಾದುವು. ಅದರ ಪರಿಣಾಮ ಕಾರ್ಮಿಕ ಚಳುವಳಿಯ ಮೇಲೂ ಅನಿವಾರ್ಯವಾದುದು. ರಾಷ್ಟ್ರದ ಮುಂದಿದ್ದ ಸಮಸ್ಯೆ ತುರ್ತಾಗಿ ಆರ್ಥಿಕ ವಿಕಾಸ. ಇದೊಂದು ಬೃಹದಾಕಾರದ ಸವಾಲಾಗಿದ್ದು ಖಾಸಗಿ ವಲಯದಲ್ಲಿ ಅದಕ್ಕೆ ಬೇಕಾದಷ್ಟು ಬೃಹತ್ಪ್ರಮಾಣದ ಬಂಡವಾಳವಾಗಲಿ, ತಜ್ಞತೆಯಾಗಲಿ ಇರಲಿಲ್ಲ. ಈ ಕೊರತೆಯನ್ನು ನೀಗಿಸಲು ಸರ್ಕಾರಿ ಕ್ಷೇತ್ರದಲ್ಲೇ ಅನೇಕ ಉದ್ದಿಮೆಗಳನ್ನು ಪ್ರಾರಂಭಿಸಬೇಕಾದುದು ಅಗತ್ಯವಾಯಿತು. ಸ್ವಾತಂತ್ರ್ಯ ಪೂರ್ವದಲ್ಲೇ ನೆಹರೂರವರ ನೇತೃತ್ವದಲ್ಲಿ 'ಬಾಂಬೆ ಪ್ಲಾನ್' ಎಂಬ ಆರ್ಥಿಕ ಯೋಜನೆಯನ್ನು ಮುಂಬಯಿಯ ಉದ್ಯೋಗಪತಿಗಳೊಡನೆ ನೆಹರೂ ಚರ್ಚಿಸಿದ್ದರು. ರಷ್ಯಾವನ್ನು ಮೆಚ್ಚಿಕೊಂಡಿದ್ದ ನೆಹರೂರವರಿಗೆ ಪಂಚವಾರ್ಷಿಕ ಯೋಜನೆಯ ಹಾದಿ ಹಿಡಿಯುವುದು ಸಹಜವಾಗಿತ್ತು. ಸರ್ಕಾರಿ ವಲಯದಲ್ಲಿ ಮೂಲಭೂತ ಕೈಗಾರಿಕೆ, ಬೃಹತ್ಪ್ರಮಾಣದ ನೀರಾವರಿ ಯೋಜನೆಗಳಿಗೆ ವಿದ್ಯುದುತ್ಪಾದನೆ, ಕಲ್ಲಿದ್ದಲು, ಉಕ್ಕು, ಕಬ್ಬಿಣ ಮುಂತಾದ ಹೆಚ್ಚಿನ ಬಂಡವಾಳ ಬೇಡುವ ಉದ್ಯಮಗಳಿಗೆ ಒತ್ತು ಕೊಟ್ಟಿದ್ದರಲ್ಲಿ ಆಗ್ಗೆ ಹೇಳಿಕೊಂಡಂತೆ ಸಮಾಜವಾದದ ಒಲವಿಗಿಂತ ಪರಿಸ್ಥಿತಿಯ ಅನಿವಾರ್ಯತೆಯೇ ಕಾರಣವಾಗಿತ್ತೆಂದು ಇಂದಂತೂ ಹೇಳಬಹುದು. ಮುಂದೆ ಈ ಸರ್ಕಾರೀ ಬಂಡವಾಳವು ಸಾರ್ವಜನಿಕವಾಗಲಿ, ಸಮಾಜವಾದಿಯಾಗಲಿ, ಆಗಲಿಲ್ಲವೆಂಬುದನ್ನು ಗಮನಿಸಬಹುದು. ಎಡಪಕ್ಷಗಳು ಇದನ್ನು ಸಮಾಜವಾದವೆಂದು ಭ್ರಮಿಸಿ, ಆಳುವ ಪಕ್ಷದ ಬೆಂಬಲಿಗರಾಗಿ, ತಮ್ಮ ಸ್ವಂತಿಕೆಗೆ ಒಂದಿಷ್ಟು ಧಕ್ಕೆ ತಂದುಕೊಂಡವೇನೋ ! ಇದನ್ನು ಇನ್ನೂ ವಿವರವಾಗಿ ಮುಂದಿನ ಲೇಖನದಲ್ಲಿ ಚರ್ಚಿಸಲಾಗುತ್ತದೆ. ❑❑❑

# ಕೇಂದ್ರದ ಬಂಡವಾಳವಿಲ್ಲದ ಬರಡು ಬಜೆಟ್

ಟಿ. ಆರ್. ಚಂದ್ರಶೇಖರ್

**ಈ** ದೇಶದಲ್ಲಿ ಆಹಾರ ದುಃಸ್ಥಿತಿಯಿಂದ ನರಳುತ್ತಿರುವ ೩೫ ಕೋಟಿ ವಂಚಿತರಿಗೆ ಈ ಬಾರಿಯ ಬಜೆಟ್‌ನಲ್ಲೇನಾದರೂ ಪರಿಹಾರ ಒದಗಿಸಲಾಗಿದೆಯೆ ? ಸಂಗ್ರಹಿಸಲಾರದಷ್ಟು ಪ್ರಮಾಣದಲ್ಲಿ ರಾಶಿಯಾಗುತ್ತಿರುವ ಆಹಾರಪದಾರ್ಥದ ದಾಸ್ತಾನನ್ನು (೪ ಕೋಟಿ ಟನ್‌ಗಳು) ಉದ್ಯೋಗ ನಿರ್ಮಾಣಕ್ಕೆ, ಬಡತನ ನಿವಾರಣೆಗೆ ಬಂಡವಾಳವಾಗಿ ಬಳಸುವ ತಂತ್ರವನ್ನೇನಾದರೂ ಬಜೆಟ್‌ನಲ್ಲಿ ರೂಪಿಸಲಾಗಿದೆಯೆ ? ಉದಾರವಾದಿ ಪರ್ವದ ಹತ್ತು ವರ್ಷಗಳ ಅವಧಿಯಲ್ಲಿ ಬಜೆಟ್ಟಿಗೆ ಸಂಬಂಧಿಸಿದಂತೆ ಉಂಟಾಗಿರುವ ಬದಲಾವಣೆಗಳು ಸಮಾಜದ ಅಂಚಿನಲ್ಲಿರುವ ವಂಚಿತರಿಗೆ, ಮಹಿಳೆಯರಿಗೆ, ಭೂರಹಿತ ಕೃಷಿ ಕಾರ್ಮಿಕರಿಗೆ ಅನುಕೂಲ ಒದಗಿಸಿವೆಯೆ ? ಈ ಬಜೆಟ್ಟು ಸಮಾಜದ ಯಾವ ವರ್ಗದ ಹಿತಗಳನ್ನು ಕಾಪಾಡಲು ಪ್ರಯತ್ನಿಸುತ್ತಿದೆ ? ಸಮಾಜಧ ಯಾವ ವರ್ಗಕ್ಕೆ ಇದು ವಿಷಪ್ರಾಯವಾಗುತ್ತಿದೆ ? ಈ ಪ್ರಶ್ನೆಗಳನ್ನು ಮುಖ್ಯ ನೆಲೆಯಾಗಿಟ್ಟುಕೊಂಡು ಚರ್ಚೆಯನ್ನು ಬೆಳೆಸುವುದು ಅಗತ್ಯ.

**ನೀಡೋದೆಷ್ಟು ಮತ್ತು ಪಡೆಯೋದೆಷ್ಟು ?**

ಸಮಾಜದಲ್ಲಿ ಉನ್ನತ ವರಮಾನ ಹೊಂದಿರುವ ವರ್ಗ ತಾನು ಗಳಿಸಿದ ವರಮಾನದಲ್ಲಿ ಒಂದು ಭಾಗವನ್ನು ಸಮಾಜದ ಒಳಿತಿಗಾಗಿ ಮಾಡುವ ಖರ್ಚನ್ನು ಭರಿಸಲು ನೀಡಬೇಕಾದುದು ನ್ಯಾಯ. ಲಾಗಾಯ್ತಿನಿಂದಲೂ ಅರ್ಥಶಾಸ್ತ್ರವು ಇಂತಹ ನಿಯಮವನ್ನು ಪ್ರತಿಪಾದಿಸುತ್ತಾ ಬಂದಿದೆ. ಉನ್ನತವರ್ಗದ ಮೇಲೆ ತೆರಿಗೆಯನ್ನು ವಿಧಿಸಿ ಹಣವನ್ನು ಸರ್ಕಾರ ಸಂಗ್ರಹಿಸಿಕೊಳ್ಳುವುದು ಬಜೆಟ್ಟಿನ ಒಂದು ಕ್ರಮ. ನಮ್ಮ ಸಮಾಜದ ಸಂದರ್ಭದಲ್ಲಿ ಉನ್ನತ ವರ್ಗವು ತೆರಿಗೆ ರೂಪದಲ್ಲಿ ಸಮಾಜಕ್ಕೆ ನೀಡುತ್ತಿರುವುದು ಕಡಿಮೆಯಾಗುತ್ತಾ ನಡೆದಿದೆ. ಆದರೆ ಸಮಾಜದಿಂದ ಅದು ಪಡೆಯುತ್ತಿರುವ ವರಮಾನ ಅಧಿಕವಾಗುತ್ತ ನಡೆದಿದೆ. ಆಡಂ ಸ್ಮಿತ್ ಹೇಳುವ ಸಾರ್ವಜನಿಕ ಹಣಕಾಸಿಗೆ ಸಂಬಧಿಸಿದ ಮೂಲ ನಿಯಮವಾದ ಸಮಾನತೆ ಇಲ್ಲಿ ಗೈರುಹಾಜರಾಗಿದೆ. ನಮ್ಮ ಸಂದರ್ಭದಲ್ಲಿ ಉನ್ನತ ವರಮಾನ ವರ್ಗವು ಸಮಾಜಕ್ಕೆ ನೀಡುತ್ತಿರುವುದಕ್ಕಿಂತ ಪಡೆಯುತ್ತಿರುವುದೇ ಅಧಿಕವಾಗಿ ಇರುವುದರಿಂದ ಸಮಾಜದಲ್ಲಿ ಅಸಮಾನತೆ ಉಲ್ಬಣಗೊಳ್ಳುತ್ತಿದೆ. ಸರ್ಕಾರವು ನೇರ ತೆರಿಗೆಗಳ ಮೂಲಕ ೨೦೦೦-೨೦೦೧ರಲ್ಲಿ ಸಂಗ್ರಹಿಸಿದ ಮೊತ್ತ ರೂ. ೭೪,೪೬೭ ಕೋಟಿ. ಆದರೆ ಸರ್ಕಾರವು ತಾನು ಮಾಡಿದ ಸಾಲದ ಬಾಬ್ತು ೨೦೦೦-೨೦೦೧ರಲ್ಲಿ ನೀಡಿದ ಬಡ್ಡಿ ರೂ. ೧,೦೦,೬೬೭ ಕೋಟಿ. ನೇರ ತೆರಿಗೆಗಳ ಮೂಲಕ ಸಂಗ್ರಹಿಸಿದ ಮೊತ್ತವು ೨೦೦೦-೨೦೦೧ರ ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಶೇ. ೩.೭೪ ರಷ್ಟಾಗುತ್ತದೆ. ಆದರೆ ಅದೇ ವರ್ಷ ಸರ್ಕಾರವು ಬಡ್ಡಿ ಪಾವತಿಗಾಗಿ ನೀಡಿದ ಮೊತ್ತವು ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಶೇ. ೫.೦೬ ರಷ್ಟಿದೆ.

ನೇರ ತೆರಿಗೆಗಳನ್ನು ಸಾಮಾನ್ಯವಾಗಿ ನೀಡುವವರು ಸಮಾಜದ ಉನ್ನತವರ್ಗ ಎಂಬುದನ್ನು ಹೇಳುವ ಅಗತ್ಯವಿಲ್ಲ. ಅದೇ ರೀತಿ ಸರ್ಕಾರವು ಎತುವ ಸಾಲಕ್ಕೆ ಹಣ ಸಲ್ಲಿಸುವವರು ಸಮಾಜದ ಉನ್ನತವರ್ಗದವರೇ ಆಗಿದ್ದಾರೆ. ಅಂದಮೇಲೆ ಸರ್ಕಾರವು ತಾನು ಎತ್ತಿದ ಸಾಲದ ಬಾಬ್ತು ನೀಡುವ ಬಡ್ಡಿಯು ಉನ್ನತವರ್ಗದ ಪಾಲಾಗುತ್ತದೆ. ಸರ್ಕಾರಕ್ಕೆ ಸಾಲ ನೀಡುವ ಸಾಮರ್ಥ್ಯವು ಉನ್ನತವರ್ಗಕ್ಕೆ ಮಾತ್ರ ಇರುತ್ತದೆ. ಉನ್ನತ ವರ್ಗವು ನೇರ ತೆರಿಗೆಗಳ ರೂಪದಲ್ಲಿ ಸಮಾಜಕ್ಕೆ ನೀಡುವುದು ಕಡಿಮೆ (ಶೇ. ೩.೭೪) ಮತ್ತು ಸಮಾಜದಿಂದ ಅದು ಪಡೆಯುತ್ತಿರುವುದು ಅಧಿಕ (ಶೇ. ೫.೦೬). ಹಾಗಾದರೆ ಈ ಬಜೆಟ್ಟು ಸಮಾಜದ ಯಾವ ವರ್ಗದ ಹಿತವನ್ನು ಕಾಪಾಡುತ್ತಿದೆ ಎಂಬುದನ್ನು ಹೇಳುವ ಅಗತ್ಯವಿಲ್ಲ.

**ಬಜೆಟ್ ಬಡವರಿಗಲ್ಲ !**

ಸರ್ಕಾರವು ಮಂಡಿಸಿರುವ ೨೦೦೧-೨೦೦೨ನೆಯ ಸಾಲಿನ ಬಜೆಟ್ಟಿನ ಗಾತ್ರ ರೂ. ೩,೭೫,೨೩೩ಕೋಟಿ. ಇದು ಬಜೆಟ್ಟಿನಲ್ಲಿ ನಿಗದಿಪಡಿಸಿರುವ ಒಟ್ಟು ವ್ಯಯ. ಆದರೆ ಇದರಲ್ಲಿ ಎಷ್ಟು ಭಾಗ ಸಮಾಜದ ಅಂಚಿನಲ್ಲಿರುವ ವಂಚಿತರ ಹಿತವನ್ನು ಕಾಪಾಡುವುದಕ್ಕೆ ವ್ಯಯವಾಗುತ್ತದೆ ? ಪ್ರಸಕ್ತ ಸಾಲಿನ ಬಜೆಟ್ಟಿನ ಒಟ್ಟು ವ್ಯಯದಲ್ಲಿ ಬಡ್ಡಿ ಪಾವತಿಗೆ ರೂ. ೧,೧೨,೩೦೦ ಕೋಟಿ, ರಕ್ಷಣೆಗೆ ರೂ. ೬೨,೦೦೦ ಕೋಟಿ, ಸಬ್ಸಿಡಿಗೆ ರೂ. ೨೯,೮೦೧ ಕೋಟಿ ಮತ್ತು ಸರ್ಕಾರಿ ನೌಕರರ ವೇತನ ಹಾಗೂ ಭತ್ಯೆಗಳ ಬಾಬ್ತು ರೂ. ೩೧,೯೪೫ ಕೋಟಿ ಖರ್ಚಾಗುತ್ತದೆ. ಇವುಗಳ ಒಟ್ಟು ಮೊತ್ತ ರೂ. ೨,೩೬,೦೪೬ ಕೋಟಿ. ಈ ಬಾಬತ್ತುಗಳ ಮೇಲೆ ವ್ಯಯಿಸುವ ಮೊತ್ತದಿಂದ ಬಡವರಿಗೆ ಯಾವುದೇ ಪ್ರಯೋಜನವಿಲ್ಲ. ಹೀಗೆ ೨೦೦೧-೨೦೦೨ನೆಯ ಸಾಲಿನ ಬಜೆಟ್ಟಿನ ಒಟ್ಟು ವ್ಯಯದಲ್ಲಿ ಶೇ. ೬೨.೯೧ರಷ್ಟು ಬಡವರಿಗೆ ಸಂಬಂಧಪಡದ ಚಟುವಟಿಕೆಗಳ ಪಾಲಾಗುವುದರಿಂದ, ಅಭಿವೃದ್ಧಿಗೆ ಉಳಿಯುವ ಮೊತ್ತ ಕೇವಲ ರೂ. ೧,೩೯,೧೮೭ ಕೋಟಿ. ಒಟ್ಟಾರೆಯಾಗಿ ಕೇಂದ್ರ ಬಜೆಟ್ಟು ಮುಖ್ಯವಾಗಿ ಸಮಾಜದ ಉನ್ನತವರ್ಗದ ಹಿತಗಳನ್ನು ಕಾಪಾಡುವ ದಿಶೆಯಲ್ಲಿ ಕಾರ್ಯೋನ್ಮುಖವಾಗಿದೆಯೆಂದು ಇದರಿಂದ ಹೇಳಬಹುದು.

**ಬಜೆಟ್ಟಿನ ಎರಡು ಭಾಗಗಳು**

ಬಜೆಟ್ಟಿನಲ್ಲಿ ಎರಡು ಭಾಗಗಳಿರುತ್ತವೆ: ಮೊದಲನೆಯದು ಕಂದಾಯ(ರೆವಿನ್ಯೂ) ವ್ಯವಹಾರಗಳ ಭಾಗ ಮತ್ತು ಎರಡನೆಯದು ಬಂಡವಾಳ ವ್ಯವಹಾರಗಳ ಭಾಗ. ಮೊದಲನೆಯದು ಆರ್ಥಿಕತೆಯ ದೈನಂದಿನ ಆಗುಹೋಗುಗಳನ್ನು ನಿಭಾಯಿಸುವ-ಸಂಭಾಳಿಸುವ ಸ್ವರೂಪದ್ದಾಗಿದ್ದರೆ ಎರಡನೆಯದು ಆರ್ಥಿಕತೆಯ ಬೆಳವಣಿಗೆಯ ಗತಿಯನ್ನು ಅಧಿಕಗೊಳಿಸುವ ಸ್ವರೂಪದ್ದಾಗಿರುತ್ತದೆ. ಆರ್ಥಿಕತೆಯ ಚಾಲ್ತಿ ಆಯವ್ಯಯಗಳ ಭಾಗವು ಕಂದಾಯ ಬಜೆಟ್ ಎನಿಸಿಕೊಂಡರೆ ಆರ್ಥಿಕತೆಯ ಸಾಲದ ರಾಶಿ ಮತ್ತು ಅದರ ವ್ಯಯಗಳ ವ್ಯವಹಾರಗಳನ್ನು ಒಳಗೊಂಡಿರುವ ಭಾಗವು ಬಂಡವಾಳ ಬಜೆಟ್ ಎನಿಸಿಕೊಳ್ಳುತ್ತದೆ. ಇವೆರಡೂ ಭಾಗಗಳ ನಡುವೆ ಸೂಕ್ಷ್ಮವಾದ ಸಂಬಂಧವಿರುತ್ತದೆ. ಉದಾರವಾದಿ ಪರ್ವದ ಹತ್ತು ವರ್ಷಗಳ ಕಾಲಾವಧಿಯಲ್ಲಿ (೧೯೯೧-೯೨ ರಿಂದ ೨೦೦೦-೨೦೦೧) ಇವೆರಡೂ ಭಾಗಗಳ ನಡುವೆ ಸಂಬಂಧ ವಿಕೃತಗೊಂಡಿರುವುದು ಇಂದು ಆತಂಕಕ್ಕೆ ಕಾರಣವಾಗಿದೆ. ಇವೆರಡೂ ಭಾಗಗಳ ನಡುವೆ ಆರೋಗ್ಯಪೂರ್ಣ ಸಂಬಂಧವನ್ನು ಸಾಧಿಸುವಲ್ಲಿ ಸರ್ಕಾರವು ವಿಫಲಗೊಂಡಿದೆ. ಬಜೆಟ್ಟಿನ ಇವೆರಡೂ ಭಾಗಗಳ ನಡುವಿನ ಸಂಬಂಧವನ್ನು ಸರ್ಕಾರವು ಶಿಸ್ತಿನಿಂದ ಹಾಗೂ ಜವಾಬ್ದಾರಿಯುತವಾಗಿ ನಿರ್ವಹಿಸುತ್ತಿದೆ ಎಂದು ಹೇಳಲು ಸಾಧ್ಯವಿಲ್ಲ.

**ಸಾಮಾನ್ಯ ನಿಯಮ**

ಇವೆರಡೂ ಭಾಗಗಳ ನಡುವಿನ ಸಂಬಂಧವನ್ನು ಹೇಗೆ ನಿರ್ವಹಿಸಬೇಕು ಎಂಬುದಕ್ಕೆ ಒಂದು ಸಾಮಾನ್ಯ ನಿಯಮವಿದೆ. ಒಂದು ಸರ್ಕಾರವು ತನ್ನ ಚಾಲ್ತಿಖಾತೆಯ ಖರ್ಚು-ವೆಚ್ಚಗಳನ್ನು ಅತ್ಯಂತ ಎಚ್ಚರಿಕೆಯಿಂದ ತಹಬಂದಿಯಲ್ಲಿಟ್ಟುಕೊಳ್ಳಬೇಕಾಗುತ್ತದೆ. ಕಂದಾಯ ಬಜೆಟ್ಟಿನ 'ವ್ಯಯ' ಭಾಗವನ್ನು ನಿಯಂತ್ರಣದಲ್ಲಿಟ್ಟುಕೊಂಡರೆ, ಅಲ್ಲಿ 'ಮಿಗುತೆ'ಯನ್ನು ಸಾಧಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಆಯವನ್ನು ಉನ್ನತ ಮಟ್ಟದಲ್ಲಿಟ್ಟುಕೊಂಡು ವ್ಯಯವನ್ನು ಕೆಳಮಟ್ಟದಲ್ಲಿಟ್ಟುಕೊಂಡರೆ ಅಲ್ಲಿ 'ಆಯಾಧಿಕ್ಯ' ಉಂಟಾಗುತ್ತದೆ. ಕಂದಾಯ ಬಜೆಟ್ಟಿನ ವ್ಯಯದ ಭಾಗವನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವುದರ ಜೊತೆಗೆ ಸರ್ಕಾರವೊಂದು ತನ್ನ ಆಯದ ರಾಶಿಯನ್ನು ಅಧಿಕಗೊಳಿಸಿಕೊಳ್ಳಲು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. 'ಆಯ'ವನ್ನು ಸಮೃದ್ಧಗೊಳಿಸಿಕೊಳ್ಳದೆ 'ವ್ಯಯ'ವನ್ನು ಮಾತ್ರ ನಿಯಂತ್ರಿಸಿದರೆ ಅದಕ್ಕೆ ಅರ್ಥವಿಲ್ಲ. ಆರ್ಥಿಕತೆಯ ಅಭಿವೃದ್ಧಿಯ ಗತಿ ಉತ್ತಮಗೊಂಡಂತೆ ತೆರಿಗೆ ಪ್ರಮಾಣವೂ ಅಧಿಕಗೊಳ್ಳಬೇಕು. ತೆರಿಗೆಯ ಪಾಯವು ವಿಸ್ತೃತಗೊಳ್ಳಬೇಕು. ನೇರ ತೆರಿಗೆಗಳು ಆರೋಹಣ ಸ್ವರೂಪದಲ್ಲಿರಬೇಕು.

ಹೀಗೆ ಕಂದಾಯ ಖಾತೆಯಲ್ಲಿ ಆಯವನ್ನು ಸಮೃದ್ಧಗೊಳಿಸಿಕೊಂಡು ವ್ಯಯವನ್ನು ತಹಬಂದಿಯಲ್ಲಿಟ್ಟುಕೊಂಡರೆ ಅಲ್ಲಿ 'ಮಿಗುತೆ' ಸಾಧ್ಯವಾಗುತ್ತದೆ. ಕಂದಾಯ ಖಾತೆಯಲ್ಲಿ ಸಾಧಿಸಿಕೊಂಡ ಮಿಗುತೆಯಿಂದ ಪ್ರಾಪ್ತವಾದ ರಾಶಿಯನ್ನು ಬಂಡವಾಳ ಖಾತೆಗೆ ವರ್ಗಾಯಿಸುವುದರಿಂದ ಆರ್ಥಿಕತೆಯಲ್ಲಿ ಹಣದುಬ್ಬರ ರಹಿತವಾಗಿ ಬಂಡವಾಳ ಹೂಡಿಕೆಯನ್ನು ಉನ್ನತಮಟ್ಟಕ್ಕೆ ಒಯ್ಯಬಹುದು. ಕಂದಾಯ ಬಜೆಟ್ಟಿನ ಮಿಗುತೆಯು ಬಂಡವಾಳ ಬಜೆಟ್ಟಿನ ಆಯದ

**ಕೇಂದ್ರದ ಹಣಕಾಸು ಮಂತ್ರಿಗಳು ೨೦೦೧-೨೦೦೨ನೆಯ ಸಾಲಿನ ಬಜೆಟ್ಟನ್ನು ಸಂಸತ್ತಿನ ಮುಂದೆ ದಿನಾಂಕ ೨೮-೦೨-೨೦೦೧ ರಂದು ಮಂಡಿಸಿದ್ದಾರೆ. ಈ ಬಜೆಟ್ಟನ್ನು ಹೊಗಳದ ವ್ಯಕ್ತಿಯೇ ಇಲ್ಲ ಎನ್ನುವಷ್ಟು ಅದು ಜನಪ್ರಿಯತೆಯನ್ನು ಪಡೆದುಕೊಂಡಿದೆ. ಇದೊಂದು ಅಭಿವೃದ್ಧಿ ಪರವಾದ ಬಜೆಟ್ ಎಂದೂ, ಆರ್ಥಿಕ ಸುಧಾರಣೆಯ ಎರಡನೆಯ ತಲೆಮಾರಿನ ಕ್ರಮಗಳಿಗೆ ಅವಕಾಶ ಮಾಡಿಕೊಟ್ಟದೆಯೆಂದೂ ಕೋಶೀಯ ಕೊರತೆಯನ್ನು ಕೆಳಮಟ್ಟದಲ್ಲಿ ಇಟ್ಟುಕೊಳ್ಳಲು ಪ್ರಯತ್ನಪಟ್ಟದೆ ಎಂದೂ ವರ್ಣಿಸಲಾಗುತ್ತಿದೆ. ಇದೊಂದು 'ಕನಸಿನ ಬಜೆಟ್' ಎಂದು ಬಣ್ಣಿಸುವವರಿದ್ದಾರೆ. ನಿಜಕ್ಕೂ ಈ ಬಜೆಟ್ಟಿನ ಒಳಮರ್ಮವೇನು ?**

ಮೂಲವಾಗಬೇಕು. ಈ ಬಗೆಯ ಸಾಮಾನ್ಯ ನಿಯಮವನ್ನು ಪಾಲಿಸಿದ ಪಕ್ಷದಲ್ಲಿ ಬಂಡವಾಳ ಖಾತೆಯ ವ್ಯಯವನ್ನು ಭರಿಸಲು ಸರ್ಕಾರವೊಂದು ಸಾಲ ಎತ್ತುವ ಪ್ರಮೇಯ ಬರುವುದಿಲ್ಲ. ಕಂದಾಯ ಖಾತೆಯಲ್ಲಿನ ಮಿಗುತೆಯನ್ನು ಬಂಡವಾಳ ಖಾತೆಗೆ ವರ್ಗಾಯಿಸುವುದರಿಂದ ಸರ್ಕಾರದ ಸಾಲದ ಮೇಲಿನ ಅವಲಂಬನೆ ಕಡಿಮೆಯಾಗುತ್ತದೆ. ಈ ಕ್ರಮದಿಂದ ಹಣದುಬ್ಬರದ ಪರಿಣಾಮಗಳಿಲ್ಲದ ರೀತಿಯಲ್ಲಿ ಸರ್ಕಾರವು ತನ್ನ ಬಜೆಟ್ಟನ್ನು ನಿರ್ವಹಿಸಲು ಸಾಧ್ಯವಾಗುತ್ತದೆ. ಇಂತಹ ಕ್ರಮದಿಂದ ಹಣಕಾಸು ವ್ಯವಹಾರದಲ್ಲಿ ಸರ್ಕಾರವು ಒಂದು ಬಗೆಯ ಶಿಸ್ತು ಸಾಧಿಸಿಕೊಳ್ಳಬಹುದು. ಈ ಬಗೆಯಲ್ಲಿ ಬಂಡವಾಳ ಖಾತೆಯಲ್ಲಿನ ಬಂಡವಾಳ ವೆಚ್ಚವನ್ನು ಉನ್ನತ ಮಟ್ಟಕ್ಕೆ ಒಯ್ದರೆ ಅಲ್ಲಿ ಅಭಿವೃದ್ಧಿಯ ಗತಿ, ಉತ್ಪನ್ನದ ಗಾತ್ರ ಹಾಗೂ ಉದ್ಯೋಗದ ಪ್ರಮಾಣ ಅಧಿಕಗೊಳ್ಳುತ್ತವೆ. ಬಂಡವಾಳ ಹೂಡಿಕೆಯು ಅಭಿವೃದ್ಧಿಯ ಮೂಲದ್ರವ್ಯವೆಂದಾದರೆ ಬಜೆಟ್ಟಿನಲ್ಲಿ ಬಂಡವಾಳ ವೆಚ್ಚವನ್ನು ಉನ್ನತ ಮಟ್ಟದಲ್ಲಿಟ್ಟುಕೊಳ್ಳಬೇಕಾಗುತ್ತದೆ.

**ಕೇಂದ್ರದ ಬರಡು ಬಜೆಟ್**

ನಮ್ಮ ಕೇಂದ್ರ ಸರ್ಕಾರವು ಬಜೆಟ್ಟಿನ ಎರಡು ಭಾಗಗಳನ್ನು ಹೇಗೆ ನಿರ್ವಹಿಸುತ್ತಿದೆ ? ಅದು ಕಂದಾಯ ಖಾತೆಯಲ್ಲಿ ಮಿಗುತೆಯನ್ನು ಸಾಧಿಸಿಕೊಳ್ಳುತ್ತಿದೆಯೆ ? ಅಥವಾ ಬಂಡವಾಳ ಖಾತೆಯಲ್ಲಿ ಮಿಗುತೆಯನ್ನು ಸಾಧಿಸಿಕೊಳ್ಳುತ್ತಿದೆಯೊ ? ಬಂಡವಾಳ ಖಾತೆಯ ಆಯವನ್ನು ಸಾಲದಿಂದ ರೂಢಿಸಿಕೊಳ್ಳಲಾಗುತ್ತಿದೆಯೊ ? ದುರದೃಷ್ಟದ ಸಂಗತಿಯೆಂದರೆ ಉದಾರವಾದಿ ಪರ್ವದ ಹತ್ತು ವರ್ಷಗಳಲ್ಲಿ ಕೇಂದ್ರ ಸರ್ಕಾರವು ತನ್ನ ಬಜೆಟ್ಟಿನ ಕಂದಾಯ ಖಾತೆ ಹಾಗೂ ಬಂಡವಾಳ ಖಾತೆಗಳ ಸಂಬಂಧವನ್ನು ಸರಿಯಾಗಿ ನಿರ್ವಹಿಸುತ್ತಿಲ್ಲ. ಸರ್ಕಾರವು ಉದ್ದೇಶಪೂರ್ವಕವಾಗಿ ಬಂಡವಾಳ ವೆಚ್ಚವನ್ನು ಕೆಳಮಟ್ಟದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದೆ. ಹೀಗೆ ಮಾಡುವುದರ ಮೂಲಕ ಬಂಡವಾಳ ಖಾತೆಯಲ್ಲಿ ಮಿಗುತೆ ಉಂಟಾಗುವಂತೆ ಮಾಡಲಾಗುತ್ತಿದೆ. ಆದರೆ ಬಂಡವಾಳ ಖಾತೆಯ ಆಯವನ್ನು ಮಾತ್ರ ಉನ್ನತ ಮಟ್ಟದಲ್ಲಿಟ್ಟುಕೊಂಡಿದೆ. ಬಂಡವಾಳ ಖಾತೆಯ ಆಯದ ಪ್ರಮಾಣವು ವ್ಯಯದ ಪ್ರಮಾಣಕ್ಕಿಂತ ಉನ್ನತ ಗತಿಯಲ್ಲಿ ಏರಿಕೆಯಾಗುತ್ತ ನಡೆದಿದೆ.

ಇದಕ್ಕೆ ಪ್ರತಿಯಾಗಿ ಕಂದಾಯ ಬಜೆಟ್ಟಿನ ಕಥೆ ಬೇರೆಯೇ ಪರಿಯದ್ದಾಗಿದೆ. ಅಲ್ಲಿನ ಖರ್ಚನ್ನು ನಿಯಂತ್ರಿಸುವುದರಲ್ಲಿ ಸರ್ಕಾರವು ಸಂಪೂರ್ಣವಾಗಿ ವಿಫಲಗೊಂಡಿದೆ. ಅದೇ ರೀತಿ ಕಂದಾಯ ಖಾತೆಯಲ್ಲಿನ 'ಆಯ'ದ ಭಾಗವನ್ನು ಸಮೃದ್ಧಗೊಳಿಸಿಕೊಳ್ಳುವುದರಲ್ಲೂ ಅದು ವಿಫಲಗೊಂಡಿದೆ. ಇದರಿಂದಾಗಿ ಕಂದಾಯ ಖಾತೆಯಲ್ಲಿ ಕೊರತೆಯ ಪ್ರಮಾಣ ಮಿತಿಮೀರಿ ಬೆಳೆಯುತ್ತಿದೆ. ಇದಕ್ಕೆ ಸಂಬಂಧಿಸಿದ ವಿವರಗಳನ್ನು ಕೋಷ್ಟಕ ೧ರಲ್ಲಿ ನೀಡಿದೆ.

ಕೋಷ್ಟಕ-೧ರಲ್ಲಿ ಉದಾರವಾದಿ ಪರ್ವದ ಹತ್ತು ವರ್ಷಗಳ ಅವಧಿಯಲ್ಲಿ (೧೯೯೧-೯೨ ರಿಂದ ೨೦೦೦-೨೦೦೧) ಕೇಂದ್ರ ಬಜೆಟ್ಟಿನ ಮುಖ್ಯವಾದ ಹತ್ತು ಬಾಬತ್ತುಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ತೋರಿಸಲಾಗಿದೆ. ಈ ಬಾಬತ್ತುಗಳು ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಹೇಗೆ ಬದಲಾಗುತ್ತವೆ ಎಂಬುದನ್ನು ತೋರಿಸಲಾಗಿದೆ. ಕೋಷ್ಟಕದಲ್ಲಿ ತೋರಿಸಿರುವ ಹತ್ತು ಬಾಬತ್ತುಗಳಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಏರಿಕೆ ಕಂಡಿರುವ ಸಂಗತಿಯೆಂದರೆ ಬಂಡವಾಳ ಖಾತೆಯಲ್ಲಿನ ವೆಚ್ಚ, ಕಳೆದ ಹತ್ತು ವರ್ಷಗಳಲ್ಲಿ ಅದರ ಏರಿಕೆ ಕೇವಲ ಶೇ. ೭೮.೫೧. ಅತ್ಯಂತ ಅಧಿಕ ಪ್ರಮಾಣದ ಏರಿಕೆ ಕಂಡಿರುವ ಬಾಬತ್ತು ಎಂದರೆ ಬಂಡವಾಳ ಖಾತೆಯಲ್ಲಿನ ಮಿಗುತೆ (ಶೇ. ೭೨೨.೫೬). ಬಂಡವಾಳ ಖಾತೆಯಲ್ಲಿನ ವೆಚ್ಚವು ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಹತ್ತು ವರ್ಷಗಳ ಅವಧಿಯಲ್ಲಿ ಶೇ. ೪.೯೪ ರಿಂದ ಶೇ. ೨.೬೦ಕ್ಕೆ ಇಳಿದಿದೆ. ಬಂಡವಾಳ ಖಾತೆಯಲ್ಲಿನ ಮಿಗುತೆಯು ಇದೇ ಅವಧಿಯಲ್ಲಿ ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಶೇ. ೧.೬೦ ರಿಂದ ಶೇ. ೩.೮೯ಕ್ಕೆ ಏರಿದೆ.

* * *

ಇದಕ್ಕೆ ಪ್ರತಿಯಾಗಿ ಕಂದಾಯ ಖಾತೆಯ ವೆಚ್ಚವು ತೀವ್ರಗತಿಯಲ್ಲಿ ಬೆಳೆಯುತ್ತಿದೆ. ಆ ಗತಿಗೆ ಅನುಗುಣವಾಗಿ ಕಂದಾಯ ಖಾತೆಯಲ್ಲಿನ ಕೊರತೆಯೂ ಅಗಾಧವಾಗಿ ಬೆಳೆಯುತ್ತಿದೆ. ಕಂದಾಯ ಆಯದ ಬೆಳವಣಿಗೆ ಗತಿಯು ಕಂದಾಯ ವ್ಯಯದ ಬೆಳವಣಿಗೆಯ ಗತಿಗಿಂತ ಕೆಳಮಟ್ಟದಲ್ಲಿದೆ. ಕಂದಾಯ ಆಯವು ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಕುಸಿದಿದ್ದರೆ ಕಂದಾಯ ವ್ಯಯವು ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಏರಿಕೆಯಾಗಿದೆ. ಕೇಂದ್ರ ಬಜೆಟ್ಟಿನ ಕಂದಾಯ ಖಾತೆಯಲ್ಲಿನ ಬದಲಾವಣೆಗಳಿಗೆ ವಿರುದ್ಧವಾಗಿ ಬಂಡವಾಳ ಖಾತೆಯಲ್ಲಿನ ಬದಲಾವಣೆಗಳು ನಡೆದಿವೆ.

ಕೇಂದ್ರ ಬಜೆಟ್ಟಿನ ಒಟ್ಟು ವ್ಯಯದಲ್ಲಿ ಬಂಡವಾಳ ಖಾತೆ ವೆಚ್ಚದ ಪ್ರಮಾಣವು ೧೯೯೧-೯೨ರಲ್ಲಿ ಶೇ. ೨೬.೧೪ ರಷ್ಟಿದ್ದುದು ೨೦೦೦-೨೦೦೧ರಲ್ಲಿ ಅದು ಶೇ. ೧೫.೪೯ಕ್ಕೆ ಕುಸಿದಿದೆ. ಆದರೆ ಇದೇ ಅವಧಿಯಲ್ಲಿ ಕಂದಾಯ ವೆಚ್ಚದ ಪ್ರಮಾಣವು ಒಟ್ಟು ವೆಚ್ಚಕ್ಕೆ ಸಾಪೇಕ್ಷವಾಗಿ ಶೇ. ೭೩.೮೬ ರಿಂದ ಶೇ. ೮೪.೫೧ಕ್ಕೆ ಜಿಗಿದಿದೆ. ಕೇಂದ್ರ ಸರ್ಕಾರದ ಇಡೀ ಬಜೆಟ್ಟು ಕಂದಾಯಮಯವಾಗುತ್ತ ನಡೆದಿದೆ. ಅದರ ಬಂಡವಾಳದ ನೆಲೆ ಕುಸಿಯುತ್ತಾ ನಡೆದಿದೆ. ಇದು ಅತ್ಯಂತ ಆತಂಕಕಾರಿ ಸಂಗತಿಯಾಗಿದೆ. ಕೇಂದ್ರ ಬಜೆಟ್ಟಿನಲ್ಲಿ ಕಂದಾಯ ಖಾತೆಯ ಗಾತ್ರವು ಮಿತಿಮೀರಿ ಬೆಳೆಯುತ್ತಿದ್ದು, ಬಂಡವಾಳ ಖಾತೆಯ ಗಾತ್ರವು ಕಿರಿದಾಗುತ್ತ ನಡೆದಿದೆ.

**ಕೊರತೆ ತುಂಬಲು ಮಿಗುತೆ**

ಕೇಂದ್ರ ಸರ್ಕಾರವು ತನ್ನ ಬಜೆಟ್ಟಿನ ಕಂದಾಯ ಖಾತೆ ಹಾಗೂ ಬಂಡವಾಳ ಖಾತೆಗಳ ಸಂಬಂಧವನ್ನು ನಿರ್ವಹಿಸುತ್ತಿರುವ ರೀತಿ ಹೇಗೆ ಆರ್ಥಿಕತೆಗೆ-ಅಭಿವೃದ್ಧಿಗೆ ಆತಂಕಕಾರಿಯಾಗಿದೆ, ಅಪಾಯಕಾರಿಯಾಗಿದೆ ಎಂಬುದು ಅದು ಕಂದಾಯ ಖಾತೆಯಲ್ಲಿನ ಕೊರತೆಯನ್ನು ತುಂಬಲು ಬಂಡವಾಳ ಖಾತೆಯ ಮಿಗುತೆಯನ್ನು ಬಳಸಿಕೊಳ್ಳುತ್ತಿರುವುದರಲ್ಲಿ ಸ್ಪಷ್ಟವಾಗುತ್ತದೆ. ಉದಾರವಾದಿ ಪರ್ವದ ಮೊದಲ ವರ್ಷದಲ್ಲಿ (೧೯೯೧-೯೨) ಕಂದಾಯ ಖಾತೆಯಲ್ಲಿನ ಕೊರತೆಯ ಶೇ. ೫೭.೮೪ರಷ್ಟನ್ನು ಬಂಡವಾಳ ಖಾತೆಯ ಮಿಗುತೆಯಿಂದ ತುಂಬಿಕೊಳ್ಳಲಾಗುತ್ತಿತ್ತು. ಆದರೆ ಇಂದು ಕಂದಾಯ ಖಾತೆಯ ಇಡೀ ಕೊರತೆಯನ್ನು ಬಂಡವಾಳ ಖಾತೆಯ ಮಿಗುತೆಯಿಂದ ತುಂಬಿಕೊಳ್ಳಲಾಗುತ್ತಿದೆ. ಕಂದಾಯ ಖಾತೆಯಲ್ಲಿನ ಕೊರತೆಯು ವಾರ್ಷಿಕ ಶೇ. ೩೭.೫೮ರ ಪ್ರಮಾಣದಲ್ಲಿ ಬೆಳೆಯುತ್ತಿದ್ದರೆ ಬಂಡವಾಳ ಖಾತೆಯ ಮಿಗುತೆಯು ವಾರ್ಷಿಕ ಶೇ. ೭೨.೨೬ರ ಪ್ರಮಾಣದಲ್ಲಿ ಬೆಳೆಯುತ್ತಿದೆ. ಕಂದಾಯ ಖಾತೆಯಲ್ಲಿನ ಕೊರತೆಯನ್ನು ತುಂಬಿಕೊಳ್ಳುವ ಸಲುವಾಗಿಯೇ ಬಂಡವಾಳ ಖಾತೆಯಲ್ಲಿ ಮಿಗುತೆಯನ್ನು ಪ್ರಜ್ಞಾಪೂರ್ವಕವಾಗಿ ಸೃಷ್ಟಿಸಲಾಗುತ್ತಿದೆ. ಸರ್ಕಾರದ ಹಣಕಾಸು ವ್ಯವಹಾರಕ್ಕೆ ಸಂಬಂಧಿಸಿದಂತೆ ಅಶಿಸ್ತು ಹಾಗೂ ಬೇಜವಾಬುದಾರಿತನಗಳು ಇದಕ್ಕಿಂತ ತೀವ್ರವಾದ ಉಲ್ಬಣಾವಸ್ಥೆ ಮುಟ್ಟುವುದು ಸಾಧ್ಯವಿಲ್ಲ.

ಸರ್ಕಾರವು ಉದ್ದೇಶಪೂರ್ವಕವಾಗಿ ಬಂಡವಾಳ ಖಾತೆಯಲ್ಲಿ ವೆಚ್ಚವನ್ನು ಕೆಳಮಟ್ಟದಲ್ಲಿಟ್ಟುಕೊಳ್ಳಲು

**ಉದಾರವಾದಿ ಪರ್ವದ ಕೇಂದ್ರ ಬಜೆಟ್ಟಿನ ಒಲವುಗಳು : ೧೯೯೧-೯೨ ರಿಂದ ೨೦೦೦-೨೦೦೧**

ಕೋಷ್ಟಕ - ೧

| ಕ್ರಮ ಸಂಖ್ಯೆ | ಬಾಬತ್ತುಗಳು | ಕಾಲಾವಧಿ | | |
|---|---|---|---|---|
| | | ೧೯೯೧-೯೨ ನಿಜ ಅಂಕಿಗಳು | ೨೦೦೦-೨೦೦೧ ಪರಿಷ್ಕೃತ ಅಂಕಿಗಳು | ಬದಲಾವಣೆ (ಶೇಕಡಾ) |
| | | (ಕೋಟಿ ರೂಪಾಯಿಗಳಲ್ಲಿ) | | |
| ೦೧. | ಒಟ್ಟು ಆಯ | ೧,೦೪,೫೫೯ (೧೭.೨೪) | ೩,೩೫,೫೨೩ (೧೬.೮೬) | ೨೨೦.೮೯ |
| ೦೨. | ಒಟ್ಟು ವ್ಯಯ | ೧,೧೧,೪೧೪ (೧೮.೯೧) | ೩,೩೫,೫೨೩ (೧೬.೮೬) | ೨೦೧.೧೫ |
| ೦೩. | ಕಂದಾಯ ಆಯ | ೬೬,೩೦೧ (೧೧.೨೦) | ೨,೦೬,೧೬೬ (೧೦.೩೬) | ೨೧೨.೨೩ |
| ೦೪. | ಬಂಡವಾಳ ಆಯ | ೩೮,೫೨೮ (೬.೫೪) | ೧,೨೯,೩೫೭ (೬.೫೦) | ೨೩೫.೭೫ |
| ೦೫. | ಒಟ್ಟು ಕಂದಾಯಖಾತೆ ವೆಚ್ಚ | ೮೨,೨೯೨ (೧೩.೯೬) | ೨,೮೩,೫೩೫ (೧೪.೨೫) | ೨೪೨.೭೮ |
| ೦೬. | ಒಟ್ಟು ಬಂಡವಾಳಖಾತೆ ವೆಚ್ಚ | ೨೯,೧೨೨ (೪.೯೪) | ೫೧,೯೮೭ (೨.೬೦) | ೭೮.೫೧ |
| ೦೭. | ಯೋಜನಾ ವೆಚ್ಚ | ೩೦,೯೬೧ (೫.೨೫) | ೮೬,೨೩೮ (೪.೩೩) | ೧೭೮.೫೪ |
| ೦೮. | ಯೋಜನೇತರ ವೆಚ್ಚ | ೮೦,೪೫೩ (೧೩.೬೫) | ೨,೪೯,೨೮೪ (೧೨.೫೩) | ೨೦೯.೮೫ |
| ೦೯. | ಕಂದಾಯಖಾತೆ ಕೊರತೆ | ೧೬,೨೬೧ (೨.೭೩) | ೭೭,೩೬೯ (೩.೮೯) | ೩೭೫.೭೯ |
| ೧೦. | ಬಂಡವಾಳಖಾತೆ ಮಿಗುತೆ | ೯,೪೦೬ (೧.೬೦) | ೭೭,೩೭೦ (೩.೮೯) | ೭೨೨.೫೬ |
| | ಒಟ್ಟು ದೇಶೀಯ ಉತ್ಪನ್ನ (ಜಿ.ಡಿ.ಪಿ) ಚಾಲ್ತಿ ಬೆಲೆ | ೫,೮೯,೨೭೩ | ೧೯,೮೯,೫೦೦ | ೨೩೭.೬೨ |

ಮೂಲ : ಕೇಂದ್ರ ಸರ್ಕಾರದ ಬಜೆಟ್ ಪ್ರಕಟಣೆಗಳು.

ಟಿಪ್ಪಣಿ : ಆವರಣದಲ್ಲಿ ಕೊಟ್ಟಿರುವ ಅಂಶಗಳು ಜಿಡಿಪಿಗೆ ಸಾಪೇಕ್ಷ ಪ್ರಮಾಣ ತೋರಿಸುತ್ತವೆ.

ಪ್ರಯತ್ನಿಸುತ್ತಿದೆ. ಆದ್ದರಿಂದ ಅದರ ವಾರ್ಷಿಕ ಬೆಳವಣಿಗೆ ಪ್ರಮಾಣ ಕನಿಷ್ಠಮಟ್ಟದಲ್ಲಿದೆ (ಶೇ. ೭.೮೫). ಆದರೆ ಕೇಂದ್ರ ಬಜೆಟ್ಟಿನ ಒಟ್ಟು ವೆಚ್ಚ ಹಾಗೂ ಕಂದಾಯ ಖಾತೆಯಲ್ಲಿನ ವೆಚ್ಚಗಳು ಕ್ರಮವಾಗಿ ವಾರ್ಷಿಕ ಶೇ. ೨೦.೧೧ ಮತ್ತು ಶೇ. ೨೪.೨೮ರ ಪ್ರಮಾಣದಲ್ಲಿ ಬೆಳೆಯುತ್ತಿವೆ.

ಉದಾರವಾದಿ ನೀತಿಗೆ ಅನುಗುಣವಾಗಿ ಸರ್ಕಾರವು ತನ್ನ ಖರ್ಚು, ವೆಚ್ಚಗಳನ್ನು ಕೆಳಮಟ್ಟದಲ್ಲಿಟ್ಟುಕೊಳ್ಳಬೇಕು ಎಂಬುದೇನೊ ಸರಿ. ಆದರೆ ಇಲ್ಲಿರುವ ವಿಕೃತಿಗಳನ್ನು ನಾವು ಗಮನಿಸಬೇಕಾಗುತ್ತದೆ. ಕೇಂದ್ರ ಸರ್ಕಾರವು ತನ್ನ ಬಂಡವಾಳ ವೆಚ್ಚವನ್ನು ಕಡಿತಗೊಳಿಸುತ್ತಿದೆಯೇ ವಿನಾ ಕಂದಾಯ ವೆಚ್ಚವನ್ನಲ್ಲ. ಕಂದಾಯ ಖಾತೆಗೆ ಸಂಬಂಧಿಸಿದಂತೆ ಸರ್ಕಾರವು ಆಯದ ಪ್ರಮಾಣವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿಲ್ಲ ಮತ್ತು ಕಂದಾಯ ವೆಚ್ಚವನ್ನು ನಿಯಂತ್ರಿಸಲೂ ಪ್ರಯತ್ನಿಸುತ್ತಿಲ್ಲ. ಇದರಿಂದಾಗಿ ಅಲ್ಲಿ ಕೊರತೆ ಅಗಾಧವಾಗಿ ಬೆಳೆಯುತ್ತಿದೆ. ಕಂದಾಯ ಖಾತೆಯಲ್ಲಿನ ಎಲ್ಲ ಅಧ್ವಾನಗಳನ್ನು ಸರಿಪಡಿಸಿಕೊಳ್ಳಲು ಸರ್ಕಾರವು ಬಂಡವಾಳ ಖಾತೆಯನ್ನು ಬಳಸಿಕೊಳ್ಳುತ್ತಿರುವುದು ತುಂಬಾ ದುರದೃಷ್ಟಕರ ಸಂಗತಿಯಾಗಿದೆ. ಬಂಡವಾಳ ಖಾತೆಯಲ್ಲಿ ಖರ್ಚನ್ನು ಕೆಳಮಟ್ಟದಲ್ಲಿಟ್ಟುಕೊಂಡು ಸರ್ಕಾರವು ಅಲ್ಲಿ ಮಿಗುತೆಯನ್ನು ಸಾಧಿಸಿಕೊಳ್ಳುತ್ತಿದೆ. ಬಂಡವಾಳ ಖಾತೆಯ ಆಯದ ಮುಖ್ಯ ಆಕರ ಸಾರ್ವಜನಿಕರಿಂದ ಎತ್ತುವ ಸಾಲ. ಸಾಲ ತಂದ ರಾಶಿಯನ್ನು ಉತ್ಪನ್ನಕಾರಕ ಚಟುವಟಿಕೆಗಳ ಮೇಲೆ ವಿನಿಯೋಗಿಸದೆ ಅದನ್ನು ಕಂದಾಯ ಖಾತೆಯ ಕೊರತೆ ತುಂಬಲು ಬಳಸುತ್ತಿರುವುದು ಅತ್ಯಂತ ಅಪಾಯಕಾರಿ ಕ್ರಮವಾಗಿದೆ. ಸಾಲ ತಂದ ಮೊತ್ತದಲ್ಲಿ ಸರ್ಕಾರದ ಚಾಲ್ತಿ ಖರ್ಚು-ವೆಚ್ಚಗಳನ್ನು, ಉಪಭೋಗದ ಖರ್ಚನ್ನು ಭರಿಸಿಕೊಳ್ಳುವುದು ಆತಂಕಕ್ಕೆ ಕಾರಣವಾಗಿದೆ.

**ಬಡ್ಡಿ ಪಾವತಿಯ ಬವಣೆ**

ಕೇಂದ್ರ ಬಜೆಟ್ಟಿನ ಕಂದಾಯ ಖಾತೆಯಲ್ಲಿನ ಕೊರತೆ ಹಾಗೂ ಬಂಡವಾಳ ಖಾತೆಯಲ್ಲಿನ ಮಿಗುತೆಗಳ ನಡುವಿನ ಸಂಬಂಧವು ಹೇಗೆ ಅಪಾಯಕಾರಿಯಾಗಿದೆ-ಆತಂಕಕಾರಿಯಾಗಿದೆ ಎಂಬುದನ್ನು ಕೇಂದ್ರ ಸರ್ಕಾರದ ಸಾಲಕ್ಕೆ ಸಂಬಂಧಿಸಿದ ಬಡ್ಡಿ ಪಾವತಿ ಸಮಸ್ಯೆಯಿಂದ ಅರಿತುಕೊಳ್ಳಬಹುದಾಗಿದೆ. ಕೇಂದ್ರ ಸರ್ಕಾರದ ಕಂದಾಯ ವೆಚ್ಚದಲ್ಲಿ ಬಡ್ಡಿ ಪಾವತಿಯ ಪಾಲು ೧೯೯೧-೯೨ರಲ್ಲಿ ಶೇ. ೩೨.೩೨ ರಷ್ಟಿದ್ದುದು ೨೦೦೦-೨೦೦೧ರಲ್ಲಿ ಅದು ಶೇ. ೩೫.೫೦ ತಲುಪಿದೆ. ಬಡ್ಡಿ ಪಾವತಿಯು ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಇದೇ ಅವಧಿಯಲ್ಲಿ ಶೇ. ೪.೫೧ ರಿಂದ ಶೇ. ೫.೦೬ಕ್ಕೆ ಅಧಿಕಗೊಂಡಿದೆ.

ಸರ್ಕಾರವು ಪ್ರತಿ ವರ್ಷ ತನ್ನ ಖರ್ಚುಗಳನ್ನು ಭರಿಸಲು ಸಾರ್ವಜನಿಕರಿಂದ ಸಾಲ ಎತ್ತುತ್ತಿದೆ. ಇದರಿಂದಾಗಿ ಸರ್ಕಾರವು ಪ್ರತಿ ವರ್ಷ ನೀಡಬೇಕಾದ ಬಡ್ಡಿಯ ಪ್ರಮಾಣವು ಏರಿಕೆಯಾಗುತ್ತಿದೆ. ೧೯೯೧-೯೨ರಲ್ಲಿ ಬಡ್ಡಿ ಪಾವತಿ ಪ್ರಮಾಣ ರೂ. ೨೬,೫೯೬ ಕೋಟಿ ಇತ್ತು. ಆದರೆ ೨೦೦೦-೨೦೦೧ ರಲ್ಲಿ ಅದು ರೂ.೧,೦೦,೬೬೭ ಕೋಟಿಗೇರಿದೆ. ಈ ಅವಧಿಯಲ್ಲಿ ಒಟ್ಟು ವೆಚ್ಚದಲ್ಲಿ ಬಡ್ಡಿ ಪಾವತಿಯ ಪ್ರಮಾಣವು ಶೇ. ೨೩.೮೭ ರಿಂದ ಶೇ. ೩೦ಕ್ಕೆ ಏರಿದೆ. ಬಡ್ಡಿ ಪಾವತಿಯ ಸಮಸ್ಯೆ ಯಾವ ಮಟ್ಟ ತಲುಪಿದೆಯೆಂದರೆ ಸರ್ಕಾರವು ಪ್ರತಿವರ್ಷ ಎತ್ತುವ ಸಾಲವು ಬಡ್ಡಿ ಪಾವತಿ ಮಾಡಲಿಕ್ಕೆ ಸಾಕಾಗುತ್ತದೆ ಎನ್ನುವಂತಾಗಿದೆ! ಉದಾಹರಣೆಗೆ, ೨೦೦೧-೨೦೦೨ನೆಯ ಸಾಲಿನಲ್ಲಿ ಸರ್ಕಾರವು ನೀಡಬೇಕಾದ ಬಡ್ಡಿಯ ಪ್ರಮಾಣ ರೂ.೧,೧೨,೩೦೦ ಕೋಟಿ. ಸದರಿ ವರ್ಷದಲ್ಲಿ ಸರ್ಕಾರವು ಎತ್ತಲಿರುವ ಸಾಲದ ಪ್ರಮಾಣ ರೂ.೧,೧೬,೩೧೪ ಕೋಟಿ. ಸರ್ಕಾರವು ಎತ್ತುವ ಸಾಲದಲ್ಲಿ ಶೇ. ೯೬.೫೫ ರಷ್ಟು ಬಡ್ಡಿ ಪಾವತಿಗೆ ಸಲ್ಲುತ್ತದೆ. **ಹೊಸದಾಗಿ ಎತ್ತುವ ಸಾಲವು ಹಳೆ ಸಾಲದ ಬಾಬ್ತು ಬಡ್ಡಿ ನೀಡಲು ಸಾಕಾಗುವಂತಿದೆ. ಇದು ಅಪೇಕ್ಷಣೀಯ ಬೆಳವಣಿಗೆಯಲ್ಲ. ಸಾರ್ವಜನಿಕರಿಂದ ಎತ್ತಿದ ಸಾಲವನ್ನು ಆಸ್ತಿ ನಿರ್ಮಾಣ ಚಟುವಟಿಕೆಗಳ ಮೇಲೆ, ಉದ್ಯೋಗ ನಿರ್ಮಾಣ ಮಾಡುವ ಕಾಮಗಾರಿಗಳ ಮೇಲೆ ತೊಡಗಿಸಬೇಕಾದುದು ಒಂದು ಕ್ರಮ. ಅಲ್ಲದಿದ್ದರೆ ಅದು ಹೆಣಭಾರವಾಗಿ ಸರ್ಕಾರದ ಖಜಾನೆಯ ಮೇಲೆ ಬೀಳುತ್ತದೆ.**

**ಕೋಶೀಯ ಕೊರತೆಯ ಕಥೆ**

ಉದಾರವಾದಿ ಪರ್ವವು ಪ್ರಾರಂಭವಾದಾಗಿನಿಂದಲೂ ಸರ್ಕಾರವು ಬಜೆಟ್ಟಿನ ಕೋಶೀಯ ಕೊರತೆಯನ್ನು ಖಳನಾಯಕನನ್ನಾಗಿ ಮಾಡಿಬಿಟ್ಟಿದೆ. ಇಡೀ ಬಜೆಟ್ಟಿನ ಎಲ್ಲ ಪ್ರಯತ್ನಗಳೂ ಕೋಶೀಯ ಕೊರತೆಯನ್ನು ತಗ್ಗಿಸುವ ದಿಕ್ಕಿನಲ್ಲಿ ಚಲಿಸುತ್ತಿವೆ. ಸರ್ಕಾರವು ಒಂದು ಹಣಕಾಸು ವರ್ಷದಲ್ಲಿ ಮಾರುಕಟ್ಟೆಯಿಂದ ಎತ್ತಿದ ಸಾಲವೇ ಕೋಶೀಯ ಕೊರತೆಯಾಗಿದೆ. ಉದಾಹರಣೆಗೆ, ೨೦೦೧-೨೦೦೨ರಲ್ಲಿ ಸರ್ಕಾರವು ಮಾರುಕಟ್ಟೆಯಿಂದ ಎತ್ತಲಿರುವ ಸಾಲದ ಮೊತ್ತ ರೂ.೧,೧೬,೩೧೪ ಕೋಟಿ. ಸದರಿ ವರ್ಷದ ಕೋಶೀಯ ಕೊರತೆಯು ಸರ್ಕಾರವು ಸಾಲ ಎತ್ತಲಿರುವ ಮೊತ್ತಕ್ಕೆ ಸಮನಾಗಿದೆ. ಇದನ್ನು ತಗ್ಗಿಸಬೇಕು ಎಂಬುದು ಸರ್ಕಾರದ ಗುರಿಯಾಗಿದೆ.

ಕಂದಾಯ ಖಾತೆಯಲ್ಲಿನ ಕೊರತೆಯನ್ನು ಕೈಬಿಟ್ಟು ಕೇವಲ ಕೋಶೀಯ ಕೊರತೆಯ ನಿರ್ವಹಣೆ ಕಡೆಗೆ ಪೂರ್ಣ ಗಮನಹರಿಸುವುದು ಅನೇಕ ಸಮಸ್ಯೆಗಳಿಗೆ ಕಾರಣವಾಗಿದೆ. ಕಂದಾಯ ಖಾತೆಯಲ್ಲಿನ ಕೊರತೆಯನ್ನು ತಗ್ಗಿಸದೆ ಕೋಶೀಯ ಕೊರತೆಯನ್ನು ತಗ್ಗಿಸುವುದು ಸಾಧ್ಯವಿಲ್ಲ. ಏಕೆಂದರೆ ಕೋಶೀಯ ಕೊರತೆಯು ಅಗಾಧವಾಗಿ ಬೆಳೆಯಲು ಕಾರಣವಾಗಿರುವ ಅನೇಕ ಸಂಗತಿಗಳಲ್ಲಿ ಬಹು ಮುಖ್ಯವಾದುದು ಕಂದಾಯ ಖಾತೆಯಲ್ಲಿನ ಕೊರತೆ. ಸರ್ಕಾರವು ಕಂದಾಯ ಖಾತೆಯಲ್ಲಿನ 'ವ್ಯಯ'ದ ವ್ಯವಹಾರಗಳನ್ನು ನಿಯಂತ್ರಿಸಲು ಪ್ರಯತ್ನಿಸುವುದರ ಜೊತೆಗೆ ಅಲ್ಲಿನ 'ಆಯ'ದ ಪ್ರಮಾಣವನ್ನು ಸಮೃದ್ಧಗೊಳಿಸಿಕೊಳ್ಳಲು ಪ್ರಯತ್ನಿಸಬೇಕು. ಆದರೆ ಸರ್ಕಾರವು ತೆರಿಗೆಗಳನ್ನು, ಅದರಲ್ಲೂ ನೇರ ತೆರಿಗೆ ಪ್ರಮಾಣವನ್ನು, ಅಧಿಕಗೊಳಿಸಲು ಸಿದ್ಧವಿಲ್ಲ; ತನ್ನ ದೈನಂದಿನ ಖರ್ಚು-ವೆಚ್ಚಗಳನ್ನು ತಹಬಂದಿಯಲ್ಲಿಟ್ಟುಕೊಳ್ಳಲು ತಯಾರಿಲ್ಲ. ಕಂದಾಯ ಖಾತೆಯ ವ್ಯವಹಾಗಗಳನ್ನು ಬೇಕಾಬಿಟ್ಟಿ ಬಿಟ್ಟು ಕೇವಲ ಕೋಶೀಯ ಕೊರತೆಯ ಬಗ್ಗೆ ಕಾಳಜಿ ವಹಿಸುವುದರಿಂದ ಸಮಸ್ಯೆ ಬಗೆಹರಿಯುವುದಿಲ್ಲ.

ಸರ್ಕಾರವು ಬಂಡವಾಳ ಸಂಚಯನದ ಜವಾಬುದಾರಿಯನ್ನೇ ಬಿಟ್ಟುಕೊಟ್ಟರೆ ಹೇಗೆ? ಇಂದು ಸಾರ್ವಜನಿಕ ಬಂಡವಾಳ ಹೂಡಿಕೆಯು ನಿಸ್ತೇಜವಾಗಿಬಿಟ್ಟಿದೆ. ಇದರಿಂದ ಅಭಿವೃದ್ಧಿ ಕುಂಠಿತಗೊಳ್ಳುತ್ತದೆ. **ಈ ಕಾರಣಗಳಿಂದಾಗಿ ಪ್ರಸ್ತುತ ಕೇಂದ್ರ ಬಜೆಟ್ ಜನವಿರೋಧಿಯಾಗಿದೆ. ಅದು ಬಡವರ - ದುರ್ಬಲರ - ವಂಚಿತರ - ಮಹಿಳೆಯರ ಪರವಾಗಿಲ್ಲ.** ಬಂಡವಾಳ ಸಂಚಯನದ ಜವಾಬುದಾರಿಯನ್ನು ಬಿಟ್ಟುಕೊಟ್ಟು ಅಭಿವೃದ್ಧಿಯನ್ನು ಉನ್ನತಮಟ್ಟಕ್ಕೆ ಒಯ್ಯುತ್ತೇವೆ ಎನ್ನುವುದು ಕೇವಲ ಒಂದು ಭ್ರಮೆ. ಮೊದಲು ಕೇಂದ್ರ ಸರ್ಕಾರವು ತನ್ನ ಬಜೆಟ್ಟಿನಲ್ಲಿ ಕುಸಿಯುತ್ತಿರುವ ಬಂಡವಾಳ ವೆಚ್ಚದ ಪ್ರಮಾಣವನ್ನು ತಡೆಯಬೇಕು ಮತ್ತು ಅದನ್ನು ಅಧಿಕಗೊಳಿಸಬೇಕು. ಸರ್ಕಾರವು ಕಂದಾಯ ಖಾತೆಯಲ್ಲಿ ಉಳಿತಾಯ ಮಾಡಬೇಕು.

ಹೀಗೆ ಕಂದಾಯ ಖಾತೆಯಲ್ಲಿ ಉಂಟಾದ ಉಳಿತಾಯವನ್ನು ಬಂಡವಾಳ ಖಾತೆಗೆ ವರ್ಗಾಯಿಸಿದರೆ ಆರ್ಥಿಕತೆಯಲ್ಲಿ ಬಂಡವಾಳ ಸಂಚಯನವು ಸಾಧ್ಯವಾಗುತ್ತದೆ. ಆದರೆ ಈಗ ಕಂದಾಯ ಖಾತೆಯಲ್ಲಿ ಕೊರತೆಯಿದೆ. ಕೊರತೆ ಉಂಟಾಗಬೇಕಾದುದು ಬಂಡವಾಳ ಖಾತೆಯಲ್ಲಿ ಎಂಬುದನ್ನು ಸರ್ಕಾರವು ಮನಗಾಣಬೇಕು. **ಇಂದು ಗೋದಾಮುಗಳಲ್ಲಿ ಕೊಳೆಯುತ್ತ ಬಿದ್ದಿರುವ ಆಹಾರ ಧಾನ್ಯವನ್ನು ಬಂಡವಾಳವಾಗಿ ಬಳಸಿಕೊಳ್ಳುವ ಅವಕಾಶವನ್ನು ಸರ್ಕಾರ ಬಿಟ್ಟುಕೊಟ್ಟಿದೆ. ಸರ್ಕಾರಿ ಗೋದಾಮುಗಳಿಂದ ಆಹಾರ ಪದಾರ್ಥವನ್ನು ಒಯ್ಯುವವರೇ ಇಲ್ಲದಂತಾಗಿದೆ. ಪರಿಸ್ಥಿತಿ ಹೀಗಿರುವಾಗ ಹಣಕಾಸು ಮಂತ್ರಿಗಳು ಅಗಾಧವಾಗಿ ಸಂಗ್ರಹಗೊಂಡಿರುವ ಆಹಾರ ದಾಸ್ತಾನನ್ನು ಉಪಯೋಗಿಸುವ ಬಗ್ಗೆ ಯೋಚಿಸಬೇಕಾಗಿತ್ತು.** ಬಂಡವಾಳ ಖಾತೆಯಲ್ಲಿನ ವೆಚ್ಚವನ್ನು ಕಡಿತಗೊಳಿಸುವುದಕ್ಕೆ ಪ್ರತಿಯಾಗಿ ಅದನ್ನು ಉದ್ಯೋಗ ದೃಢೀಕರಣ ಕಾಮಗಾರಿಗಳ ಮೇಲೆ ವಿನಿಯೋಜನೆ ಮಾಡಬಹುದಿತ್ತು. ಈ ಕಾಮಗಾರಿಗಳಿಗಾಗಿ ಅಪಾರವಾಗಿ ಸಂಗ್ರಹವಾಗಿರುವ ಆಹಾರ ದಾಸ್ತಾನನ್ನು ಬಳಸಬಹುದಿತ್ತು. **ಇಂತಹ ಕ್ರಮದಿಂದ ಸರ್ಕಾರವು 'ಆಹಾರ ಭದ್ರತೆ', 'ಉದ್ಯೋಗ ಭರವಸೆ' ಮತ್ತು 'ಆಸ್ತಿ ನಿರ್ಮಾಣ' ಉದ್ದೇಶಗಳನ್ನು ಏಕಕಾಲಕ್ಕೆ ಈಡೇರಿಸಿಕೊಳ್ಳಬಹುದಿತ್ತು. ಬಡವರ ಬದುಕಿನ ಬಗ್ಗೆ ಬಜೆಟ್ಟಿನಲ್ಲಿ ಯಾವುದೇ ಪ್ರಸ್ತಾಪವಿಲ್ಲ.** ಉದಾರವಾದಿ ಪರ್ವದ ಬಜೆಟ್ಟುಗಳಲ್ಲಿ ಬಡವರ - ವಂಚಿತರ - ಮಹಿಳೆಯರ ಯಾವುದೇ ನಿರ್ದಿಷ್ಟ ಕಾರ್ಯಕ್ರಮಗಳು ಜಾರಿಗೊಂಡಿಲ್ಲ. ಪರಿಸ್ಥಿತಿ ಹೀಗಿರುವಾಗ ಸರ್ಕಾರವು ಬಂಡವಾಳ ವೆಚ್ಚವನ್ನು ಯಾಕೆ ಕೆಳಮಟ್ಟದಲ್ಲಿಟ್ಟುಕೊಂಡಿದೆ ಎಂಬುದು ನಮಗೆ ಅರ್ಥವಾಗುವುದಿಲ್ಲ.

ಒಟ್ಟಾರೆ ಈ ದೇಶದಲ್ಲಿ ಆಹಾರ ದುಃಸ್ಥಿತಿಯಿಂದ ನರಳುತ್ತಿರುವ ೩೫ ಕೋಟಿ ವಂಚಿತರಿಗೆ ಕೇಂದ್ರ ಬಜೆಟ್ಟಿನಿಂದ ಯಾವುದೇ ಪ್ರಯೋಜನವಿಲ್ಲವಾಗಿದೆ. ಸಾರ್ವಜನಿಕ ಬಂಡವಾಳ ಸಂಚಯನದ ಜವಾಬುದಾರಿಯನ್ನೇ ಬಿಟ್ಟುಕೊಟ್ಟಿರುವ ಸರ್ಕಾರವು ಉಳ್ಳವರಿಗಾಗಿ - ಕಾರುಗಳಿರುವವರಿಗಾಗಿ - ಬಜೆಟ್ ಸಿದ್ಧಪಡಿಸುತ್ತಿದೆ. **ಇದು ಜನರ ಬಜೆಟ್ ಅಲ್ಲ, ಇಲ್ಲಿ ಕಾಮಗಾರಿಗಳಿಗಿಂತ ಕಾರು - ಬಾರು - ದರಬಾರುಗಳಿಗೆ ಹೆಚ್ಚಿನ ಆದ್ಯತೆ ಒದಗಿರುವಂತೆ ಕಾಣುತ್ತಿದೆ. ಇಂದು ಬಜೆಟ್ಟು ಅಪ್ರಸ್ತುತವಾಗುತ್ತಿದೆ.** ಆರ್ಥಿಕತೆಯ ಒಲವು - ನಿಲವುಗಳನ್ನು ನಿರ್ಧರಿಸುವ ನಿರ್ಣಾಯಕ ಪಾತ್ರವನ್ನು ನಿರ್ವಹಿಸುವ ಸಾಮರ್ಥ್ಯ ಬಜೆಟ್ಟಿಗಿಲ್ಲ. ಕೇಂದ್ರ ಬಜೆಟ್ಟಿನ ಆಯ - ವ್ಯಯ - ಎರಡೂ ಸಹ ಜಿ.ಡಿ.ಪಿ.ಗೆ ಸಾಪೇಕ್ಷವಾಗಿ ಕಡಿಮೆಯಾಗುತ್ತಾ ನಡೆದಿದೆ. ಇಂತಹ ಬಜೆಟ್ಟಿನಿಂದ ಬಡವರು ಹೆಚ್ಚಿನದೇನನ್ನೂ ನಿರೀಕ್ಷಿಸುವುದು ಸಾಧ್ಯವಿಲ್ಲ.

**ಟಿ. ಆರ್. ಚಂದ್ರಶೇಖರ್**
ಪ್ರವಾಚಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಕೋಲಾರದ ಚಿನ್ನದ ಗಣಿ

## ಗಣಿ ಹಾಗೂ ಕಾರ್ಮಿಕರ ಭವಿಷ್ಯದೊಂದಿಗೆ ಚೆಲ್ಲಾಟವಾಡುತ್ತಿರುವ ಕೇಂದ್ರ ಸರಕಾರ

*ಕೋಲಾರದ ಚಿನ್ನದ ಗಣಿಯ ಸಮಸ್ಯೆಗಳನ್ನು ಕುರಿತ ಈ ಲೇಖನವನ್ನು ಬರೆದಿರುವ ನ್ಯಾಯವಾದಿ, ಕಾರ್ಮಿಕ ನಾಯಕ ಶ್ರೀ ಎಂ. ಸಿ. ನರಸಿಂಹನ್ ಅವರು ಕೆ. ಜಿ. ಎಫ್.ನಿಂದಲೇ ೧೯೫೬ರಲ್ಲಿ ಜರುಗಿದ ಚುನಾವಣೆಯಲ್ಲಿ ರಾಜ್ಯದ ವಿಧಾನಸಭೆಗೆ ಆಯ್ಕೆಯಾಗಿದ್ದವರು. ಲೇಖನದ ಕಡೆಯ ಭಾಗದಲ್ಲಿ ರಾಜ್ಯದ ಹೈಕೋರ್ಟ್‌ಗೆ ಗಣಿಯನ್ನು ಪುನರಾರಂಭಿಸುವುದರ ಬಗ್ಗೆ ಸಲ್ಲಿಸಿದ ರಿಟ್ ಅರ್ಜಿ ಸ್ವೀಕೃತವಾಗಿರುವುದರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಇದೇ ಮಾರ್ಚ್ ೧೨ರಂದು ಹೈಕೋರ್ಟ್ ಚಿನ್ನದ ಗಣಿಯನ್ನು ಮುಚ್ಚುವುದರ ಬಗ್ಗೆ ಜನವರಿ ೨೯ರಂದು ಕೇಂದ್ರ ಸರಕಾರ ಹೊರಡಿಸಿದ್ದ ಅಧಿಸೂಚನೆಯನ್ನು ರದ್ದುಗೊಳಿಸಿದೆ. ಗಣಿಯನ್ನು ಪುನರುಜ್ಜೀವನಗೊಳಿಸಲು ಬಿ. ಐ. ಎಫ್.ಆರ್. ಕೂಡಲೇ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಿದೆ. ಗಣಿಯೊಳಗಿಳಿಯಲು ನೌಕರರು ಸಾಲುಗಟ್ಟಿ ನಿಂತಿದ್ದಾರೆ. ಇಷ್ಟಾದರೂ ಕೇಂದ್ರ ಸರ್ಕಾರವಾಗಲಿ, ಆಡಳಿತ ವರ್ಗದವರೇ ಆಗಲಿ ಚಕಾರವೆತ್ತಿಲ್ಲ. ಗಣಿಗಾರಿಕೆಯನ್ನು ಪುನರಾರಂಭಿಸುವುದರ ಬಗ್ಗೆ ಇದುವರೆಗೂ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ. ಎಲ್ಲವೂ ತ್ರಿಶಂಕು ಪರಿಸ್ಥಿತಿಯಲ್ಲಿದೆ. ಮುಂದೇನು ಎಂಬುದು ಕಾರ್ಮಿಕರ ಪ್ರಶ್ನೆ, ರಾಜ್ಯದ ಜನತೆಯ ಪ್ರಶ್ನೆ.*

*ಬಿ.ಐ.ಎಫ್.ಆರ್. ಮತ್ತು ಕೇಂದ್ರಸರಕಾರದ ಜನವಿರೋಧಿ ಆರ್ಥಿಕ ಧೋರಣೆಗಳೇ ಗಣಿಯ ಇಂದಿನ ದುರಂತಮಯ ಪರಿಸ್ಥಿತಿಗೆ ಕಾರಣ ಎಂಬುದನ್ನು ಈ ಲೇಖನದ ಅನೇಕ ವಿವರಗಳು, ಅಂಕಿಅಂಶಗಳು ಪುಷ್ಟೀಕರಿಸುತ್ತವೆ.*

ಇಂದಿನ ದಿನಗಳಲ್ಲಿ ಆಳುವ ವರ್ಗದ ಯಾವುದೇ ಆರ್ಥಿಕ ಚಟುವಟಿಕೆಗಳಲ್ಲಿ ಜನರ ಹಿತಾಸಕ್ತಿಗಳನ್ನು ಬದಿಗೊತ್ತಿ ಲಾಭಗಳಿಕೆಯನ್ನೇ ಪರಮೋಚ್ಚ ಗುರಿಯನ್ನಾಗಿ ಮಾಡಿಕೊಂಡಿರುವುದು ಎದ್ದುಕಾಣುತ್ತಿದೆ.

ವಿಶ್ವ ವ್ಯಾಪಾರ ಸಂಸ್ಥೆ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವಬ್ಯಾಂಕುಗಳ ಫರ್ಮಾನುಗಳಿಗನುಸಾರವಾಗಿ ಕೇಂದ್ರ ಸರಕಾರ ರೂಪಿಸಿಕೊಂಡು ಬರುತ್ತಿರುವ ಅಮಾನವೀಯ ಆರ್ಥಿಕ ನೀತಿಗಳಿಗೆ ಬಲಿಯಾಗುತ್ತಿರುವ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಒಂದಲ್ಲ ಎರಡಲ್ಲ. ಅವುಗಳಲ್ಲಿ ಲಾಭ ಗಳಿಸುತ್ತಿರುವ ಉದ್ದಿಮೆಗಳೂ ಸೇರಿವೆ. ಚತ್ತೀಸ್‌ಗಢದ ಭಾರತ ಅಲ್ಯೂಮಿನಿಯಂ ಕಂಪೆನಿಯನ್ನು ಖಾಸಗಿಯವರಿಗೆ ಒಪ್ಪಿಸುತ್ತಿರುವುದು ಇತ್ತೀಚಿನ ಉದಾಹರಣೆ ಮಾತ್ರ.

ಈ ಹಿನ್ನೆಲೆಯಲ್ಲಿ ಚಿನ್ನದ ಬೀಡು ಎಂದೆನಿಸಿಕೊಂಡ ಕರ್ನಾಟಕದಲ್ಲಿನ ಕೋಲಾರದ ಭಾರತ ಚಿನ್ನದ ಗಣಿ ನಿಯಮಿತ ಕಂಪೆನಿ ಇಂದು ತೀವ್ರ ಬಿಕ್ಕಟ್ಟಿನಲ್ಲಿ ಸಿಲುಕಿಬಿದ್ದಿರುವುದಕ್ಕೆ ಕಾರಣಗಳನ್ನು ಗಂಭೀರ ವಿಶ್ಲೇಷಣೆಗೆ ಗುರಿಪಡಿಸಬೇಕಾದ ಅಗತ್ಯವಿದೆ.

**ಗಣಿಗಳನ್ನು ಮುಚ್ಚಿಡುವುದರ ಪರಿಣಾಮಗಳು**

ಕೋಲಾರದ ಚಿನ್ನದ ಗಣಿಯನ್ನು ಮುಚ್ಚಿ ಅದಕ್ಕೆ ಇತಿಶ್ರೀ ಹಾಡುವ ಯೋಜನೆಯನ್ನು ಪ್ರತಿಭಟಿಸಿ ಈಗಾಗಲೇ ಅನೇಕ ಹೋರಾಟಗಳು ಜರುಗಿವೆ. ಹತ್ತಾರು ವೇದಿಕೆಗಳಲ್ಲಿ ಸಮಸ್ಯೆ ಚರ್ಚೆಯಾಗುತ್ತಿದೆ. ಸುಮಾರು ೮೦೦೦ ಕಾರ್ಮಿಕರು ಹಾಗೂ ಅವರ ಕುಟುಂಬದ ೨ ಲಕ್ಷ ಜನ ಬೀದಿ ಪಾಲಾಗಲಿದ್ದಾರೆ. ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ಅವರು ಪ್ರಧಾನಿ ವಾಜಪೇಯಿ ಅವರಿಗೆ ಸಲ್ಲಿಸಿದ ಮನವಿ ಪತ್ರದಲ್ಲಿ ಗಣಿಯ ಕಾರ್ಮಿಕರ ಬವಣೆಯ ಬಗ್ಗೆ ಇದೇ ಮಾತುಗಳನ್ನು ಹೇಳಿದ್ದಾರೆ.

ಈಗಿನ ತೀರ್ಮಾನದಂತೆ ಗಣಿಯನ್ನು ಮುಚ್ಚಿದ್ದೇ ಆದರೆ ತೀವ್ರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟಂತಾಗುತ್ತದೆ. ಕಾನೂನು ವ್ಯವಸ್ಥೆ ಏರುಪೇರಾಗುವುದರಲ್ಲಿ ಅನುಮಾನವೇ ಇಲ್ಲ. ಜೊತೆಗೆ ಅಲ್ಲಿನ ಆಳದ ಗಣಿಗಳಲ್ಲಿ ಜರುಗುತ್ತಿರುವ ಸಂಶೋಧನೆ, ಗಣಿಗಾರಿಕೆಗೆ ಸಂಬಂಧಪಟ್ಟ ಯಂತ್ರಗಳು ಮತ್ತು ಸಲಕರಣೆಗಳ ತಯಾರಿಕೆ ಮತ್ತಿತರ ರಚನಾತ್ಮಕ ಚಟುವಟಿಕೆಗಳಂತೂ ಹೇಳ ಹೆಸರಿಲ್ಲದಂತಾಗುತ್ತವೆ. ಇದು ಸಾಲದೆಂಬಂತೆ, ಭೂಗರ್ಭದಲ್ಲಿ [illegible] ಚಿನ್ನದ ನಿಕ್ಷೇಪ ರಾಷ್ಟ್ರಕ್ಕೆ ವಂಚಿತವಾಗುತ್ತದೆ. ಹಾಗೆಯೇ ಆರ್ಥಿಕ ಅಭಿವೃದ್ಧಿಗೆ ಅಗತ್ಯವಾದ ಚಿನ್ನದ [illegible] ಭಾರಿ ಪೆಟ್ಟು ಬೀಳುವುದೆಂಬುದನ್ನು ಯಾರೂ ಮರೆಯಲಾಗದು. ಸರಕಾರವು ಇತರ ಕಾರ್ಖಾನೆಗಳನ್ನು ಮುಚ್ಚುವ ತರಾತುರಿಯಲ್ಲಿ ತೆಗೆಯುವ ನೀತಿ ಕೋಲಾರ ಚಿನ್ನದ ಗಣಿಯ ವಿಷಯದಲ್ಲೂ ತೆಗೆದುಕೊಳ್ಳುವುದು ಅತಾರ್ಕಿಕವೆನಿಸಿಕೊಳ್ಳುತ್ತದೆ. ಎಂದೇ ಸರಕಾರ ಈ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಅದರ ತಪ್ಪು ನೀತಿಗಳಿಂದಲೇ ಕೋಲಾರದ ಚಿನ್ನದ ಗಣಿ ಇಂದಿನ ದುಃಸ್ಥಿತಿಗೆ ತಲುಪಿದೆಯೆಂಬುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಬೆಲೆ ನಿಗದಿಪಡಿಸುವುದರಲ್ಲಾಗಲಿ, ಆಡಳಿತ ಕ್ರಮದಲ್ಲಿಯೇ ಆಗಲಿ ಸಂಬಂಧಪಟ್ಟ ಸಚಿವ ಸಂಪುಟ ತಳೆದ ದಿಕ್ಕೆಟ್ಟ ಧೋರಣೆಗಳೇ ಈ ದುರಂತಕ್ಕೆ ಎಡೆಮಾಡಿಕೊಟ್ಟಿದೆ. ಸರಕಾರ ಈ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವ ಪ್ರಶ್ನೆಯೇ ಇಲ್ಲ.

**ಇಂದಿನ ದುಃಸ್ಥಿತಿಯ ಹಿಂದಿನ ಕತೆ**

ಚಿನ್ನದ ಗಣಿಗಾರಿಕೆಯು ಕೋಲಾರದಲ್ಲಿ ೧೮೦೦ರಿಂದಲೂ ಜರುಗುತ್ತಲೇ ಇದೆ. ಅಂದಿನಿಂದ ೧೯೫೬ರವರೆಗೂ ಗಣಿಯ ಸ್ವಾಮ್ಯ ಪಡೆದು ಕೋಟ್ಯಾಂತರ ರೂಪಾಯಿಗಳ ಲಾಭ ಗಳಿಸಿದ ಬ್ರಿಟಿಷ್ ವ್ಯಾಪಾರ ಸಂಸ್ಥೆ ಜಾನ್ ಟೈಲರ್ಸ್ ಅಂಡ್ ಕಂಪೆನಿ. ಆನಂತರ ಅಂದಿನ ಮೈಸೂರು ಸರಕಾರದ ಹತೋಟಿಯಲ್ಲಿದ್ದ ಕೋಲಾರ ಚಿನ್ನದ ಗಣಿಗಾರಿಕೆ ಅಂಡರ್ ಟೇಕಿಂಗ್ ಎಂಬ ಹೆಸರಿನಲ್ಲಿ ಚಟುವಟಿಕೆಗಳು ಮುಂದುವರೆದು ೧೯೭೨ರಲ್ಲಿ ಭಾರತ ಸರ್ಕಾರಕ್ಕೆ ಎಲ್ಲವನ್ನೂ ಒಪ್ಪಿಸಲಾಯಿತು. ಪ್ರಾರಂಭದಿಂದಲೂ ಅಪಾರ ಲಾಭ ಗಳಿಸುತ್ತಿದ್ದ ಈ ಗಣಿಗಾರಿಕೆ ೧೯೭೨ರ ಅವಧಿಯಲ್ಲಿ ಅಂದರೆ ಕೇಂದ್ರ ಸರಕಾರದ ಉಸ್ತುವಾರಿಯಲ್ಲಿ ಅದರದೇ ದೋಷಪೂರಿತ ಬೆಲೆನಿಗದಿ ನೀತಿಗಳ ದುಷ್ಪರಿಣಾಮದ ಫಲವಾಗಿ ಲಾಭ ಗಳಿಸಲು ಸಾಧ್ಯವಾಗದಿದ್ದದ್ದು ಗಮನಿಸಬೇಕಾದ ಅಂಶ. ಇಲ್ಲಿನ ಮಾರುಕಟ್ಟೆಯ ಬೆಲೆಗಿಂತಲೂ ಕಡಿಮೆಯಿದ್ದ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಬೆಲೆಯನ್ನನುಸರಿಸಿ ವ್ಯವಹರಿಸಬೇಕಾಗಿ ಬಂದ ಕೇಂದ್ರ ಸರಕಾರವು ಭಾರತ ಚಿನ್ನದ ಗಣಿ ಕಂಪೆನಿಯು ದಿವಾಳಿಯಾಗುವ ಪ್ರಕ್ರಿಯೆಗೆ ಅಧ್ಯಕ್ಷತೆ ವಹಿಸಬೇಕಾಗಿ ಬಂತು. ಆ ಘನ ಸರಕಾರಕ್ಕೇ ಈ ಎಲ್ಲ ಜಟಿಲತೆಗಳ ತೊಡಕುಗಳ ಅರಿವಿದ್ದರೂ ಗಣಿಗಾರಿಕೆಯನ್ನು ೧೯೭೨ರಿಂದ ಇಂದಿನವರೆಗೂ ನಡೆಸಿಕೊಂಡು ಬಂದಿರುವ ಉದ್ದೇಶವಾದರೂ ಏನು ? ಈಗಾಗಲೇ, ಈ ಉದ್ದಿಮೆ ಮತ್ತೆ ಲಾಭದಾಯಕ ಸಂಸ್ಥೆಯಾಗುವುದು ಸಾಧ್ಯವೇ ಇಲ್ಲ ಎಂದು ಎಲ್ಲೆಡೆ ಸಾರಿ ಆಗಿದೆ. ಇದು ಆಧಾರರಹಿತ ವಾದ. ಏಕೆಂದರೆ, ಕಂಪೆನಿ ಕಾಯಿದೆಗೆ ಅನ್ವಯಿಸುವ ನೀತಿ ನಿಯಮಗಳನ್ನು ಚಿನ್ನದ ಗಣಿಗೆ ಅನ್ವಯಿಸಿ ಅದರ ಉತ್ಕೃಷ್ಟತೆಯ ಮೌಲ್ಯಮಾಪನ ಮಾಡುವುದು ಸಾಧುವಾದುದಲ್ಲ. ಲಾಭ ಗಳಿಸುವ ಅಂಶವನ್ನು ಬದಿಗಿಟ್ಟು ಅನೇಕ ಸರಕಾರಿ ಇಲಾಖೆಗಳ ಕಾರ್ಯಾಚರಣೆಗಳನ್ನು ಹೇಗೆ ವಿಮರ್ಶೆಗೆ ಒಳಪಡಿಸಲಾಗುತ್ತದೆಯೋ ಅದೇ ಧೋರಣೆ ಗಣಿಗಳ ವಿಷಯದಲ್ಲಿಯೂ ತಳೆಯಬೇಕಾಗುತ್ತದೆ. ಕಂಪೆನಿ ಕಾಯಿದೆ ಅಥವಾ ಕೈಗಾರಿಕೆ ಹಣಕಾಸು ಹಾಗೂ ಪುನರ್‌ನಿರ್ಮಾಣ ಮಂಡಳಿಯ ನಿಯಮಗಳು ಇಲ್ಲಿ ಅಸಂಬದ್ಧವೆನಿಸಿಕೊಳ್ಳುತ್ತವೆ. ಈ ನಿಟ್ಟಿನಲ್ಲಿ ಲಾಭದಾಯಕವಲ್ಲದಿದ್ದರೂ ಈ ಉದ್ಯಮಗಳನ್ನು ಮುಂದುವರೆಸಿಕೊಂಡು ಹೋಗುವುದಾಗಿ ೧೯೭೨ರಲ್ಲಿ ಜನತೆಗೆ ನೀಡಿದ ವಾಗ್ದಾನದಿಂದ ಸರಕಾರ ಹಿಂದೆ ಸರಿಯಲು ಜನತೆ ಬಿಡಬಾರದು.

ಕುತೂಹಲಕಾರಿ ಅಂಶವೆಂದರೆ ಸರಕಾರದ ಕೇವಲ ಇಲಾಖಾ ಸಂಸ್ಥೆಯಾಗಿದ್ದ ಒಂದು ನಿಗಮವನ್ನು ಸರಕಾರದ ಸ್ವಾಮ್ಯಕ್ಕೆ ಒಳಪಡಿಸಿ ಕಂಪೆನಿಯನ್ನಾಗಿ ಮಾರ್ಪಡಿಸಿದ್ದಕ್ಕೆ ಕಾರಣಗಳನ್ನು ಇದುವರೆವಿಗೂ ಸ್ಪಷ್ಟಪಡಿಸಿಲ್ಲ. ನೌಕರರ ಗಮನಕ್ಕೂ ತರದೆ ಎಲ್ಲ ತೀರ್ಮಾನಗಳನ್ನೂ ತೆರೆಮರೆಯಲ್ಲಿಯೇ ತೆಗೆದುಕೊಂಡದ್ದು ಗಮನಾರ್ಹ. ಈ ಕಾರ್ಯಾಚರಣೆಯ ಹಿಂದಿದ್ದ ದುರುದ್ದೇಶಗಳು ಹಾಗೂ ದೋಷಪೂರಿತ ಲೆಕ್ಕ ವ್ಯವಸ್ಥೆಗಳಿಂದ ಆಗಿರುವ ಹಾನಿ ಅಪಾರ. ಭಾರತ ಚಿನ್ನದ ಗಣಿ ಉದ್ದಿಮೆ ಎಂದೆಂದಿಗೂ ಲಾಭ ಗಳಿಸಲು ಸಾಧ್ಯವಿಲ್ಲ ಎಂಬ ಹುಸಿ ವಾದ ಹಾಗೂ ಪಿತೂರಿಗಳಿಗೆ ಇಲ್ಲಿ ಕಾಣಿಸಿರುವ ಅಂಕಿಅಂಶಗಳು ಕನ್ನಡಿ ಹಿಡಿಯುತ್ತವೆ:

ಅ) ಕೇಂದ್ರ ಸರಕಾರ ಕೋಲಾರ ಗಣಿಯ ಚಿನ್ನದ ಬೆಲೆ ನಿಗದಿಪಡಿಸಿದ್ದು ರಾಷ್ಟ್ರದ ಮಾರುಕಟ್ಟೆಯಲ್ಲಿ ಚಲಾವಣೆಯಲ್ಲಿದ್ದ ಬೆಲೆಗಿಂತ ಶೇ. ೩೦-೩೫ರಷ್ಟು ಕಡಿಮೆ.

ಆ) ಉತ್ಪಾದಿಸಿದ ಎಲ್ಲ ಚಿನ್ನವನ್ನು ಮೀಸಲು ನಿಧಿಯಾಗಿ

ಎಂ. ಸಿ. ನರಸಿಂಹನ್

(ಗೋಲ್ಡ್ ರಿಸರ್ವ್) ಪರಿಗಣಿಸಿ ಸರಕಾರದ ಖಜಾನೆಯಲ್ಲಿ ಪ್ರತ್ಯೇಕವಾಗಿ ರೂಪಾಯಿ ನೋಟುಗಳ ಮುದ್ರಣಕ್ಕಾಗಿ ಇರಿಸಲಾಗುತ್ತಿತ್ತು.

ಇ) ಮಾರ್ಚ್ ೧೯೮೮ರವರೆಗೆ ಉತ್ಪಾದಿಸಲಾದ ಒಟ್ಟು ಚಿನ್ನ ೨೪,೬೩೩.೧೧ ಕೆ. ಜಿ.ಗಳಷ್ಟಾದರೆ ಮಾರ್ಚ್ ೧೯೯೨ರ ಮಾರುಕಟ್ಟೆಯ ಲೆಕ್ಕಾಚಾರ ದಂತೆ ಅದರ ಮೌಲ್ಯ ೧೦೫೯ ಕೋಟಿ ರೂಪಾಯಿಗಳಷ್ಟಾಗುತ್ತದೆ.

ಈ) ಆದರೆ ಸರಕಾರ ಕಂಪೆನಿಗೆ ಇತ್ತ ಮೊತ್ತ ೩೪೦ ಕೋಟಿ ರೂ.ಗಳಷ್ಟು ಮಾತ್ರ. ಎಂದರೆ, ಕಂಪೆನಿ ಅನುಭವಿಸಿದ ನಿವ್ವಳ ನಷ್ಟ ೭೧೩ ಕೋಟಿಗಳಷ್ಟು.

ಉ) ಗಣಿಯ ಒಟ್ಟು ವಿಸ್ತೀರ್ಣ ೧೨,೦೯೦ ಎಕರೆಗಳು. ಜಮೀನಿನ ವಿಸ್ತೀರ್ಣ ೪,೮೩೫ ಹೆಕ್ಟೇರುಗಳು. (ಅಭಿವೃದ್ಧಿ ಹೊಂದಿದ ಭಾಗ ಶೇ. ೫೦. ಮಿಕ್ಕಿದ್ದು ಕಾಡುತೋಪು)

**ಕೇಂದ್ರ ಸರಕಾರದ ಪಕ್ಷಪಾತ ನೀತಿ**

ಬೆಲೆ ನಿಗದಿಪಡಿಸುವ ಕ್ರಮದಲ್ಲಿ ತಾರತಮ್ಯ, ಅವ್ಯವಹಾರ, ಲಂಚಗುಳಿತನ, ಆವರಿಸಿಕೊಂಡಿರುವ ಅಧಿಕಾರಶಾಹಿ ಇದನ್ನು ರೋಗಗ್ರಸ್ತ ಉದ್ದಿಮೆಯೆನ್ನುವ ಅಪಪ್ರಚಾರದಲ್ಲಿ ತೊಡಗಿದೆ. ಕರ್ನಾಟಕದ್ದೇ ಆದ ಹಟ್ಟಿ ಗಣಿಯಲ್ಲಿ ಉತ್ಪಾದಿಸಿದ ಚಿನ್ನದ ಮೌಲ್ಯವನ್ನು ನಿಗದಿಪಡಿಸಲು ರಾಷ್ಟ್ರದ ಮಾರುಕಟ್ಟೆಯಲ್ಲಿ ಚಲಾವಣೆಯಲ್ಲಿರುವ ಬೆಲೆಯ ಆಧಾರವಾಗಿಟ್ಟು ಕೊಳ್ಳುತ್ತಾರೆ. ಆದರೆ ಕೋಲಾರದ ಚಿನ್ನಕ್ಕೆ ಬೇರೆಯೇ ಅಳತೆಗೋಲು. ಇದೆಂತಹ ವಿಚಿತ್ರ!

ಬೆಲೆ ನಿಗದಿಪಡಿಸುವ ಕ್ರಮದಲ್ಲಿ ವಿದ್ಯುಚ್ಛಕ್ತಿ ದರವನ್ನು ಅಲ್ಲಿನ ಪರಿಸ್ಥಿತಿಯ ಆಧಾರದ ಮೇಲೆ ಮತ್ತು ವೈಜ್ಞಾನಿಕವಾಗಿ ರೂಪಿಸುವುದು ಸರಿಯಾದ ಕ್ರಮ. ಇದಕ್ಕೆ ವಿರುದ್ಧವಾಗಿ ವಿದ್ಯುಚ್ಛಕ್ತಿ ಬೆಲೆ ಏರಿಸಿದ್ದರ ಫಲವಾಗಿ ಆಗಲೇ ಕೃತಕವಾಗಿ ಸೃಷ್ಟಿಸಿದ ರೋಗಗ್ರಸ್ತ ಕಂಪೆನಿ ಎನ್ನುವ ತಪ್ಪು ಚಿತ್ರಣ ಮತ್ತಷ್ಟು ಆಳವಾಗಿ ಬೇರೂರಿತು. ಪರಿಣಾಮ, ಗಣಿಗಾರಿಕೆಯ ಆರ್ಥಿಕ ಪರಿಸ್ಥಿತಿ ಚೇತರಿಸಿಕೊಳ್ಳಲಾಗದಷ್ಟು ನಷ್ಟ. ಈ ಸಂಬಂಧದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಕೆಲವು ರಿಯಾಯಿತಿಗಳನ್ನು ಸರಕಾರ ನೀಡಲು ತಯಾರಿದೆಯೆಂದು ಕೊಟ್ಟಿರುವ ಆಶ್ವಾಸನೆ ಕೇಂದ್ರ ಸರಕಾರವು ಗಮನಕ್ಕೆ ತೆಗೆದುಕೊಳ್ಳದೇ ಇರುವುದು ವಿಷಾದನೀಯ.

ಬಡ್ಡಿಯ ಅಂಶ ಲೆಕ್ಕಪತ್ರಗಳ ಅವಿಭಾಜ್ಯ ಅಂಗ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಆದರೆ, ಪ್ರಸ್ತುತವಾಗಿ ಕೇಂದ್ರ ಸರಕಾರ ಒಬಿರಾಯನ ಕಾಲದಿಂದಲೂ ತಾನು ನೀಡಿದ ಸಾಲಗಳಿಗೆ ಬಡ್ಡಿ, ಚಕ್ರಬಡ್ಡಿಯನ್ನು ಅನೈತಿಕವಾಗಿ ಹೇರಿ ವಸೂಲಿಗೆ ಒತ್ತಾಯಿಸುತ್ತಿರುವುದು ಅದರ ಒಳತೋಟಿ ಗಳನ್ನು ಬಯಲಿಗೆಳೆಯುವುದರಲ್ಲಿ ಆಶ್ಚರ್ಯವೇನಿಲ್ಲ. ಭಾರತ ಚಿನ್ನದ ಗಣಿಗೂ ಸರಕಾರಕ್ಕೂ ನೇರವಾಗಿ ಸಂಬಂಧವಿದೆ. ಕಂಪೆನಿಯ ನಿರ್ವಹಣೆಯ ಬಗ್ಗೆ ಕೇಂದ್ರಕ್ಕೆ ಗುರುತರವಾದ ಜವಾಬ್ದಾರಿಯಿದೆ. ಇಷ್ಟಾದರೂ ಸರಕಾರ ಗಣಿಯ ಬಗ್ಗೆ ತೋರಿಸುತ್ತಿರುವ ಅನಾದರ, ನಿರ್ಲಕ್ಷ್ಯ ನಿಜವಾಗಿಯೂ ಅಕ್ಷಮ್ಯ. ಲಾಭದಾಯಕವಾಗಬಲ್ಲಂತಹ ಒಂದು ಉದ್ದಿಮೆ ಯನ್ನು ಎಲ್ಲ ಕುತಂತ್ರಗಳನ್ನೂ ಬಳಸಿ ನಿರ್ಜೀವಗೊಳಿಸುವ ಪ್ರಕ್ರಿಯೆ ಅವ್ಯಾಹತವಾಗಿ ಸಾಗುತ್ತಲೇ ಇದೆ.

ಈ ಮಧ್ಯೆ ಚಾರಿ ಸಮಿತಿ (೧೯೯೧-೯೨) ಸಲ್ಲಿಸಿದ ವರದಿಯಂತೆ ಕೋಲಾರದಲ್ಲಿನ ಗಣಿಗಾರಿಕೆಯನ್ನು ಇನ್ನೂ ಹತ್ತಾರು ವರ್ಷಗಳು ಮುಂದುವರೆಸಿಕೊಂಡು ಹೋಗಬಹುದಾಗಿದೆ. ಇದಾವುದನ್ನೂ ಒಪ್ಪದ ಕೇಂದ್ರ ಸರಕಾರ ೧೯೯೮ರಲ್ಲಿ ಸಂಸದೀಯ ಸಮಿತಿಯೊಂದನ್ನು ರಚಿಸಿ ಇದೇ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ನೀಡಲು ಗೊತ್ತುಪಡಿಸಿತು. ಚಾರಿ ಸಮಿತಿಯ ವರದಿಯನ್ನೇ ಅನುಮೋದಿಸಿದ ಸಂಸದೀಯ ಸಮಿತಿ ಒಂದು ಹೆಜ್ಜೆ ಮುಂದೆ ಹೋಗಿ ಭಾರತ ಚಿನ್ನದ ಗಣಿ ಸಂಸ್ಥೆಯು ಕೈಗಾರಿಕಾ ಹಣಕಾಸು ಹಾಗೂ ಪುನರ್‌ನಿರ್ಮಾಣ ಮಂಡಲಿ (BIFR) ಮುಂದೆ ಸಲ್ಲಿಸಿರುವ ಅರ್ಜಿಯನ್ನು ಹಿಂತೆಗೆದುಕೊಳ್ಳಬೇಕೆಂದೂ ಶಿಫಾರಸ್ಸು ಮಾಡಿತು. ಇಡೀ ಗಣಿಗಾರಿಕೆಯ ಕಾರ್ಯಾಚರಣೆಯ ಎಲ್ಲ ಆಯಾಮಗಳನ್ನೂ ಗಣನೆಗೆ ತೆಗೆದುಕೊಂಡ ಸರಕಾರವೇ ನೇಮಕ ಮಾಡಿದ ಸಂಸದೀಯ ಸಮಿತಿ ನೀಡಿದ ವರದಿಯ ಮುಖ್ಯಾಂಶ ಇದು.

ಗಣಿಯ ಪುನಶ್ಚೇತನಕ್ಕೆ ಅಗತ್ಯವಾದ ಹಣಸಹಾಯ ನೀಡಲು ಸರಕಾರ ತಾನೂ ಮುಂದೆಬಾರದೆ ಆಸ್ಟ್ರೇಲಿಯಾದ ಕಂಪೆನಿಯೊಂದರೊಂದಿಗೆ ಮಾಡಿಕೊಳ್ಳಬಹುದಾಗಿದ್ದ ಜಂಟೀ ಒಪ್ಪಂದಕ್ಕೂ ಅಡ್ಡಗಾಲು ಹಾಕಿದ್ದು ಈಗ ಹಳೆಯ ಕತೆ. ಇದೇ ನಿಟ್ಟಿನಲ್ಲಿ ಮತ್ತೊಂದು ಆಸ್ಟ್ರೇಲಿಯಾದ ಕಂಪೆನಿ ಎಲ್ಲ ರೀತಿಯಲ್ಲಿಯೂ ಪರಿಷ್ಕರಿಸಿ ಆಧುನಿಕ ತಾಂತ್ರಿಕ ನೆರವಿನಿಂದ ಭಾರತ ಚಿನ್ನದ ಗಣಿ ತನ್ನ ದಿಕ್ಕನ್ನೇ ಬದಲಾಯಿಸಿಕೊಳ್ಳಲು ಸಾಧ್ಯತೆಯಿದೆಯೆಂದು ಅಭಿಪ್ರಾಯಪಟ್ಟಿದೆ. ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕ ಮತ್ತು ಕೆನಡ ದೇಶಗಳ ಅನುಭವ ಇಲ್ಲಿನ ಸಂದರ್ಭಕ್ಕೆ ಬಹಳ ಸಹಾಯಕ ಎಂಬುದು ಅವರ ಸಲಹೆಯೂ ಕೂಡ.

ಈ ಹಿನ್ನೆಲೆಯಲ್ಲಿ ಒಂದು ಮಾತಂತೂ ಸ್ಪಷ್ಟ. ಕೇಂದ್ರ ಸರಕಾರದ ಧೋರಣೆ ಖಂಡಿತ ಸರಿಯಲ್ಲ. ಜನರ ಹಿತಾಸಕ್ತಿಗಳಿಗೆ ವಿರುದ್ಧ ಕೂಡ. ನೇರವಾಗಿ ಸಂಬಂಧಪಟ್ಟ ಕರ್ನಾಟಕ ಸರಕಾರವನ್ನಾಗಲಿ ಇದೇ ಅನುಭವವುಳ್ಳ ಆಂಧ್ರಪ್ರದೇಶದ ಸರಕಾರವನ್ನಾಗಲಿ ವಿಶ್ವಾಸಕ್ಕೆ ತೆಗೆದು ಕೊಂಡು ಅವರ ಅಭಿಪ್ರಾಯವನ್ನು ತಿಳಿಯುವ ಸಂಯಮ ವನ್ನು ಪ್ರದರ್ಶಿಸದಿದ್ದದ್ದು ಅವರ ಹುಂಬತನಕ್ಕೆ ಸಾಕ್ಷಿ.



ಮುಂದೇನು ?

ಹೆಮ್ಮೆಯ ವಿಷಯವೆಂದರೆ ಕೋಲಾರ ಚಿನ್ನದ ಗಣಿಯ ಕಾರ್ಮಿಕರು ಮತ್ತು ಅವರ ಟ್ರೇಡ್ ಯೂನಿಯನ್ ಸಂಘಟನೆಗಳು ಎಷ್ಟೇ ಪ್ರತಿಕೂಲಗಳಿದ್ದರೂ ಗಣಿಗಳ ಅಭಿವೃದ್ಧಿಗೆ ಅವಿರತವಾಗಿ ದುಡಿದಿದ್ದಾರೆ. ಅವರ ವೇತನಗಳ ಪರಿಷ್ಕರಣ ಕಳೆದ ಹತ್ತು ವರ್ಷಗಳಿಂದಲೂ ಆಗಿಲ್ಲವೆಂಬುದು ಇಲ್ಲಿ ಬಹಳ ಪ್ರಸ್ತುತವಾಗುತ್ತದೆ. ಕಾರ್ಮಿಕರ ಸಂಖ್ಯಾಬಲ ೧೨,೦೦೦ದಿಂದ ಕ್ರಮೇಣ ೩,೬೦೦ಕ್ಕೆ ಇಳಿದಿದೆ. ಅದೇ ಅವಧಿಯಲ್ಲಿ ತಲಾ ಒಂದು ಭಾಗ ಉತ್ಪಾದನೆ ಹೆಚ್ಚಾಗಿದೆ. ಬಡಕಾರ್ಮಿಕರ ಸದುದ್ದೇಶಗಳಿಗೆ ಸ್ಪಂದಿಸುವ ಬದಲು ಸರಕಾರ ಗಣಿಗಳನ್ನು ಮುಚ್ಚಲು ಆಜ್ಞಾಪಿಸಿರುವುದು ಒಂದು ವಿಪರ್ಯಾಸವೇ ಸರಿ.

ಅದು ಹಾಗಿರಲಿ, ಸಾರ್ವಜನಿಕ ಕಾನೂನು ದೃಷ್ಟಿಯಿಂದ ಹಾಗೂ ಸಂವಿಧಾನದಲ್ಲಿ ಸೂಚಿಸಲ್ಪಟ್ಟಿರುವ ರಾಜ್ಯ ರಾಜಕಾರಣದ ನಿರ್ದೇಶಕ ಸೂತ್ರಗಳ ಆಧಾರದ ಮೇಲೆ ಈ ಇಡೀ ಸಮಸ್ಯೆಗೆ ಪರಿಹಾರ ಸೂಚಿಸಬೇಕಾಗಿದೆ. ನಮ್ಮಲ್ಲಿರುವ ಸಂಪನ್ಮೂಲಗಳನ್ನು ಜನತೆಯ ಹಿತಾಸಕ್ತಿಗಳಿಗಾಗಿ ಬಳಸಿಕೊಳ್ಳ ಬೇಕಾದ ಜವಾಬ್ದಾರಿ ಹೊತ್ತಿರುವ ಸರಕಾರ ರಾಷ್ಟ್ರದ ಆರ್ಥಿಕತೆಗೆ ಬೆನ್ನೆಲುಬಾಗಿರುವ ಚಿನ್ನದ ನಿಕ್ಷೇಪಗಳನ್ನು ಕಡೆಗಾಣಿಸುವುದು ಯಾವ ನ್ಯಾಯ ? ಅಲ್ಲಿನ ಕಾರ್ಮಿಕ ವರ್ಗವನ್ನು ವಿಶ್ವಾಸಕ್ಕೆ ತೆಗೆದುಕೊಂಡು ಗಣಿಯ ಭವಿಷ್ಯದ ಬಗ್ಗೆ ಅವರೊಡನೆ ಚರ್ಚಿಸದಿದ್ದರೆ ಸಮಸ್ಯೆಗೆ ಪರಿಹಾರ-ದೊರಕುವುದಾದರೂ ಹೇಗೆ ?

ಇಂದಿಗೂ ಕಾಲ ಮಿಂಚಿಲ್ಲವೆನ್ನಬಹುದು. ಸಾರ್ವಜನಿಕ ಹಿತದೃಷ್ಟಿಯಿಂದ ಚಿನ್ನದ ಗಣಿ ಕಾರ್ಮಿಕ ಸಂಘಟನೆಗಳು, ಕೇಂದ್ರ ಮತ್ತು ರಾಜ್ಯ ಸರಕಾರಗಳು ಎಲ್ಲ ವಿಷಯಗಳನ್ನು ಪುನರ್‌ವಿಮರ್ಶಿಸಿ ಕೋಲಾರದ ಗಣಿಗಾರಿಕೆಗೆ ಹೊಸ ಜೀವ ತುಂಬಬೇಕಾಗಿದೆ.

ಗಣಿಗಳನ್ನು ಮುಚ್ಚುವುದರ ವಿರುದ್ಧ ಅಲ್ಲಿನ ಅಧಿಕಾರಿಗಳು ಮತ್ತು ಕಾರ್ಮಿಕ ಸಂಘಟನೆಗಳು ರಾಜ್ಯದ ಹೈಕೋರ್ಟ್‌ನಲ್ಲಿ ಸಲ್ಲಿಸಿದ ರಿಟ್ ಅರ್ಜಿ ಅಂಗೀಕೃತವಾಗಿ ತಡೆಯಾಜ್ಞೆ ದೊರಕಿರುವುದು ಒಂದು ಆಶಾದಾಯಕ ಬೆಳವಣಿಗೆ ಎನ್ನಬಹುದು. ಗಣಿಗಳ ಭವಿಷ್ಯವು ಬರುವ ದಿನಗಳಲ್ಲಿ ಅಲ್ಲಿನ ಹೋರಾಟಗಳ ತೀವ್ರತೆ ಮತ್ತು ಶಕ್ತಿಯನ್ನು ಹೊಂದಿಕೊಂಡಿದೆ. ಉದಾರೀಕರಣ, ಖಾಸಗೀಕರಣ, ಜಾಗತೀಕರಣ ಮುಂತಾದ ಪಿಡುಗು ಗಳಿಂದ ಹೊಮ್ಮುತ್ತಿರುವ ಇಂತಹ ದೇಶವಿರೋಧಿ ಪ್ರಕ್ರಿಯೆಗಳು ಇನ್ನೂ ಬಹಳಷ್ಟಿವೆ.

ಕರ್ನಾಟಕದ ಮಟ್ಟಿಗೆ ಹೇಳಬೇಕೆಂದರೆ, ಚಿನ್ನದ ನಾಡು, ಗಂಧದ ಬೀಡು ಎಂದೆನಿಸಿಕೊಂಡ ನೆಲದಲ್ಲಿ ಕಾಡುಗಳ್ಳ ವೀರಪ್ಪನ್ ಗಂಧ, ದಂತ ಸೂರೆ ಮಾಡಿದರೆ, ದೇಶದ ಆರ್ಥಿಕತೆಯ ಬೆಳವಣಿಗೆಗೆ ಅತ್ಯಗತ್ಯವಾಗಿರುವ ಚಿನ್ನದ ಗಣಿಗಾರಿಕೆಗೇ ಕೊಡಲಿಪೆಟ್ಟು ಹಾಕುತ್ತಿರುವ ಕೇಂದ್ರ ಸರಕಾರವನ್ನು ಹೇಗೆ ಮಾಪನ ಮಾಡಬೇಕು ಮತ್ತು ಅದರ ಜನವಿರೋಧಿ ನೀತಿಗಳಿಗೆ ಏನೆನ್ನಬೇಕು ?

ಎಂ. ಸಿ. ನರಸಿಂಹನ್
ನಂ. ೨೭, ೬ನೇ ಅಡ್ಡರಸ್ತೆ, ೪ನೇ ಮೈನ್
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಸಾಹಿತ್ಯ ಸಮ್ಮೇಳನ: ಒಂದು ವಿಶ್ಲೇಷಣೆ

ಕನ್ನಡ ಸಾಹಿತ್ಯ ಸಮ್ಮೇಳನಗಳು ಹಬ್ಬಹರಿದಿನಗಳಂತೆ ನಡೆಯುತ್ತಲೇ ಇವೆ. ಮನಸೆಳೆವ ವಿಚಾರಗೋಷ್ಠಿಗಳು, ಕವಿಗೋಷ್ಠಿಗಳು, ಸಮ್ಮೇಳನಾಧ್ಯಕ್ಷರುಗಳ ಭಾಷಣದೊಂದಿಗೆ ಮೆರವಣಿಗೆ ಉತ್ಸವ, ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುತ್ತವೆ. ಆದರೆ ಕನ್ನಡ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ, ಭಾಷಾಭಿವೃದ್ಧಿಯ ದೃಷ್ಟಿಯಿಂದ ಈ ಸಮ್ಮೇಳನಗಳು ಅಷ್ಟಾಗಿ ಫಲಕಾರಿಯಾಗುತ್ತಿಲ್ಲವೆಂಬ ಭಾವನೆ ಮೂಡುತ್ತಿದೆ. ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯದ ಬಗ್ಗೆ ಆವೇಶಭರಿತ ಭಾಷಣಗಳೇ ಹೆಚ್ಚಾಗುತ್ತಿವೆ. ಕನ್ನಡಿಗರಲ್ಲಿ, ಅದರಲ್ಲೂ ವಿಶೇಷವಾಗಿ ಯುವ ಪೀಳಿಗೆಯಲ್ಲಿ ಓದುವ ಹವ್ಯಾಸ ಬೆಳೆಸುವ ನಿಟ್ಟಿನಲ್ಲಿ ಯಾವುದೇ ನಿರ್ದಿಷ್ಟವಾದ ಕಾರ್ಯಕ್ರಮಗಳು ನಡೆಯುತ್ತಿಲ್ಲ. ರಾಜ್ಯೋತ್ಸವದಂತೆ ಸಾಹಿತ್ಯ ಸಮ್ಮೇಳನಗಳೂ ಒಂದು ರೀತಿಯ ಜಾತ್ರೆಗಳಾಗುತ್ತಿವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಸಮ್ಮೇಳನಗಳ ಬಗ್ಗೆ ಲೇಖಕರು ತಮ್ಮ ಅನಿಸಿಕೆಗಳನ್ನು ಇಲ್ಲಿ ಮಂಡಿಸಿದ್ದಾರೆ.

**ನಾ. ದಿವಾಕರ**

ಈಚಿನ ದಿನಗಳಲ್ಲಿ ಬೇರೆ ಬೇರೆ ಜಿಲ್ಲೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್‌ವತಿಯಿಂದ ಸಾಹಿತ್ಯ ಸಮ್ಮೇಳನಗಳು ತಾಲ್ಲೂಕು ಮಟ್ಟದಲ್ಲಿ ನಡೆಯುತ್ತಿರುವುದು ಸ್ವಾಗತಾರ್ಹ ಕ್ರಮ. ಕೇವಲ ಜಿಲ್ಲಾ ರಾಜ್ಯ ಮಟ್ಟಕ್ಕೆ ಮಾತ್ರ ಸೀಮಿತವಾಗದೆ ಈ ಸಮ್ಮೇಳನಗಳು ತಾಲ್ಲೂಕು ಮಟ್ಟಗಳಲ್ಲಿ ಯಶಸ್ವಿಯಾಗಿ ನಡೆಯುತ್ತಿರುವುದು ಕನ್ನಡ ಸಾಹಿತ್ಯ-ಭಾಷೆ-ಸಂಸ್ಕೃತಿಯ ಬೆಳವಣಿಗೆಯ ದೃಷ್ಟಿಯಿಂದ ಸಕಾರಾತ್ಮಕ ಬೆಳವಣಿಗೆಯೆಂದೇ ಹೇಳಬಹುದು. ಈ ಸಮ್ಮೇಳನಗಳ ಮುಖಾಂತರವಾದರೂ ಗ್ರಾಮೀಣ - ಪಟ್ಟಣ ಪ್ರದೇಶಗಳಲ್ಲಿರುವ ಸುಪ್ತ ಸಾಹಿತ್ಯ ಪ್ರತಿಭೆಗಳು ಹೊರಬಂದರೆ ಸಾರ್ಥಕವಾದೀತು. ಅಂತೆಯೇ ರಾಜ್ಯ-ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿರುವ ಅನೇಕ ಪ್ರತಿಭಾವಂತರು ಅವರ ತಾಲ್ಲೂಕುಗಳಲ್ಲಿಯೇ ಅಪರಿಚಿತರಾಗಿರುತ್ತಾರೆ. ಜನತೆಗೆ ಅಂಥವರ ಪರಿಚಯ ಮಾಡಿಸುವ ಕಾರ್ಯವನ್ನು ಈ ಸಮ್ಮೇಳನಗಳು ಮಾಡುತ್ತವೆ.

ಆದರೆ ವಿಷಾದಕರ ಸಂಗತಿ ಎಂದರೆ ಈ ರೀತಿಯ ಸಾಹಿತ್ಯ ಸಮ್ಮೇಳನಗಳು ಅಪಾರ ನಿಂದನೆಗೆ ಈಡಾಗುತ್ತಿವೆ. ಸಾಹಿತ್ಯ ಸಮ್ಮೇಳನಗಳು ಜಾತ್ರೆ - ಉತ್ಸವಗಳಂತಾಗಿವೆ, ರಾಜಕೀಯದಿಂದ ಪ್ರಭಾವಿತವಾಗಿವೆ, ಸಮ್ಮೇಳನಾಧ್ಯಕ್ಷರುಗಳ ಆಯ್ಕೆ ಸಮರ್ಥವಾಗಿಲ್ಲ, ಸಾಹಿತಿಗಳಲ್ಲದವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುತ್ತದೆ - ಹೀಗೆ ಅನೇಕ ಲೋಪದೋಷಗಳು, ಆರೋಪಗಳು, ಪತ್ರಿಕೆಗಳಲ್ಲಿ ಕಂಡುಬರುತ್ತಿವೆ. ಎಲ್ಲ ದೂಷಣೆಗಳನ್ನೂ ಪೂರ್ವಾಗ್ರಹ ಪೀಡಿತವೆಂದಾಗಲೀ, ವೈಯಕ್ತಿಕ ದ್ವೇಷಪೂರಿತವಾದ್ದೆಂದಾಗಲೀ ಪರಿಗಣಿಸಲಾಗುವುದಿಲ್ಲ. ವಸ್ತುನಿಷ್ಠವಾಗಿ ಹೇಳುವುದಾದರೆ ಈ ಆರೋಪಗಳು ಹುರುಳಿಲ್ಲದ ಆರೋಪಗಳಲ್ಲ.

ಒಂದು ದೃಷ್ಟಿಯಿಂದ ನೋಡಿದರೆ ಸಾಹಿತ್ಯ ಸಮ್ಮೇಳನಗಳು ಒಂದು ರೀತಿಯ ಉತ್ಸವಗಳೇ ಆಗಿವೆ. ಕನ್ನಡ ರಾಜ್ಯೋತ್ಸವದಂತೆ ಈ ಸಮ್ಮೇಳನಗಳೂ ಸಹ ಆವೇಶಭರಿತ ಭಾಷಣಗಳ, ಘೋಷಣೆಗಳ, ಕಾರ್ಯರೂಪಕ್ಕೆ ಬರದ ಕಾರ್ಯಕ್ರಮಗಳ ಸಮ್ಮಿಲನವಾಗಿವೆ. ಈ ಸಮ್ಮೇಳನಗಳಲ್ಲಿ ಮಂಡಿಸಲಾಗುವ ವಿಷಯಗಳು ಹಾಳೆಯ ಮೇಲೆಯೆ, ಉಳಿಯುತ್ತವೆ. ಭಾಷಣಗಳು ಗಾಳಿಯಲ್ಲಿ ಲೀನವಾಗುತ್ತವೆ.

ಈ ದುರದೃಷ್ಟಕರ ಬೆಳವಣಿಗೆಗೆ ಹಲವಾರು ಕಾರಣಗಳನ್ನು ಗುರುತಿಸಬಹುದು. ರಾಜಕೀಯ ಹಸ್ತಕ್ಷೇಪ ಒಂದು ಪ್ರಮುಖ ಕಾರಣವಾದರೂ, ಸಾಹಿತ್ಯಾಸಕ್ತ ಜನತೆಯ ಬೆಂಬಲದಿಂದ ಈ ನ್ಯೂನತೆಗಳನ್ನು ಸುಲಭವಾಗಿ ಸರಿಪಡಿಸಬಹುದು. ಆದರೆ ಇತರ ನ್ಯೂನತೆಗಳನ್ನು ಸರಿಪಡಿಸಲು ಕನ್ನಡ ಸಾಹಿತ್ಯ ಪರಿಷತ್ತಿಗೆ ಮಾತ್ರ ಸಾಧ್ಯವಾಗಬಹುದು. ಪ್ರಪ್ರಥಮವಾಗಿ ಸಮ್ಮೇಳನಾಧ್ಯಕ್ಷರ ಆಯ್ಕೆಯಿಂದಲೇ ಸಮಸ್ಯೆ ಆರಂಭವಾಗುತ್ತದೆ. ಈ ಮೊದಲೇ ಹೇಳಿದಂತೆ ಸಾಹಿತ್ಯದಲ್ಲಿ ಯಾವುದೇ ಸಾಧನೆ ಮಾಡದಿರುವ ವ್ಯಕ್ತಿಗಳನ್ನು ಸಮ್ಮೇಳನಾಧ್ಯಕ್ಷರನ್ನಾಗಿ ಆರಿಸುವುದೇ ಹಾಸ್ಯಾಸ್ಪದ ಸಂಗತಿ. ಏಕೆಂದರೆ ಒಂದು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ಮಾಡಬೇಕಾಗುವುದು ಕೇವಲ ಭಾಷಣವಲ್ಲ, ಬದಲಾಗಿ ಕನ್ನಡ ಭಾಷೆಯ ಇತಿಹಾಸ, ವರ್ತಮಾನ, ಬೆಳವಣಿಗೆ, ನ್ಯೂನತೆಗಳು, ಸಾಹಿತ್ಯಕ್ಷೇತ್ರದಲ್ಲಿನ ಆಗುಹೋಗುಗಳು, ಸಾಹಿತ್ಯದ ವಿಮರ್ಶೆ, ಸಾಹಿತ್ಯಾಭಿವೃದ್ಧಿಯ ಬಗ್ಗೆ ಚಿಂತನೆ, ಉದಯೋನ್ಮುಖ ಸಾಹಿತಿಗಳಿಗೆ ಮಾರ್ಗದರ್ಶನ ಇಷ್ಟನ್ನೂ ನೀಡುವ ಸಾಮರ್ಥ್ಯ ಸಮ್ಮೇಳನಾಧ್ಯಕ್ಷರಿಗೆ ಇರಬೇಕಾಗುತ್ತದೆ. ಇಲ್ಲಿ ನಾವು ಒಬ್ಬ ಲೇಖಕ ಮತ್ತು ಸಾಹಿತಿಯ ನಡುವಿನ ವ್ಯತ್ಯಾಸ ಅರಿಯುವುದು ಒಳ್ಳೆಯದು. ಸುದ್ದಿ ಮಾಧ್ಯಮಗಳ ಅಂಕಣಕಾರರು, ಲೇಖಕರು ಸಾಹಿತ್ಯ ಬರೆಯುವುದಿಲ್ಲ ಎಂಬ ಸತ್ಯಾಂಶವನ್ನು ನಾವು ಮನಗಾಣುವುದು ಇಂದು ಅತ್ಯವಶ್ಯಕ. ಹಾಗಾಗಿ ಒಬ್ಬ ಸಾಹಿತಿ ಮಾತ್ರ ಸಮ್ಮೇಳನದ ಅಧ್ಯಕ್ಷ ಸ್ಥಾನ ಅಲಂಕರಿಸುವುದು ಸೂಕ್ತವೆನಿಸುತ್ತದೆ.

ಇನ್ನು ಸಾಹಿತ್ಯ ಸಮ್ಮೇಳನಗಳ ಪ್ರಮುಖ ಅಂಶಗಳೆಂದರೆ ವಿವಿಧ ವಿಷಯಗಳ ಬಗ್ಗೆ ಸಾಹಿತಿಗಳಿಂದ, ಲೇಖಕರಿಂದ ಸಮಾಜದ ವಿವಿಧ ಕ್ಷೇತ್ರಗಳ ಮುಖಂಡರಿಂದ ಪ್ರಬಂಧ ಮಂಡನೆಗಳು ಅಥವಾ ತಾಂತ್ರಿಕವಾಗಿ ಹೇಳುವುದಾದರೆ ವಿಚಾರ ಗೋಷ್ಠಿಗಳು. ಈ ವಿಚಾರಗೋಷ್ಠಿಗಳು ಒಂದು ರೀತಿಯಲ್ಲಿ ಸಭಿಕರೊಡನೆ ಸಂವಾದದ ಸ್ವರೂಪ ಹೊಂದಿರುವುದು ಉಚಿತವಾದರೂ, ವಾಸ್ತವವಾಗಿ ಹಾಗಾಗುವುದಿಲ್ಲ. ಅವು ಕೇವಲ ಭಾಷಣಗಳಾಗಿ ಉಳಿದುಬಿಡುತ್ತವೆ. ಭಾಷಣಗಳನ್ನು ಕೇಳಿ ಕೇಳಿ ಬೇಸತ್ತಿರುವ ಜನತೆಗೆ ಇದೂ ಒಂದು ಸಾಧಾರಣ ಭಾಷಣವಾಗಿಯೇ ಉಳಿಯುತ್ತದೆ. ಗೋಷ್ಠಿಗಳಲ್ಲಿ ವಿಷಯಗಳನ್ನು ಮಂಡಿಸುವವರು ಆಳವಾದ ಅಧ್ಯಯನ ಮಾಡಿ ನಂತರ ಭಾಷಣ ಮಾಡುವಂತಾಗಬೇಕಾದರೆ, ಈ ರೀತಿಯ ಸಂವಾದಗಳು, ಚರ್ಚೆಗಳು ಅವಶ್ಯಕ. ಬಹುತೇಕ ಸಮ್ಮೇಳನಗಳಲ್ಲಿ ಸಮಯಾಭಾವದಿಂದ ಈ ರೀತಿಯ ಕಾರ್ಯಕ್ರಮಗಳು ಕೈಗೂಡುವುದಿಲ್ಲ.

ಸಮ್ಮೇಳನಗಳಲ್ಲಿ ವಿಚಾರಗೋಷ್ಠಿಯ ವಿಷಯಗಳ ಬಗ್ಗೆಯೂ ಪರಿಶೀಲನೆ ಅಗತ್ಯ. ಸಾಹಿತ್ಯ - ಭಾಷೆ, ಅವುಗಳ ಅಭಿವೃದ್ಧಿ - ಬೆಳವಣಿಗೆ – ಭವಿಷ್ಯಗಳ ಬಗ್ಗೆ ಜನರಲ್ಲಿ ಚಿಂತನೆಯನ್ನು ಮೂಡಿಸುವಂತಹ ವಿಷಯಗಳನ್ನು ಆರಿಸಿದರೆ ಸಾಹಿತ್ಯ ಸಮ್ಮೇಳನಕ್ಕೊಂದು ಮೆರುಗು ಬರುತ್ತದೆ. ಕನ್ನಡ ಸಾಹಿತ್ಯ ಲೋಕದಲ್ಲಿಯೇ ಇಂದು ಅನೇಕ ನ್ಯೂನತೆಗಳು, ಸಮಸ್ಯೆಗಳು ತಲೆದೋರುತ್ತಿವೆ. ನವೋದಯ - ನವ್ಯ - ಬಂಡಾಯ - ದಲಿತ ಹೀಗೆ ಅನೇಕ ಕಾಲಘಟ್ಟಗಳಲ್ಲಿ ಉಗಮವಾದ ಸಾಹಿತ್ಯ ರೂಪಗಳು ಈಗ ಹಳೆಯವಾಗಿ, ಹೊಸ ರೀತಿಯ ಸಾಹಿತ್ಯ ಉಗಮವಾಗಬೇಕಾಗಿದೆ. ಈ ಅಂಶದ ಬಗ್ಗೆ ಸಮ್ಮೇಳನಗಳಲ್ಲಿ ಚರ್ಚೆ ಉಂಟಾದರೆ ಎಷ್ಟೋ ಉಪಯುಕ್ತವೆನಿಸುತ್ತದೆ.

ಜಾಗತೀಕರಣದ ಅಲೆಯಲ್ಲಿ ಸಿಲುಕಿ ಕೊಚ್ಚಿಹೋಗುತ್ತಿರುವ ನಮ್ಮ ಸಾಮಾಜಿಕ - ಸಾಂಸ್ಕೃತಿಕ ಜೀವನವನ್ನು ಸೂಕ್ತ ರೀತಿಯಲ್ಲಿ ವಿಶ್ಲೇಷಿಸದೆ, ಕೇವಲ ಭಾಷಾಭಿಮಾನದ ಬಿರುಸು ನುಡಿಗಳನ್ನೇ ಆಡುತ್ತಿದ್ದರೆ, ನಾವು ಎಲ್ಲೋ ಒಂದು ಕಡೆ ದಿಕ್ಕುತಪ್ಪುತ್ತಿದ್ದೇವೆಂಬ ಭಾವನೆ ಮೂಡುತ್ತದೆ. ಇಂದಿನ ಸಾಮಾಜಿಕ ಪರಿಸ್ಥಿತಿಯನ್ನು ಚಿತ್ರಿಸುವಂತಹ ಸಾಹಿತ್ಯ ನಮ್ಮಲ್ಲಿ ಹೊರಹೊಮ್ಮುತ್ತಿದೆಯೇ ಎಂದು ಅವಲೋಕಿಸುವುದು ಈಗ ಅತ್ಯವಶ್ಯಕವಾಗಿದೆ. ಅದೇ ರೀತಿ ಸಿನಿಮಾ - ಕಲೆ - ಸಾಹಿತ್ಯಗಳ ಪರಸ್ಪರ ಸಂಬಂಧಗಳು, ಉಲ್ಬಣಿಸುತ್ತಿರುವ ಮೂಲಭೂತವಾದಿ - ಕೋಮುವಾದಿ - ಫ್ಯಾಸಿಸ್ಟ್ ರಾಜಕಾರಣದ ನೆಲಗಟ್ಟಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಸ್ಥಾನಮಾನ, ಸೃಜನಶೀಲತೆಗೆ ಸಲ್ಲುವ ಗೌರವ, ಈ ಎಲ್ಲಾ ಅಂಶಗಳನ್ನು



ಸ್ವಾಗತ ಕಮಾನುಗಳ ಭರಾಟೆ

ವಿಶ್ಲೇಷಿಸುವುದೂ ಇಂದು ಅತ್ಯಗತ್ಯವಾಗಿದೆ. ಸಾಹಿತ್ಯವನ್ನು ಸಮಾಜದ ಒಂದು ಅಂಗವಾಗಿ ಪರಿಗಣಿಸುವಂತೆ ಮಾಡುವ ಅಂಶಗಳನ್ನು ದೃಷ್ಟಿಯಲ್ಲಿರಿಸಿಕೊಂಡೇ ವಿಚಾರಗೋಷ್ಠಿಗಳನ್ನು ನಡೆಸಿದಾಗ ಸಮ್ಮೇಳನದ ಸ್ವರೂಪವೇ ಬೇರೆಯಾಗುತ್ತದೆ. ಕಲಾವಿದ-ಕವಿ-ಸಾಹಿತಿಗಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವೇ ದುರ್ಲಭವಾಗುತ್ತಿರುವ ಇಂತಹ ರಾಜಕೀಯ ವಾತಾವರಣದಲ್ಲಿ ಸಾಹಿತ್ಯ ಸಮ್ಮೇಳನಗಳು ಅವರಿಗೆ ಒಂದು ವೇದಿಕೆಯನ್ನು ಒದಗಿಸಬೇಕಾಗಿದೆ.

ಒಂದು ತಾಲ್ಲೂಕು ಮಟ್ಟದ ಸಾಹಿತ್ಯ ಸಮ್ಮೇಳನದ ಪೂರ್ವಭಾವಿ ಸಿದ್ಧತೆಯಾಗಿ ಶಾಲಾ ಕಾಲೇಜುಗಳಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಒಂದು ಪ್ರಬಂಧ ಅಥವಾ ಚರ್ಚಾ ಸ್ಪರ್ಧೆ, ಕವನ ಸ್ಪರ್ಧೆ, ನಾಟಕ ಸ್ಪರ್ಧೆಗಳನ್ನು ಹಮ್ಮಿಕೊಂಡು, ಈ ಸ್ಪರ್ಧೆಗಳಲ್ಲಿ ಹೊರಹೊಮ್ಮುವ ಉತ್ತಮ ಪ್ರತಿಭೆಗಳಿಗೆ ಸಮ್ಮೇಳನದಲ್ಲಿ ಭಾಗವಹಿಸುವ ಅವಕಾಶ ಮಾಡಿಕೊಟ್ಟಲ್ಲಿ ಉದಯೋನ್ಮುಖ ಸಾಹಿತಿ - ಕಲಾವಿದರಿಗೆ ಅಪಾರ ಪ್ರೋತ್ಸಾಹ ನೀಡಿದಂತಾಗುತ್ತದೆ. ಇಲ್ಲವಾದಲ್ಲಿ ರಾಜಕೀಯ ಹಾಗೂ ಇತರ ಒತ್ತಡಗಳಿಗೆ ಮಣಿದು ಕಾವ್ಯ ಕವನದ ಗಂಧವನ್ನೇ ಅರಿಯದವರನ್ನು ಕವಿಗೋಷ್ಠಿಗಳಿಗೆ ಆಹ್ವಾನಿಸಿ, ಜನತೆಯ ಅಪಹಾಸ್ಯಕ್ಕೀಡಾಗಬೇಕಾಗುತ್ತದೆ. ಕನ್ನಡ ಸಾಹಿತ್ಯಾಭಿಮಾನಿಗಳಿಗೆ ಕರ್ನಾಟಕದಲ್ಲಿ ಕಂಡುಬರುವ ಒಂದು ದೊಡ್ಡ ನ್ಯೂನತೆ ಎಂದರೆ ಇಂದಿನ ಯುವ ಪೀಳಿಗೆಯಲ್ಲಿ, ಅದರಲ್ಲೂ ವಿದ್ಯಾರ್ಥಿಗಳಲ್ಲಿ, ಸಾಹಿತ್ಯಾಸಕ್ತಿ ಕುಂದುತ್ತಿರುವುದು, ಬಹುತೇಕ ಎಲ್ಲಾ ಸಮ್ಮೇಳನಗಳಲ್ಲೂ ಈ ವಿಷಯ ಪ್ರಸ್ತಾಪವಾಗುತ್ತಿದೆ. ಹಿರಿಯ ಸಾಹಿತಿಗಳು ಕಳವಳವನ್ನು ವ್ಯಕ್ತಪಡಿಸುತ್ತಾರೆ. ಆದರೆ ಈ ಬೆಳವಣಿಗೆಗೆ ಕಾರಣಗಳೇನೆಂಬುದನ್ನು ಆಳವಾಗಿ ಅಧ್ಯಯನ ಮಾಡದಿರುವುದು ವಿಷಾದದ ಸಂಗತಿ.

ಟಿ.ವಿ.ಗಳಿಂದಲೇ ಮಕ್ಕಳಲ್ಲಿ ಸಾಹಿತ್ಯಾಸಕ್ತಿ ಕುಂದಿದೆ ಎಂಬ ಸಾಮಾನ್ಯ ಆರೋಪದಲ್ಲಿ ಸತ್ಯಾಂಶವೇ ಇದ್ದರೂ ಶಾಲಾ ಕಾಲೇಜುಗಳಲ್ಲಿ ಅಧ್ಯಾಪಕರು ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿ ಮೂಡಿಸುವಲ್ಲಿ ವಿಫಲರಾಗಿರುವುದು ಒಂದು ಕಾರಣವೆಂದು ಹೇಳಬಹುದು. ಶಾಲಾ ಕಾಲೇಜುಗಳ ಲೈಬ್ರರಿಗಳೂ ಕನ್ನಡ ಸಾಹಿತ್ಯ ಕೃತಿಗಳನ್ನು ಶೇಖರಿಸಿ ಅವುಗಳನ್ನು ಓದುವಂತೆ ಪ್ರೋತ್ಸಾಹ ನೀಡಬೇಕು. ಅಂತಹ ಕೃತಿಗಳ ಬಗ್ಗೆ, ಸಾಹಿತಿಗಳ ಬಗ್ಗೆ ಪ್ರಬಂಧ ಸ್ಪರ್ಧೆ, ಚರ್ಚಾ ಸ್ಪರ್ಧೆಗಳನ್ನು ಕಾಲಕಾಲಕ್ಕೆ ಏರ್ಪಡಿಸಬೇಕು. ಶಾಲಾ ವೇಳಾಪಟ್ಟಿಯಲ್ಲಿ ಕನಿಷ್ಠಪಕ್ಷ ವಾರಕ್ಕೆ ಎರಡು ಗಂಟೆಯ ಕಾಲವಾದರೂ ಸಾಹಿತ್ಯಕ್ಕೆ ಮೀಸಲಾಗಿಡಬೇಕು. ಆಗ ಅಧ್ಯಾಪಕರುಗಳೂ ಸಾಹಿತ್ಯಾಭ್ಯಾಸದಲ್ಲಿ ತೊಡಗುತ್ತಾರೆ. ಕೇವಲ ಪಠ್ಯಪುಸ್ತಕವನ್ನು ಹೇಳಿಕೊಡುವುದನ್ನೇ ತಮ್ಮ ವೃತ್ತಿ ಮಾಡಿಕೊಳ್ಳುವ ಬಹುತೇಕ ಅಧ್ಯಾಪಕರುಗಳಿಗೂ ಈ ವಿಧಾನದಿಂದ ಸಾಹಿತ್ಯಾಸಕ್ತಿ ಮೂಡುತ್ತದೆ. ಈ ಬಗ್ಗೆ ಸಾಹಿತ್ಯ ಸಮ್ಮೇಳನಗಳಲ್ಲಿ ಚರ್ಚೆಯ ಅವಶ್ಯಕತೆಯಿದೆ. ಅಧ್ಯಾಪಕ ವರ್ಗದಲ್ಲಿ ಮಂಥನದ ಅವಶ್ಯಕತೆಯೂ ಇದೆ.

ಇಂದು ಯಾವುದೇ ಶಾಲೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ಎಂದರೆ ಕೇವಲ ಕೆಟ್ಟ ಹಿಂದೀ ಹಾಡುಗಳಿಗೆ ಅಥವಾ ಕನ್ನಡ ಹಾಡುಗಳಿಗೆ ವೇದಿಕೆಯ ಮೇಲೆ ಕುಣಿಯುವುದೇ ಆಗಿದೆ. ನಮ್ಮ ಕನ್ನಡದ ಕವಿಗಳನೇಕರು ಬರೆದಿರುವ ಅನೇಕ ಕವನಗಳನ್ನು ನೃತ್ಯರೂಪಕ್ಕೆ ಅಳವಡಿಸುವ ಪ್ರಯತ್ನವೇ ಇಂದು ನಡೆಯುವುದಿಲ್ಲ. ಹಳೆಯ ಕನ್ನಡ ಸಿನಿಮಾಗಳಲ್ಲಿ ಈ ಪ್ರಯತ್ನ ಆಗಿದ್ದನ್ನು ಇಲ್ಲಿ ಸ್ಮರಿಸಬಹುದು. ಈ ನಿಟ್ಟಿನಲ್ಲಿ ಅಧ್ಯಾಪಕರಷ್ಟೇ ಜವಾಬ್ದಾರಿ ಪೋಷಕರದ್ದೂ ಇರುತ್ತದೆ. ಕೇವಲ ಮಕ್ಕಳು ರ್‍ಯಾಂಕುಗಳನ್ನು ಗಳಿಸುವುದರತ್ತಲೇ ಗಮನ ಹರಿಸುವ ಪೋಷಕರು ಸಾಹಿತ್ಯಾಭ್ಯಾಸಕ್ಕೆ ಅವಕಾಶವನ್ನೇ ನೀಡುವುದಿಲ್ಲ. ಟಿ.ವಿ.ಗಳ ಮುಂದೆ ಮಣೆ ಹಾಕಿಕೊಂಡು ಕುಳಿತುಕೊಳ್ಳುವ ಪೋಷಕರು ಸ್ವತಃ ಯಾವುದೇ ಸಾಹಿತ್ಯ ಕೃತಿಗಳನ್ನು ಓದುವ ಹವ್ಯಾಸ ಹೊಂದಿರುವುದಿಲ್ಲ. ಇನ್ನು ಆಂಗ್ಲ ಮಾಧ್ಯಮದಲ್ಲಿ ಓದುವ ಮೇಲ್ವರ್ಗದ ಜನ ಆಂಗ್ಲ ಸಾಹಿತ್ಯವನ್ನು ಓದುವಂತೆ ಪ್ರೋತ್ಸಾಹಿಸುವರೇ ಹೊರತು, ನಮ್ಮ ಸಂಸ್ಕೃತಿ-ಸಮಾಜವನ್ನು ಪ್ರತಿಬಿಂಬಿಸುವ ಕನ್ನಡ ಕೃತಿಗಳನ್ನು ಓದಲು ಪ್ರೇರೇಪಿಸುವುದಿಲ್ಲ. ಈ ಅಂಶಗಳೂ ಸಾಹಿತ್ಯ ಸಮ್ಮೇಳನಗಳಲ್ಲಿ ಚರ್ಚೆಗೆ ಒಳಗಾಗುವುದು ಇಂದು ಅತ್ಯವಶ್ಯಕ.

ನಮ್ಮ ಸುದ್ದಿ ಮಾಧ್ಯಮಗಳು ಸಹ ಬೆಳೆವ ಪೈರನ್ನು ಮೊಳಕೆಯಲ್ಲೇ ಚಿವುಟಿಹಾಕುವಂತೆ ಮುಂಬರಲಿಚ್ಛಿಸುವ ಉದಯೋನ್ಮುಖ ಸಾಹಿತ್ಯಾಸಕ್ತ ಯುವಕರನ್ನು ಪ್ರೋತ್ಸಾಹಿಸುವುದಿಲ್ಲ. ಕಥೆ, ಕವನ, ಕಾವ್ಯ, ಲೇಖನ, ನಾಟಕ ಹೀಗೆ ಹಲವಾರು ರೂಪಗಳಲ್ಲಿ ಸಾಹಿತ್ಯ ಜನತೆಯ ಮಧ್ಯದಲ್ಲಿ ಹೊರಹೊಮ್ಮುತ್ತಲೇ ಇದ್ದರೂ, ಮುಖ್ಯವಾಹಿನಿಯ ಸುದ್ದಿ ಮಾಧ್ಯಮಗಳು ಅವುಗಳನ್ನು ಗುರುತಿಸುವಲ್ಲಿ ವಿಫಲವಾಗಿವೆ. ರಾಜಕೀಯ ಪಕ್ಷಗಳ ಮುಖವಾಣಿಗಳಾಗಿ, ಅವುಗಳನ್ನು ಪೋಷಿಸುವ ಬಂಡವಾಳಗಾರರ ಸ್ವಾಮ್ಯದಲ್ಲಿರುವ ಬಹುತೇಕ ಸುದ್ದಿ ಮಾಧ್ಯಮಗಳು ತಮ್ಮ ಮೂಗಿನ ನೇರಕ್ಕೆ ಬರೆಯುವ ಬರಹಗಾರರನ್ನು ಮಾತ್ರ ಪ್ರೋತ್ಸಾಹಿಸುತ್ತವೆ. ಹೀಗಾಗಿ ಉದಯೋನ್ಮುಖ ಸಾಹಿತಿ-ಕವಿ-ಲೇಖಕರು ಜಿಲ್ಲಾ ಮಟ್ಟದ ಕ್ಷೇತ್ರೀಯ ಪತ್ರಿಕೆಗಳನ್ನೇ ಅವಲಂಬಿಸಬೇಕಾಗುತ್ತದೆ. ಈ ಅಂಶವೂ ಸಾಹಿತ್ಯ ಸಮ್ಮೇಳನಗಳಲ್ಲಿ ಚರ್ಚೆಗೊಳಗಾಗಬೇಕಾಗಿದೆ.

ನಮ್ಮ ಪ್ರಸಾರ ಮಾಧ್ಯಮಗಳೂ ಸಹ, ಪ್ರಮುಖವಾಗಿ ಟಿ.ವಿ. ಚಾನಲ್‌ಗಳು, ಕೇವಲ ಹಣ ಗಳಿಕೆಯ ದೃಷ್ಟಿಕೋನ ಹೊಂದಿರುವುದರಿಂದ ಸಾಹಿತ್ಯಲೋಕದ ಬಗ್ಗೆ ಗಮನ ಹರಿಸುವುದು ಅತಿವಿರಳ. ವಾರದಲ್ಲಿ ೩೦ ನಿಮಿಷ ಮಾತ್ರ ಸಾಹಿತ್ಯಕ್ಕೆ ಮೀಸಲಾಗಿದ್ದು ಅನ್ಯ ವೇಳೆಯಲ್ಲಿ ಬರೀ ಸಿನಿಮಾ ತುಂಬಿರುತ್ತದೆ. ಇಂದು ಮನೆಮನೆಗಳಲ್ಲಿ ಟಿ.ವಿ. ಒಂದು ಪ್ರಮುಖ ಮಾಧ್ಯಮವಾಗಿರುವುದರಿಂದ ಸಾಹಿತ್ಯದ ಅಭಿವೃದ್ಧಿಗಾಗಿ, ಯುವ ಪೀಳಿಗೆಯಲ್ಲಿ ಸಾಹಿತ್ಯಾಸಕ್ತಿ ಮೂಡಿಸುವುದಕ್ಕಾಗಿ ಈ ಮಾಧ್ಯಮವನ್ನು ಉಪಯೋಗಿಸಿಕೊಳ್ಳುವುದು ಇಂದಿನ ಪರಿಸ್ಥಿತಿಯಲ್ಲಿ ಸೂಕ್ತವೆನಿಸುತ್ತದೆ. ಈ ಅಂಶವೂ ಸಾಹಿತ್ಯ ಸಮ್ಮೇಳನಗಳಲ್ಲಿ ಚರ್ಚೆಗೊಳಗಾಗಬೇಕಾಗಿದೆ.

ಕನ್ನಡ ಭಾಷೆಯ ಬಗ್ಗೆ ಹೇಳುವುದಾದರೆ ಕನ್ನಡಿಗರು ನಿರಭಿಮಾನಿಗಳು, ಭಾಷಾ ಪ್ರೇಮವಿಲ್ಲದವರು, ಅನ್ಯಭಾಷಾ ವ್ಯಾಮೋಹಿಗಳು ಎಂದೆಲ್ಲ ಹೀಗಳೆಯುವ ''ಹುಟ್ಟು ಹೋರಾಟಗಾರರು'' ಇಂದು ಉತ್ತರಿಸಬೇಕಾದ ಮುಖ್ಯ ಪ್ರಶ್ನೆ ಎಂದರೆ ಕನ್ನಡಾಭಿಮಾನಿ ಎಂದರೆ ಯಾರು ? ಕೇವಲ ಕನ್ನಡ ಸಿನಿಮಾ ನೋಡುವವರೆ ? ಕನ್ನಡ ಹಾಡುಗಳನ್ನು ಮಾತ್ರ ಕೇಳುವವರೇ ? ಎಲ್ಲಾ ವ್ಯವಹಾರವನ್ನೂ ಕನ್ನಡದಲ್ಲೇ ಮಾಡುವವರೇ ? ಅನ್ಯ ಭಾಷೆಗಳನ್ನು ದ್ವೇಷಿಸುವವರೇ ? ಅಥವಾ ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಯ ಗಂಧವೇ ಇಲ್ಲದಿದ್ದರೂ ರಾಜ್ಯೋತ್ಸವದಂದು ಹಣೆಗೆ ಕುಂಕುಮ ಬಳಿದುಕೊಂಡು ಭುವನೇಶ್ವರಿಯ ಮುಂದೆ ಕುಣಿದು ಕುಪ್ಪಳಿಸುವವರು ಕನ್ನಡಾಭಿಮಾನಿಗಳೇ ? ಕನ್ನಡ ಭಾಷೆ ಸಾಹಿತ್ಯ ಬೆಳೆಯಬೇಕಾದರೆ ಹೆಚ್ಚು ಹೆಚ್ಚು ಕನ್ನಡಿಗರು ಓದುವವರಾಗುವುದು ಅವಶ್ಯ. ಆದರೆ ನಮ್ಮಲ್ಲಿ ಆವೇಶದಿಂದ ಭುವನೇಶ್ವರಿಯ ಮುಂದೆ ಕುಣಿದಾಡುವವರೇ ಕನ್ನಡಾಭಿಮಾನಿಗಳಾಗಿ ಬಿಡುತ್ತಾರೆ. ಅಥವಾ ತಿರುವಳ್ಳುವರ್ ಪ್ರತಿಮೆ, ಕಾವೇರಿ ವಿವಾದದ ಪ್ರಶ್ನೆ ಇದುರಾದಾಗ ತಮಿಳರನ್ನು ಹೀಗಳೆಯುವವರೇ ಕಟ್ಟಾ ಕನ್ನಡಿಗರಾಗಿಬಿಡುತ್ತಾರೆ. ರಾಜ್ಯಾದ್ಯಂತ ಇರುವ ಸಾವಿರಾರು ಕನ್ನಡ ಸಂಘಗಳಲ್ಲಿ ಎಷ್ಟು ಸಂಘಗಳು ರಾಜ್ಯೋತ್ಸವ ಸಮಾರಂಭದಂದು ಸಾಹಿತ್ಯ ಸಂವಾದ ನಡೆಸುತ್ತಿವೆ ? ಇಂದು ಕನ್ನಡ ಕವಿ-ಸಾಹಿತಿ-ಕಲಾವಿದರಿಗಿಂತಲೂ ಸಿನಿಮಾ ನಟ ನಟಿಯರೇ ಹೆಚ್ಚು ಪ್ರಾಧಾನ್ಯತೆ ಹೊಂದಿರುವುದು ವಿಷಾದಕರ ಸಂಗತಿ ಅಲ್ಲವೇ ? ವಿನಾಯಕ, ಶ್ರೀನಿವಾಸ, ಮುಂತಾದ ದಿಗ್ಗಜರ ನಿಜವಾದ ನಾಮಧೇಯಗಳು ಎಷ್ಟು ಜನ ಕನ್ನಾಡಭಿಮಾನಿಗಳಿಗೆ ತಿಳಿದಿದೆ ? ಸಾಹಿತ್ಯ - ಕಲೆಯ ಅಭಿವೃದ್ಧಿಯಾಗದೆ ಭಾಷೆ ಅಭಿವೃದ್ಧಿ ಹೊಂದುವುದು ಅಸಾಧ್ಯ. ಕನ್ನಡ ಸಾಹಿತ್ಯ ಕನ್ನಡಿಗರಿಂದ ದೂರ ಉಳಿದಷ್ಟೂ ಅಪಾಯವೇ ಹೆಚ್ಚು. ಇದೇ ಕರ್ನಾಟಕದ ಜನತೆ ಮಮ್ಮಿ-ಡ್ಯಾಡಿ ಬದಲು ಅಪ್ಪ-ಅಮ್ಮ ಎಂದರೆ ಕನ್ನಡ ಉಳಿಯುವುದೇ ? ಆವೇಶಭರಿತ ಘೋಷಣೆಗಳಿಂದ ಯಾವುದೇ ಭಾಷೆಯ ಅಭಿವೃದ್ಧಿ ಆಗುವುದಿಲ್ಲ. ಕನ್ನಡ ಭಾಷೆ, ನಾಡು, ನುಡಿಗಳು ಮೆರೆದಾಡಲು ಕನ್ನಡಿಗರ ಪರಿಶ್ರಮ ಅತ್ಯಗತ್ಯ. ದುರಭಿಮಾನಿ, ನಿರಭಿಮಾನಿ, ಕಟ್ಟಾ ಅಭಿಮಾನಿ ಇವೆಲ್ಲವೂ ಸುಂದರ ಪದಗಳಷ್ಟೆ. ಇವುಗಳಿಂದ ಯಾವುದೇ ಪ್ರಯೋಜನವಾಗುವುದಿಲ್ಲ.

ಬೆಂಗಳೂರಿನಂತಹ ಮಹಾನಗರಗಳಲ್ಲಿ ಆರ್ಥಿಕತೆಯ ಪರಿಣಾಮವಾಗಿ ವಿಭಿನ್ನ ಭಾಷೆಗಳ ಜನ ಬಂದು ನೆಲೆಸುವುದರಿಂದ ಅಲ್ಲಿ ಕನ್ನಡ ಅಲ್ಪಸಂಖ್ಯಾತ ಭಾಷೆಯಾದರೂ ಅಚ್ಚರಿಯೇನಿಲ್ಲ. ಹಾಗೆಂದ ಮಾತ್ರಕ್ಕೆ ಇಡೀ ರಾಜ್ಯದಲ್ಲಿ ಕನ್ನಡ ನಶಿಸಿಹೋಗಿದೆ ಎಂಬಂತೆ ಡಂಗುರ ಬಾರಿಸುವುದು ಸರ್ವಥಾ ಸರಿಯಲ್ಲ. ಇಂದಿಗೂ ಮಂಡ್ಯ ಜಿಲ್ಲೆಯಲ್ಲಿ, ಉತ್ತರ ಕರ್ನಾಟಕದಲ್ಲಿ, ಮೈಸೂರು ಪ್ರಾಂತದಲ್ಲಿ ಕನ್ನಡ ಅಕ್ಷರಶಃ ಜೀವಂತವಾಗಿದೆ. ಬೆಂಗಳೂರಿನ ಬುದ್ಧಿಜೀವಿಗಳು, ಅಂದರೆ ಕನ್ನಡಾಭಿಮಾನಿಗಳು, ಬೆಂಗಳೂರಿನಿಂದಾಚೆಗೆ ನೋಡದಿರುವುದೇ ಒಂದು ದುರಂತ.

ಇಂತಹ ಸನ್ನಿವೇಶದಲ್ಲಿ ಸಾಹಿತ್ಯ ಸಮ್ಮೇಳನಗಳು ಈ ಬೆಳವಣಿಗೆಗಳನ್ನು ಚರ್ಚಿಸಿ, ನ್ಯೂನತೆಗಳನ್ನು ಸರಿಪಡಿಸಿ ಸೌಹಾರ್ದಯುತ ಬಾಳ್ವೆ ನಡೆಸುವಂತಹ ಪರಿಹಾರಗಳನ್ನು ಕಂಡುಹಿಡಿಯಬೇಕಾಗಿದೆ. ಈ ಬಗ್ಗೆ ಇನ್ನು ಮುಂದಾದರೂ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು, ಸಾಹಿತ್ಯಾಸಕ್ತರು, ಯೋಚಿಸುವರೇ ? ಕಾದು ನೋಡಬೇಕಾಗಿದೆ.

ನಾ. ದಿವಾಕರ
ಕೆನರಾ ಬ್ಯಾಂಕ್, ಬೇಲೂರು.

**ಚಂದನ** (ಪ್ರಬಂಧ ಸಂಕಲನ)

*ಭಾರತೀ ಕಾಸರಗೋಡು*

**ಪುಟ : 127** **ಬೆಲೆ : ರೂ. 50**

**ಅಂಜನ ಪ್ರಕಾಶನ**, ಬೆಂಗಳೂರು.




*ಲವಲವಿಕೆಯಿಂದ ಕೂಡಿದ, ಸುಲಲಿತ ಭಾಷೆಯ ಈ ಪ್ರಬಂಧ ಸಂಕಲನ ವಿಷಯ ವೈವಿಧ್ಯತೆಯಿಂದ ಕೂಡಿದ್ದು ಮನಸ್ಸಿಗೆ ಮುದ ನೀಡುತ್ತದೆ. ಬದುಕಿನ ಸೌಂದರ್ಯ ಸಂತೋಷಗಳನ್ನು ಎಲ್ಲರೊಂದಿಗೆ ಹಂಚಿಕೊಳ್ಳುತ್ತ ಚಿಕ್ಕ ಚಿಕ್ಕ ವಿಷಯಗಳಾದರೂ ಅದರಲ್ಲೇ ಮಹತ್ತರವಾದ ಗುಣಗಳನ್ನು ಕಾಣುತ್ತ ನಮ್ಮೊಂದಿಗೆ ಭಾರತಿಯವರು ಸ್ಪಂದಿಸುವ ರೀತಿ ಆಪ್ಯಾಯಮಾನ. ಹದಿನಾರು ಪ್ರಬಂಧಗಳು ಇಲ್ಲಿ ನಮ್ಮೊಂದಿಗೆ ಸ್ವಲ್ಪವೂ ಅಂಜದೆ - ಅಳುಕದೆ ಮುಖಾಮುಖಿಯಾಗಿ ಮಾತನಾಡುತ್ತವೆ.*




**ಸೂಫಿ ಬ್ಯಾರಿಯ ಜಕಾತ್ ಯಾತ್ರೆ** (ಕಥೆಗಳು)

*ಹಂಝ ಮಲಾರ್*

**ಪುಟ : 98** **ಬೆಲೆ : ರೂ. 20**

**ಬ್ಯಾರಿ ಕಲಾರಂಗ ಪ್ರಕಾಶನ**, ಮಂಗಳೂರು (ದ.ಕ.)

*ವಯಸ್ಸಿಗೂ ಮೀರಿದ ಪ್ರತಿಭೆಯನ್ನು ಹೊಂದಿದ ಎಳೆಯ ಹುಡುಗನೊಬ್ಬ ದಿಟ್ಟತನದಿಂದ ತನ್ನ ಸಮಾಜದ ಹುಳುಕುಗಳನ್ನು ಕಥೆಗಳನ್ನಾಗಿಸಿ ಹೇಳುವುದೇನೂ ಸುಲಭವೂ ಅಲ್ಲ; ಹುಡುಗಾಟವೆಂದು ತಳ್ಳಿಹಾಕುವಂತೆಯೂ ಇಲ್ಲ. ಪತ್ರಕರ್ತ, ತರುಣ ಲೇಖಕ ಹಂಝ ಮಲಾರ್ ಲೇಖನಿಯಿಂದ ಮೂಡಿಬಂದ ಅಪ್ಪಟ ಬ್ಯಾರಿ ಜನಾಂಗದ ಹತ್ತು ಕಥೆಗಳು ನಮ್ಮನ್ನು ವಿಸ್ಮಯಗೊಳಿಸುತ್ತವೆ. ಉತ್ತಮ ಕಥೆಗಳ ಸಾಲಿನಲ್ಲಿ ಸೇರ್ಪಡೆಯಾಗುವ ಅರ್ಹತೆ ಇವುಗಳಿಗಿದೆ.*



**ನಾ ನಿಮ್ಮೊಳಗು**

*ವಿ. ಚಂದ್ರಶೇಖರ ನಂಗಲಿ*

**ಪುಟ : 210** **ಬೆಲೆ : ರೂ. 100**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ,' ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

*ಅಲ್ಲಮಪ್ರಭುವಿನ ವಚನಗಳಲ್ಲಿನ ತತ್ವ-ವಸ್ತುನಿಷ್ಠವಾದ ಅಭಿಪ್ರಾಯಗಳನ್ನು ಪುರಸ್ಕರಿಸುತ್ತ ವ್ಯಾಖ್ಯಾನಿಸಿರುವ ಅತ್ಯಂತ ವಿದ್ವತ್ಪೂರ್ಣವಾದ ವಿಚಾರಮಂಥನವಿದು. ಉಪಮಾನ ಪ್ರಧಾನವಾದ ಈತನ ವಚನಗಳನ್ನು ಆರ್ಥೈಸಿಕೊಂಡು ತಲಸ್ಪರ್ಶಿ ಅಧ್ಯಯನ ಮಾಡಿ, ''ಶಬ್ದದೊಳಗಿನ ನಿಃಶಬ್ದ''ವೆಂದು ಬಣ್ಣಿಸುತ್ತ ಡಾಂಭಿಕತನದ ವಿರುದ್ಧ ಬಂಡಾಯ ಮನೋವೃತ್ತಿಯ ಧ್ವನಿಗಳೆಂದು ಗುರುತಿಸಿದ ಲೇಖನಗಳು.*

**ನಾ ಕಂಡ ಬ್ರಝಿಲ್** (ಪ್ರವಾಸ ಕಥನ)

*ಡಾ|| ಸಿ. ನಾಗಭೂಷಣ*

**ಪುಟ : 129** **ಬೆಲೆ : ರೂ. 60**

**ಲೋಹಿಯಾ ಪ್ರಕಾಶನ**, ''ಕ್ಷಿತಿಜ'', ಕಪ್ಪಗಲ್ಲು ರಸ್ತೆ, ಬಳ್ಳಾರಿ - 583 103



*ಲೇಖಕರು ಕೈಗೊಂಡ ದಕ್ಷಿಣ ಅಮೆರಿಕದ ಬಹು ದೊಡ್ಡ ದೇಶ ಬ್ರಝಿಲ್ ಪ್ರವಾಸದ ಅನುಭವಗಳು ಸೊಗಸಾಗಿ ಮೂಡಿ ಬಂದಿವೆ. ಲೇಖಕರ ನಿರೂಪಣಾ ಚಾತುರ್ಯ, ಕಥೆ ಹೇಳುವಂತಹ ಶೈಲಿಯಿಂದಾಗಿ ನಾವೂ ಅವರ ಜತೆಗೇ ಪ್ರವಾಸ ಮುಗಿಸಿ ಬಂದಂತಹ ಅಪೂರ್ವ ಅನುಭವ ನೀಡುತ್ತದೆ. ಆ ದೇಶದ ಸಾಂಸ್ಕೃತಿಕ ಜಗತ್ತೊಂದು ನಮ್ಮ ಮುಂದೆ ಬಂದು ಪರಿಚಯಿಸಿಕೊಳ್ಳ ತೊಡಗುತ್ತದೆ. ಅನ್ಯದೇಶೀಯರ ನಾಗರಿಕತೆ ತಿಳಿದುಕೊಳ್ಳಲು ಒಂದು ಅವಕಾಶ.*

**ಗೌರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ** ಸಂಪುಟ - 9

(ಪತ್ರಿಕಾ ಲೇಖನಗಳು)

*ಸಂ : ವಿಷ್ಣು ನಾಯ್ಕ*

**ಪುಟ : 372** **ಬೆಲೆ : ರೂ. 180**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರ ಕೊಡ್ಲ, ಅಂಕೋಲಾ, ಉ. ಕ. - 581314



*''ಅವರಿನ್ನೂ ಬರೆಯುತ್ತಿದ್ದಾರೆ, ನಾನೇ ಸೋತಿರುವುದು !'' ಕನ್ನಡದ ಅಗ್ರಮಾನ್ಯ ಬರಹಗಾರ, ವಿಚಾರವಾದೀ ಚಿಂತಕ ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯದ ಸಂಪಾದಕ ಶ್ರೀ ವಿಷ್ಣು ನಾಯ್ಕರು ಅಭಿಮಾನದಿಂದ ಹೇಳಿದ ಈ ಮಾತುಗಳೇ ಕಾಯ್ಕಿಣಿಯವರ ಸಾಹಿತ್ಯದ ಸಾಗರವನ್ನು ಅಳೆಯಲು ಸಾಕಾದೀತು. ಕಾಯ್ಕಿಣಿಯವರ ಸಾಹಿತ್ಯದ ಬೃಹತ್ ದರ್ಶನವೇ ಈ ಸಂಪುಟಗಳ ಉದ್ದೇಶ.*



**ಬಸವ ಧರ್ಮ ಯಾರ ಸೊತ್ತು ?**

*ಕುಮಾರ ಕಕ್ಕಯ್ಯ ಪೋಳ*

**ಪುಟ : 128** **ಬೆಲೆ : ರೂ. 50**

**ಕುಮಾರ ಕಕ್ಕಯ್ಯ ಪೋಳ ಪ್ರಕಾಶನ**, ನಂ. 79, ಕಕ್ಕಯ್ಯ ನಿವಾಸ, ಕೆ. ಎಚ್. ಬಿ. ಕಾಲನಿ, ಬಿಜಾಪುರ - 586 103

*ಜಾತಿರಹಿತ ಸಮಾಜ ನಿರ್ಮಾಣದ ಧ್ಯೇಯವಿರಿಸಿ ಮಾನವನ ಕಲ್ಯಾಣಕ್ಕಾಗಿ ಸ್ಥಾಪಿತವಾದ ಬಸವ ಧರ್ಮವು ಇಂದು ಶೋಷಕರ - ಕುಟಿಲ ಸಮಯ ಸಾಧಕರ ಪಾಲಾಗಿರುವುದನ್ನು ಈ ವೈಚಾರಿಕ ಕೃತಿಯಲ್ಲಿ ಲೇಖಕರು ಪ್ರಸ್ತಾಪಿಸಿ ಬಸವ ಧರ್ಮದ ನಿಜವಾದ ವಾರಸುದಾರರು ಯಾರು ? ಎಂಬ ಮಹತ್ವದ ಪ್ರಶ್ನೆಯನ್ನೆತ್ತಿ ಚರ್ಚಿಸಿದ್ದಾರೆ. ಸಮಾಜದ ಉದ್ಧಾರಕ್ಕೆ ಅಡ್ಡಿಯಾಗಿರುವ ಯೋಗ್ಯರಲ್ಲದ ಅನೇಕ ಮಠಾಧೀಶರನ್ನೂ ಸಂಪ್ರದಾಯವಾದಿಗಳನ್ನೂ ಟೀಕಿಸಿದ್ದಾರೆ.*

**ಚಿನ್ನದ ಜಿಂಕೆಯ ಬೆನ್ನ ಹಿಂದೆ** (ಆತ್ಮ ಕಥನ)

*ಕೆ. ಆರ್. ನಾಯಕ್*

**ಪುಟ : 165** **ಬೆಲೆ : ರೂ. 80**

**ಅನಿಕೇತನ ಪ್ರಕಾಶನ**, ''ಅನಿಕೇತನ'', ರಾಜು ಬಿಲ್ಡಿಂಗ್ ಹತ್ತಿರ, ದೇವನೂರು ರಸ್ತೆ, ವಿಜಯನಗರ, ತುಮಕೂರು - 572 102

*ಹೋರಾಟವನ್ನೇ ಜೀವನವನ್ನಾಗಿಸಿಕೊಂಡು, ಶ್ರದ್ಧೆಯಿಂದ ಕಾರ್ಮಿಕ ಸಂಘಟನೆಗಳಲ್ಲಿ, ಸಾಮಾಜಿಕ ಚಳವಳಿಗಳಲ್ಲಿ ಭಾಗ ವಹಿಸುತ್ತ ಅತ್ಯಂತ ಕ್ರಿಯಾಶೀಲವಾದ ಬದುಕನ್ನು ತನ್ನದಾಗಿಸಿಕೊಂಡ ಕೆ.ಆರ್. ನಾಯಕ್‌ರ ಅನುಭವ ಕಥನವಿದು. ಅತ್ಯಂತ ಶಿಸ್ತಿನ ಕಮ್ಯುನಿಸ್ಟರಾಗಿದ್ದು ಇನ್ನೊಬ್ಬರಿಗೆ ದಾರಿದೀಪ ವಾಗುವಂತಹ ಅವರ ನಡೆವಳಿಕೆ ತುಂಬ ಬೆಲೆಬಾಳುವಂಥದು. ಕಮ್ಯೂನಿಸಂ ಕಾಲ ಮುಗಿಯಿತೆಂದು ಗಾರ್ದಭಗಾನ ಹಾಡುವವರಿಗೆ ಈ ಪುಸ್ತಕದಲ್ಲಿ ಒಳ್ಳೆಯ ಉತ್ತರವಿದೆ.*

**ತನುಕರಗದವರಲ್ಲಿ** (ಲೇಖನಗಳು)

*ಡಾ|| ಮಲ್ಲಿಕಾ ಘಂಟಿ*

**ಪುಟ : 230** **ಬೆಲೆ : ರೂ. 125**

**ಗೌತಮ ಪ್ರಕಾಶನ**, 176, 13ನೇ ವಾರ್ಡ್, ನಾಯಕರ ಬೀದಿ, ಬಳ್ಳಾರಿ - 583 101



*ಆರೋಗ್ಯಕರ ಸ್ತ್ರೀವಾದಿ ಧೋರಣೆಯೊಂದು ರೂಪುಗೊಂಡಾಗ ಮಾತ್ರ ''ಲಿಂಗಾಧಾರಿತ ತಾರತಮ್ಯ'' ಹಿಮ್ಮೆಟ್ಟಿ ಆಕೆ ಬಯಸಿದ ಬಿಡುಗಡೆ ನೆಮ್ಮದಿ ಆಕೆಗೆ ದಕ್ಕಬಹುದೆಂಬ ವಿಚಾರ ಕೇವಲ ನಿರೀಕ್ಷೆಯಾಗಿರಬಾರದೆಂಬ ಆಶಯ ಈ ಲೇಖನಗಳಲ್ಲಿದೆ. ಕೆಲವರು ಸಾಮಾನ್ಯವಾಗಿ ತಿಳಿದಿರುವಂತೆ ಸ್ತ್ರೀವಾದ ಸ್ತ್ರೀಯರಿಂದ ಮಾತ್ರ ಸಾಧ್ಯ ಎಂಬ ಹುಸಿ ನಂಬಿಕೆಯತ್ತ ವಾಲದೆ ಪುರುಷ ವರ್ಗದ ಕೊಡುಗೆಯ ಮಹತ್ವವನ್ನೂ ಮನಗಂಡು ಚರ್ಚಿಸಲಾಗಿದೆ.*

- ಇಂದಿರಾ ಕುಮಾರಿ

# ಭೂಮಿಯನ್ನು ಕುರಿತ ಕಲ್ಪನೆಗಳ ಆಲೋಚನೆಯ ವಿಕಾಸ

ಜಿ. ರಾಮಕೃಷ್ಣ

ವಿಶ್ವದ ವಿಸ್ಮಯಗಳಲ್ಲಿ ಭೂಮಿಯನ್ನು ಕುರಿತಂತೆ ವಿಪುಲವಾದ ಐತಿಹ್ಯಗಳು ಪ್ರಚಲಿತವಾಗಿವೆ. ಅಂತೆಯೇ ಅದನ್ನು ಅರ್ಥೈಸುವ ಪ್ರಯತ್ನಗಳೂ ಬೇಕಾದಷ್ಟು ನಡೆದಿವೆ. ಭೂಮಿಯು ಚಪ್ಪಟೆಯಾದ ಚಚ್ಚೌಕವೋ ಅಥವಾ ಗೋಲಾಕಾರದ ಆಕೃತಿಯನ್ನುಳ್ಳದ್ದೋ ಎಂಬುದರ ಬಗ್ಗೆ ಅನೇಕ ಶತಮಾನಗಳಿಂದ ವಿಚಾರ ನಡೆಯುತ್ತಾ ಬಂದಿದೆ. ಭೂಮಿಯನ್ನು ಆಕಾಶದಲ್ಲಿ ಇಳಿಬಿಡಲಾಗಿದೆ ಎಂದು ಋಗ್ವೇದದಲ್ಲಿ ಒಂದು ಮಾತು ಬರುತ್ತದೆ. ವಿಶ್ವಸೃಷ್ಟಿಯ ಕೌತುಕವನ್ನು ಪ್ರತಿಬಿಂಬಿಸುವ ಒಂದು ಸೂಕ್ತದಲ್ಲಿ (ಋ.೧೦-೧೨೯) ಸೃಷ್ಟಿಗೆ ಮುನ್ನ ಕೇವಲ ಕತ್ತಲು ಆವರಿಸಿತ್ತೆಂದು ಹೇಳಿದೆ. ನಂತರ ಮೊದಲು ಉದ್ಭವಿಸಿದ್ದು ನೀರು. ಅದರಿಂದ ಜ್ವಾಲೆಯಂತಿದ್ದ ಒಂದು ಚಿನ್ನದ ಮೊಟ್ಟೆ ಹೊರಬಂದಿತು; ಅದರ ಎರಡು ಚಿಪ್ಪುಗಳು ದ್ಯುಲೋಕ ಮತ್ತು ಭೂಲೋಕಗಳಾಗಿದ್ದುವು.

ತೈತ್ತಿರೀಯ ಉಪನಿಷತ್ತಿನಲ್ಲಿ (ಬ್ರಹ್ಮವಲ್ಲೀ ೧) ಆತ್ಮ, ಆಕಾಶ, ವಾಯು, ಅಗ್ನಿ, ನೀರು ಒಂದರಿಂದ ಮತ್ತೊಂದು ಕ್ರಮವಾಗಿ ಉತ್ಪತ್ತಿಯಾಗಿ ಆಮೇಲೆ ನೀರಿನಿಂದ ಭೂಮಿಯು ಉದ್ಭವಿಸಿತೆಂದು ಸೂಚಿಸಲಾಗಿದೆ. ನಂತರ ಸಸ್ಯಗಳು, ಆಹಾರ ಮತ್ತು ಮನುಷ್ಯ ಆವಿರ್ಭವಿಸಿದುವಂತೆ. ಇಂತಹ ಕಲ್ಪನೆಗಳು ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಬಹಳ ಹಿಂದಿನಿಂದ ದಾಖಲಾಗುತ್ತಾ ಬಂದಿವೆ.

ಪ್ರಾಚೀನ ಸಂಸ್ಕೃತಿಗಳಲ್ಲಿ ಭೂಮಿಯನ್ನು ವಿವಿಧ ದೃಷ್ಟಿಗಳಿಂದ ನೋಡಲಾಗಿದೆ. ಸೃಷ್ಟಿ, ಪುರಾಣ ಮತ್ತು ಧಾರ್ಮಿಕ ಪ್ರಜ್ಞೆಗಳು ಪ್ರತ್ಯೇಕವಾಗಿ, ಮತ್ತು ಕೆಲವೊಮ್ಮೆ ಸಮ್ಮಿಳಿತವಾಗಿ, ಭೂಮಿಯ ಬಗ್ಗೆ ಅನೇಕ ಭಾವನೆಗಳನ್ನು ರೂಢಿಸಿಕೊಂಡಿವೆ. ಭೂಮಿಯನ್ನು ಯಾರೋ ಸೃಷ್ಟಿಸಿದ್ದಾರೆಂದು ಪದೇ ಪದೇ ಹೇಳುತ್ತಾ ಬಂದಿರುವ ಮಾನವ ಕೆಲವೊಮ್ಮೆ ಅದಕ್ಕೆ ತನ್ನದೇ ಆದ ಜೀವಂತಿಕೆ ಉಂಟೆಂದು ಪ್ರತಿಪಾದಿಸಿದ್ದಾನೆ. ಭೂಮಿಯ ವಿಸ್ತೀರ್ಣ ಮತ್ತು ವಿಭಾಗಗಳು ವಿಭಿನ್ನ ರೀತಿಗಳಲ್ಲಿ ಚಿತ್ರಿತವಾಗಿರುವುದು ಕಂಡುಬರುತ್ತದೆ. ಭಾರತದ ಕೆಲವು ಪುರಾಣಗಳಲ್ಲಿ ಬರುವ ಜಂಬೂದ್ವೀಪದ ವಿವರಣೆಗಳು ಕೂಡ ಒಂದೇ ತೆರನಾಗಿಲ್ಲದಿರುವುದು ಸ್ವಾರಸ್ಯಕರವಾಗಿದೆ. ಭೂಮಿಯ ಕೆಳಭಾಗದಲ್ಲಿ ಮತ್ತು ಮೇಲ್ಭಾಗದಲ್ಲಿ ಕ್ರಮವಾಗಿ ಏಳೇಳು ಬೇರೆ ಲೋಕಗಳಿವೆಯೆಂಬ ಪ್ರತೀತಿ ನಮ್ಮ ಅನೇಕ ಗ್ರಂಥಗಳಲ್ಲಿ ನಮೂದಿತವಾಗಿದೆ. ಕೆಳಭಾಗದಲ್ಲಿ ರಾಕ್ಷಸಲೋಕಗಳಿವೆ ಮತ್ತು ಮೇಲ್ಭಾಗದಲ್ಲಿ ದೇವಲೋಕಗಳಿವೆ; ಇವೆರಡರ ನಡುವೆ ಇರುವ ಮಾನವ ತನ್ನ ಕೃತಿಗಳಿಂದಾಗಿ ಮೇಲಕ್ಕೆ ಅಥವಾ ಕೆಳಕ್ಕೆ ಹೋಗುತ್ತಾನೆ. ಇಂತಹ ನಂಬಿಕೆಯು ಭೂಮಿಯ ರಚನೆಗಿಂತಲೂ ಹೆಚ್ಚಾಗಿ ಮಾನವನ ನೈತಿಕ ಹುಡುಕಾಟದ ಕುರುಹಾಗಿದೆ ಎನ್ನಬಹುದು.

ಒಂದು ಪ್ರಾಚೀನ ನಂಬಿಕೆಯ ಪ್ರಕಾರ ಸಮುದ್ರವು ಒಂದು ದೊಡ್ಡ ನದಿಯಂತೆ ಭೂಮಿಯನ್ನು ಸುತ್ತುವರಿದಿದೆ; ಇನ್ನೊಂದು ನಂಬಿಕೆಯ ಪ್ರಕಾರ ಭೂಮಿಯು ಒಂದು ಚಪ್ಪಟೆಯಾದ ಬಿಲ್ಲೆ ಮತ್ತು ಅದು ಸಮುದ್ರದ ಮೇಲೆ ತೇಲುತ್ತಿದೆ. ಹಾಗೆ ತೇಲುತ್ತಿರುವುದು ಚಪ್ಪಟೆಯಾದ ಬಿಲ್ಲೆಯಲ್ಲ, ಆದರೆ ಉದ್ದುದ್ದನಾಗಿರುವ ಪೆಟ್ಟಿಗೆ ಎಂಬ ಇನ್ನೊಂದು ನಂಬಿಕೆಯು ಭೂಮಿಯ ಆಕಾರವನ್ನು ಒಂದು ವಿಧವಾಗಿ ಗುರುತಿಸುತ್ತದೆ. ಆಕಾಶವು ಭೂಮಿಯ ಮೇಲಿನ ಗುಮ್ಮಟವೆಂಬ ಕಲ್ಪನೆ ಇದರ ಮುಂದುವರಿಕೆಯೇ ಆಗಿದೆ. ಆ ಗುಮ್ಮಟವು ಭೂಮಿಯನ್ನು ಹೊಂದಿಕೊಂಡಿದೆಯೆಂದು ಒಂದು ವಿಭಾಗದ ಅನಿಸಿಕೆಯಾದರೆ ಅದು ಸಮುದ್ರದ ನೀರನ್ನು ಹೊಂದಿಕೊಂಡಿದೆಯೆಂದು ಮತ್ತೊಂದು ವಿಭಾಗದ ಅನಿಸಿಕೆಯಾಗಿದೆ. ಕೆಲವು ಕಂಬಗಳ ಆಧಾರದ ಮೇಲೆ ಆಕಾಶವನ್ನು ನಿಲ್ಲಿಸಲಾಗಿದೆಯೆಂಬ ನಂಬಿಕೆಯು ಅನೇಕ ಪ್ರಾಚೀನ ಬುಡಕಟ್ಟುಗಳ ಜನರಲ್ಲಿ ವ್ಯಾಪಕವಾಗಿತ್ತೆಂದು ಇತಿಹಾಸಕಾರರು ಗುರುತಿಸಿದ್ದಾರೆ. ಕಂಬದ ಬದಲು ಒಂದು ಬೃಹತ್ತಾದ ಮರವನ್ನೋ ಧೀರ ಪುರುಷನನ್ನೋ ರಾಕ್ಷಸನನ್ನೋ ದೇವತೆಯನ್ನೋ ಪ್ರಾಣಿಯನ್ನೋ ಆಧಾರಸ್ತಂಭವನ್ನಾಗಿ ಮಾಡಿರುವುದಕ್ಕೆ ಉದಾಹರಣೆಗಳು ದೊರೆಯುತ್ತವೆ. ಅದೇ ರೀತಿಯಲ್ಲಿ ಭೂಮಿಯೂ ಸಹ ಯಾವುದೋ ಆಧಾರದ ಮೇಲೆ ನಿಂತಿದೆಯೆಂಬ ಮಾತು ಅಪರೂಪವೇನಲ್ಲ. ಪ್ರಾಚೀನ ಯೂರೋಪಿನಲ್ಲಿ ಅಟ್ಲಾಸ್ ಅಂತಹ ಆಧಾರವನ್ನೊದಗಿಸಿದ್ದರೆ ಭಾರತೀಯ ಹಿನ್ನೆಲೆಯಲ್ಲಿ ಆದಿಶೇಷನಿಗೆ ಆ ಸ್ಥಾನ ಲಭಿಸಿದೆ.

ಭೂಮಿಯು ಅಸ್ತಿತ್ವಕ್ಕೆ ಬಂದುದರ ಬಗೆಗೆ ಪ್ರಾಚೀನರು ಹತ್ತಾರು ರೀತಿಯಲ್ಲಿ ವಿವರಣೆ ನೀಡಿದ್ದಾರೆ. ಅತಿಸಾಮಾನ್ಯವಾಗಿ ಕಂಡುಬರುವ ವಿವರಣೆಯೆಂದರೆ ಅದು ದೈವಸೃಷ್ಟಿ ಎಂಬುದು. ಇಲ್ಲಿ ''ಸೃಷ್ಟಿ'' ಎಂಬುದರ ವ್ಯಾಖ್ಯಾನವು ಎರಡು ರೀತಿಯದಾಗಿದೆ: (ಅ) ಇಲ್ಲದ್ದನ್ನು ಹೊಸದಾಗಿ ಅಸ್ತಿತ್ವಕ್ಕೆ ತರುವುದು, ಮತ್ತು (ಆ) ಇರುವುದನ್ನೇ ಹೇಗೋ ಬೇರೆ ರೀತಿಯಾಗಿ ಪರಿವರ್ತಿಸಿ ಭೂಮಿಯು ಈಗಿರುವಂತೆ ರಚಿಸುವುದು.

ಇದರ ಸುತ್ತಮುತ್ತ ನೂರಾರು ಕತೆಗಳು ಹೆಣೆದುಕೊಂಡಿವೆ. ಅಮೆರಿಕಾದ ಪ್ರಾಚೀನ ಬುಡಕಟ್ಟು ಜನಾಂಗಗಳಲ್ಲಿ ಪ್ರಚುರವಾಗಿದ್ದ ಒಂದು ಕತೆಯ ಪ್ರಕಾರ ಯಾವನೋ ದೈವಪುರುಷ ನೀರಿನಿಂದ ಒಂದಷ್ಟು ಜೇಡಿ ಮಣ್ಣನ್ನು ಹೊರತೆಗೆದು ಅದರಿಂದ ಭೂಮಿಯನ್ನು ರೂಪಿಸಿದ (ಅಂದರೆ, ಆ ಜೇಡಿಮಣ್ಣು ಭೂಮಿಯ ಭಾಗವಾಗಿರಲಿಲ್ಲ; ಅದು ನೀರಿನ ಭಾಗವಾಗಿದ್ದಿತು, ಎಂದರ್ಥ). ಆ ಜೇಡಿಮಣ್ಣಿಗೆ ವೃದ್ಧಿಯಾಗುವ ಸ್ವಭಾವವಿದ್ದಿರಬೇಕು; ಇಲ್ಲದಿದ್ದರೆ, ಒಂದು ಉಂಡೆಯಿಂದ ಇಡೀ ಭೂಮಿ ಹೇಗೆ ತಾನೆ ರೂಪುಗೊಳ್ಳಲು ಆಗುತ್ತಿತ್ತು!

ಪಾಲಿನೇಷ್ಯ ಬುಡಕಟ್ಟಿನವರ ಒಂದು ಪುರಾಣ ಕತೆಯಲ್ಲಿ ಟಂಗರೋವ ಎಂಬ ದೇವತೆಯು ನೀರಿನಲ್ಲಿ ಗಾಳ ಹಾಕಿ ಭೂಮಿಯನ್ನು ಹಿಡಿದನೆಂಬ ಮಾತಿದೆ. ಹಾಗೆ ಮೇಲೆತ್ತುತ್ತಿದ್ದಾಗ ಗಾಳವು ಹರಿದು ಭೂಮಿಯು ಮತ್ತೆ ನೀರಿನೊಳಗೆ ಸೇರಿಕೊಂಡಿತಂತೆ. ಸ್ವಲ್ಪವಾಗಿ ಎತ್ತಲಾಗಿದ್ದ ಭೂಭಾಗವೇ ಪಾಲಿನೇಷ್ಯ ಜನರು ವಾಸವಾಗಿದ್ದ ದಕ್ಷಿಣ ಸಮುದ್ರದ ದ್ವೀಪಗಳಾಗಿದ್ದವು. ಆ ದ್ವೀಪಗಳಲ್ಲದೆ ಬೇರೆಡೆಗಳಲ್ಲೂ ಭೂಮಿ ಇದ್ದಿತೆಂಬ ಅಂಶ ಅಲ್ಲಿನ ಪ್ರಾಚೀನ ಬುಡಕಟ್ಟಿನವರಿಗೆ ಮನವರಿಕೆಯಾಗುವಂತಿರಲಿಲ್ಲ. ಪ್ರಾಚೀನ ಬ್ಯಾಬಿಲೋನಿಯಾದ ಅನೇಕ ಪುರಾಣಗಳಲ್ಲಿ ಮಾರ್ಡುಕ್ ದೇವತೆಯು ದ್ಯುಲೋಕ ಮತ್ತು ಭೂಲೋಕಗಳನ್ನು ಸೃಷ್ಟಿಸಿದನೆಂಬುದನ್ನು ನಿರೂಪಿಸುವಾಗ ಹಲವು ವೈವಿಧ್ಯಗಳನ್ನು ಕಾಣಬಹುದು. ದೇವತೆಗಳಿಗೆ ವಿರೋಧಿಯಾದ ಒಬ್ಬ ಅಗಾಧವಾದ ವ್ಯಕ್ತಿಯನ್ನು ಕೊಂದು ಅವನ ಶರೀರದ ಒಂದು ಭಾಗದಿಂದ ಮಾರ್ಡುಕ್ ಭೂಮಿಯನ್ನು ಸೃಷ್ಟಿಸಿದನೆಂಬುದು ಒಂದು ಕತೆ; ತಿಯಮಾತ್ ಎಂಬುವವನು ಅಂತಹ ಅಗಾಧ ವ್ಯಕ್ತಿ.

ಆದಿಪುರುಷನ ಯಜ್ಞದಿಂದಾಗಿ ಭೂಮಿ, ಮುಂತಾದುವೆಲ್ಲಾ ಅಸ್ತಿತ್ವಕ್ಕೆ ಬಂದುವೆಂಬುದು ಋಗ್ವೇದದಲ್ಲಿ ಬರುವ ಒಂದು ಕಲ್ಪನೆ.

ಆ ಪುರುಷನಿಗೆ ಸಾವಿರ ತಲೆಗಳು, ಸಾವಿರ ಕಣ್ಣುಗಳು, ಸಾವಿರ ಕಾಲುಗಳು ಇವೆ; ಇಡೀ ಭೂಮಿಯನ್ನು ಆವರಿಸಿದ ಮೇಲೆ ಇನ್ನೂ ಹತ್ತು ಅಂಗುಲ ಮೇಲೆ ಉಳಿದಿದ್ದಿತಂತೆ. ಭೂಮಿಯ ಮೇಲೆ ಬಹುವಿಧದ ಸಸ್ಯಗಳು ಹಾಗೂ ಪ್ರಾಣಿಗಳು ಕಾಣಿಸಿಕೊಳ್ಳುವುದರಿಂದ ಭೂಮಿಯು ಸ್ತ್ರೀ ಅಂಶವಾದರೆ ದ್ಯುಲೋಕವು ಪುರುಷಾಂಶ. ಚೀಣಾದ ತತ್ತ್ವಶಾಸ್ತ್ರದ ಪರಿಧಿಯಲ್ಲಿ ಯಿನ್ ಮತ್ತು ಯಾಂಗ್ ಕಲ್ಪನೆಗಳ ಹಿನ್ನೆಲೆಯಲ್ಲಿ ಇದೇ ಗ್ರಹಿಕೆಯನ್ನು ನಾವು ನೋಡಬಹುದು. ಪ್ರಾಚೀನ ಮೆಕ್ಸಿಕೋದಲ್ಲಿ ಭೂಮಿ ತಾಯಿಯನ್ನು ಎಲ್ಲ ಶಪಥಗ್ರಹಣ ಕಾಲಗಳಲ್ಲೂ ಸ್ಮರಿಸುವುದು ರೂಢಿಯಲ್ಲಿತ್ತು ; ಅದನ್ನು ಸಾಂಕೇತಿಕವಾಗಿ ತೋರಿಸಲು ಇದ್ದ ಒಂದು ವಿಧಾನವೆಂದರೆ ವಿಧಿವತ್ತಾಗಿ ಸ್ವಲ್ಪ ಮಣ್ಣನ್ನು ಸೇವಿಸುವುದೇ ಆಗಿತ್ತು. ಭೂಮಿ ತಾಯಿಯು ಮಲಗಿ ನಿದ್ರಿಸುವಂತಹ ದಿನಗಳಲ್ಲಿ ಭೂಮಿಯನ್ನು ಉಳುವುದು ನಿಷಿದ್ಧವೆಂಬ ಆಚರಣೆ ಭಾರತದ ಕೆಲಭಾಗಗಳಲ್ಲಿ ಈಗಲೂ ಜಾರಿಯಲ್ಲಿದೆ.

ಭೂಮಿಯನ್ನು ಕೆಲವು ಪ್ರಾಣಿಗಳು ಹೊತ್ತಿರುವುದರಿಂದ ಅವುಗಳ ಚಲನವಲನಗಳಿಂದಾಗಿ ಭೂಮಿಯು ಕಂಪಿಸುತ್ತದೆಂಬ ಭಾವನೆ ಕೆಲವು ಪ್ರಾಚೀನರಲ್ಲಿದ್ದರೆ ಪೈಥಾಗೊರಸ್‌ನ ಪ್ರಕಾರ ಗತಿಸಿದ ಪಿತೃಗಳು ಭೂಮಿಯ ಕೆಳಭಾಗದಲ್ಲಿದ್ದು ಅವರಲ್ಲಿ ಆಂತರಿಕ ಕಲಹಗಳುಂಟಾದಾಗ ಭೂಕಂಪ ಸಂಭವಿಸುತ್ತದೆ.

ನಾವು ಮೊದಲಲ್ಲಿ ಉಲ್ಲೇಖಿಸಿದ ವಿಸ್ಮಯದ ಪ್ರಕಟಣೆಯು ಅನೂಚಾನವಾಗಿ ಎಷ್ಟೊಂದು ಬಗೆಗಳಲ್ಲಿ ನಡೆದುಬಂದಿದೆ ಎಂಬುದಕ್ಕೆ ಇವೆಲ್ಲ ನಿದರ್ಶನಗಳು. ಭೂಮಿಯು ಅನಾದಿಯೆಂಬ ಕಲ್ಪನೆಯು ಮಾನವ ಸಂಸ್ಕೃತಿಯ ಅನೇಕ ವಿಭಾಗಗಳಲ್ಲಿ ಸೇರಿಹೋಗಿದೆ. ಬೈಬಲ್ಲಿನಲ್ಲಿ ಬರುವ ಮಹಾಪೂರದ ಸಂಗತಿಗಳು ಭೂಮಿಯು ಚಾರಿತ್ರಿಕವಾಗಿ ಯಾವಾಗ ಅಸ್ತಿತ್ವಕ್ಕೆ ಬಂದಿತೆಂಬುದನ್ನು ತಿಳಿಸುತ್ತದೆಂದು ಕೆಲವರ ಊಹೆಯಾಗಿದೆ. ೧೭ನೆಯ ಶತಮಾನದಲ್ಲಿ ಜೇಮ್ಸ್ ಅಶರ್ ಎಂಬ ಐರ್ಲೆಂಡಿನ ಪಾದ್ರಿಯೊಬ್ಬನು ಹಳೆಯ ಒಡಂಬಡಿಕೆಯಲ್ಲಿ ಬರುವ ಎಲ್ಲ ವಂಶಾವಳಿಗಳ ಪಟ್ಟಿಗಳನ್ನು ಪರಿಶೀಲಿಸಿ ನಮ್ಮ ಪ್ರಪಂಚವು ಈಗ್ಗೆ ಆರು ಸಾವಿರ ವರ್ಷಗಳ ಹಿಂದೆ ಆಯಿತೆಂದೂ ಮಹಾಪೂರವು ನಾಲ್ಕು ಸಾವಿರದ ಮುನ್ನೂರೈವತ್ತು ವರ್ಷಗಳ ಹಿಂದೆ ಘಟಿಸಿತೆಂದೂ ಲೆಕ್ಕಹಾಕಿ ಹೇಳಿದ್ದನು. ಇಷ್ಟು ನಿಖರವಾದ ಲೆಕ್ಕಾಚಾರವು ಭೂಮಿಯಲ್ಲಿ ಉಂಟಾಗಿರುವ ಅನಂತ ವಿಕಾಸಗಳನ್ನು ಗಣನೆಗೆ ತೆಗೆದುಕೊಳ್ಳುವುದರಲ್ಲಿ ಸಂಪೂರ್ಣವಾಗಿ ಸೋತಿದೆಯೆಂದು ಯಾವುದೇ ಭೂಶಾಸ್ತ್ರಜ್ಞನು ಹೇಳಬಹುದು. ೧೮ನೆಯ ಶತಮಾನದಲ್ಲಿ ಹಟನ್ ಎಂಬ ಪ್ರಾಜ್ಞನು ಕಾಲವನ್ನು ಭೂವಿಜ್ಞಾನದ ಪರಿಮಿತಿಗೆ ಹೊಂದಿಸಿ ಹೇಳಹೊರಟಾಗ ಪಾದ್ರಿ ಅಶರ್‌ನ ಲೆಕ್ಕಾಚಾರವು ತೀರಾ ಬಾಲಿಶವೆಂದು ತೀರ್ಮಾನಿಸಲಾಯಿತು. ೧೯ನೆಯ ಶತಮಾನದ ಕೊನೆಯ ವೇಳೆಗೆ ಕೆಲ್ವಿನ್ ಎಂಬ ಭೌತವಿಜ್ಞಾನಿಯು ಭೂಮಿಯು ಕಡೇಪಕ್ಷ ಐದು ಕೋಟಿ ವರ್ಷಗಳಷ್ಟು ಹಳೆಯದೆಂದು ಪ್ರತಿಪಾದಿಸಿದ. ಅದು ಕೂಡ ಜಿಪುಣತನದ ಲೆಕ್ಕಾಚಾರವೆಂದು ಮೂದಲಿಸುವ ಸಮಕಾಲೀನ ಭೂವಿಜ್ಞಾನಿಗಳು ಭೂಮಿಯು ಏನಿಲ್ಲವೆಂದರೂ ೪೬೦ ಕೋಟಿ ವರ್ಷಗಳಷ್ಟು ಹಳೆಯದೆಂದು ಭಾವಿಸುತ್ತಾರೆ. ಭೂಮಿಯಲ್ಲಿ ಹಲವು ಪದರಗಳು ರಚನೆಗೊಳ್ಳುವುದು, ಪರ್ವತಗಳು ಹೊಮ್ಮುವುದು, ಕಣಿವೆಗಳು ಕಾಣಿಸಿಕೊಳ್ಳುವುದು, ಇತ್ಯಾದಿ ಪ್ರಕ್ರಿಯೆಗಳು ಯಾವುದೋ ಒಂದು ಕಾಲಘಟ್ಟದಲ್ಲಿ ಥಟಕ್ಕನೆ ಸಂಭವಿಸುವುದಿಲ್ಲವೆಂದು ಸಾಧಾರವಾಗಿ ನಿರೂಪಿಸುವ ಈ ವಿಜ್ಞಾನಿಗಳು ಭೂಮಿಯ ಪಲ್ಲಟದಿಂದ ಖಂಡಗಳ ರಚನೆಯಾಗಿರುವುದನ್ನೂ ವಿವರಿಸುತ್ತಾರೆ. ಸಾಕಷ್ಟು ದೀರ್ಘಕಾಲ ಭೂಮಿಯ ಮೇಲೆ ಬದಲಾವಣೆಗಳೇ ಇಲ್ಲವೇನೋ ಎಂಬಂತೆ ಶಾಂತವಾಗಿ ಕಾಲವನ್ನು ಕ್ರಮಿಸಿ ನಂತರ ಒಮ್ಮೆ ದಿಢೀರಾಗಿ ಏನೋ ಹೊಸ ಆವಿರ್ಭಾವವಾಗುವುದು ಭೂಮಿಯ ಮೂಲ ಲಕ್ಷಣವಾಗಿದೆ. ಅಂದರೆ, ಭೂಮಿಯ ವಿಕಾಸವು ಅನೇಕ ಹಂತಗಳಲ್ಲಿ ನಡೆದುಬಂದಿರುವಂಥದು. ನಿಕೊಲಾಸ್ ಸ್ಟೆನೋ ಎಂಬುವವನು ೧೬೬೯ರಲ್ಲಿ ಈ ವಿದ್ಯಮಾನವನ್ನು ಕೆಲವು ಚಿತ್ರಗಳ ಸಹಾಯದಿಂದ ಸಮರ್ಥವಾಗಿ ತೋರಿಸಿಕೊಟ್ಟ. ಪಳೆಯುಳಿಕೆಗಳು ಜೀವಿಗಳಿಂದ ಉಂಟಾಗಿವೆಯೆಂಬುದನ್ನು ಒಪ್ಪುತ್ತಾ ಭೂಮಿಯ ಪದರಗಳ ಸ್ವಭಾವವನ್ನೂ ಆತ ವಿಶ್ಲೇಷಣೆ ಮಾಡಿ ಹೇಳಿದ. ಭೂವಿಜ್ಞಾನದ ವಿಸ್ತರಣೆಗೆ ಈತನ ಕೊಡುಗೆ ಅಸಾಮಾನ್ಯವಾದುದೆಂದು ಶ್ಲಾಘಿಸಲಾಗಿದೆ.

ವೈಚಾರಿಕ ನೆಲೆಯಲ್ಲಿ ನಿಂತು ಭೂಮಿಯ ಬಗೆಗಿನ ತಿಳಿವಳಿಕೆಯನ್ನು ಪಡೆಯಲು ಮಾನವ ಜನಾಂಗವು ಅತ್ಯಂತ ಪ್ರಾಚೀನ ಕಾಲದಿಂದಲೂ ಯತ್ನಿಸುತ್ತಾ ಬಂದಿದೆ. ನರಹರಯ್ಯನವರು ೧೯೩೯ರಷ್ಟು ಹಿಂದೆಯೇ ಅದನ್ನು ತಿಳಿಯಾಗಿ ವಿವರಿಸಿ ಹೇಳಿದ್ದಾರೆ (ಪು.೧೦). ಭೂಮಿಯು ಸ್ಥಿರವಾಗಿದ್ದು ಖಗೋಳವು ಅದರ ಮೇಲಿದೆಯೆಂದು ಸಾಮಾನ್ಯವಾಗಿ ಭಾವಿಸುವವರು ಎದುರಿಸಬೇಕಾಗುವ ಪ್ರಶ್ನೆಗಳನ್ನು ಅವರು ವಿಸ್ತಾರವಾಗಿ ಚರ್ಚಿಸಿದ್ದಾರೆ. ''ಪ್ರಾತಃಕಾಲದಲ್ಲಿ ಉದಯಿಸಿ ಸಾಯಂಕಾಲದಲ್ಲಿ ಅಸ್ತಮಿಸಿದ ಸೂರ್ಯನು ಮತ್ತೆ ನಾಳೆಯ ದಿವಸ ಪೂರ್ವಕ್ಕೇ ಹೇಗೆ ಬರುವನು? ರಾತ್ರಿಯೆಲ್ಲವೂ ಎಲ್ಲಿರುವನು? ಅವನಿಗೆ ಅದೃಶ್ಯಗತಿ ಏನಾದರೂ ಇರುವುದೆ? ಹಗಲು ಪೂರ್ವದಿಂದ ಪಶ್ಚಿಮಕ್ಕೆ ಹೋದ ಸೂರ್ಯನು ರಾತ್ರಿಯೇನಾದರೂ ಪಶ್ಚಿಮದಿಂದ ಪೂರ್ವಕ್ಕೆ ಬರುವನೆ ? ಹಾಗೆ ಬರುವ ಪಕ್ಷದಲ್ಲಿ ನಮಗೆ ಕಾಣದಿರುವುದಕ್ಕೆ ಕಾರಣವೇನು ?'' - ಇಂತಹ ಕುತೂಹಲಕರವಾದ ಅನೇಕ ಪ್ರಶ್ನೆಗಳನ್ನೆತ್ತಿ ಅವರೇ ಅವಕ್ಕೆ ಸಂಕ್ಷಿಪ್ತವಾಗಿ ಸಮಜಾಯಿಷಿ ನೀಡಿದ್ದಾರೆ (ಪು.೧೧): ''ಮೊದಲು ತೋರಬರುವುದು ಇದು: ರಾತ್ರಿಯಲ್ಲಿ ಸೂರ್ಯನು ಭೂಮಿಯ ಕೆಳಗೇ ಇರಬೇಕು; ಪಶ್ಚಿಮದಿಂದ ಪೂರ್ವಕ್ಕೆ ಭೂಮಿಯ ಕೆಳಗೇ ಬರಬೇಕು; ರಾತ್ರಿಯಲ್ಲಿ ಕಾಣಬರುವ ನಕ್ಷತ್ರಗಳು ಹಗಲೆಲ್ಲವೂ ಭೂಮಿಯ ಕೆಳಗೇ ಇದ್ದು ಪಶ್ಚಿಮದಿಂದ ಪೂರ್ವಕ್ಕೆ ಬರಬೇಕು; ಸೂರ್ಯಾದಿಗಳಿಗೆ ಆಕಾಶ ಸಂಚಾರವೇ ಹೊರತು ಭೂಮಿಯ ಕೆಳಗಣ ತಳದ ಮೇಲೆ ಹರಿದುಬರುವ ಸಂಚಾರವಿಲ್ಲ; ಹಾಗೆ ಹರಿದುಬರುವ ಸಂಚಾರವಿದ್ದ ಪಕ್ಷದಲ್ಲಿ ಭೂಮಿಯ ಕೆಳಗಣ ಭಾಗವು ದಿನ ದಿನವೂ ಸೂರ್ಯನಿಂದಾದರೂ ದಹಿಸಲ್ಪಡುತ್ತ ಬಂದು ಕೊನೆಗೆ ಭೂಲೋಕವೇ ನಾಮಾವಶೇಷವಾಗಬೇಕು. ಆದುದರಿಂದ ಭೂಮಿಯ ಮೇಲೆ ಹೇಗೋ ಕೆಳಗೂ ಹಾಗೆಯೇ ಆಕಾಶವಿರಬೇಕು; ಮೇಲೆ ಕಾಣಬರುವ ಆಕಾಶದಲ್ಲಿ ಗ್ರಹನಕ್ಷತ್ರಾದಿಗಳು ಹೇಗೆ ಚರಿಸುವುವೋ ಭೂಮಿಯ ಕೆಳಗೂ ಇರಲೇಬೇಕಾದ ಆಕಾಶದಲ್ಲಿ ಅವು ಹಾಗೆಯೇ ಚರಿಸಬೇಕು. ಹಾಗಾದರೆ, ಭೂಮಿ ಮಹಾಕಾಶದ ಮಧ್ಯದಲ್ಲಿ ನಿಂತಿರುವುದೇ? ಅಹುದು; ಅದೇ (ಖಗೋಳ) ಸಿದ್ಧಾಂತಿಗಳ ಮತ.''

ಭಾರತದಲ್ಲಾಗಲಿ ಬೇರೆ ದೇಶಗಳಲ್ಲಾಗಲಿ ಭೂಮಿಯ ಬಗೆಗಿನ ವೈಚಾರಿಕ ತಿಳಿವಳಿಕೆ ಬೆಳೆದುಬಂದಿರುವುದು ಇಂತಹ ಪ್ರಶ್ನೆ ಮತ್ತು ಸಮಾಧಾನಗಳ ರೀತಿಯಲ್ಲಿಯೇ ಎಂಬುದು ಖಚಿತವಾಗಿದೆ. ಇದನ್ನು ವಿಶದಗೊಳಿಸುವ ಮುನ್ನ ಭೂಮಿಯನ್ನು ಕುರಿತಾದ ಇನ್ನೊಂದು ವಿಧದ ತಿಳಿವಳಿಕೆಯನ್ನು ಪ್ರಸ್ತಾಪಿಸುವುದು ಅಗತ್ಯವಾಗಿದೆ. ಭೂಮಿಯ ಗಟ್ಟಿ ಹೊರಪದರವನ್ನು ಅಭ್ಯಾಸ ಮಾಡುವುದರಿಂದ ಭೂಮಿಯ ಚರಿತ್ರೆಯನ್ನು ನಿಖರವಾಗಿ ತಿಳಿಯಬಹುದೆಂಬ ಭಾವನೆ ಮೊದಲಿನಿಂದಲೂ ಇದ್ದದ್ದೇ. ಖನಿಜಶಾಸ್ತ್ರದ ಬೆಳವಣಿಗೆ ಇದರಿಂದ ಉಂಟಾಗಿರುವ ಫಲ. ಆದರೆ ಈ ಹೊರಪದರದಲ್ಲಿ ಆಗಾಗ್ಗೆ ಕಂಡುಬಂದಿರುವ ಇನ್ನೊಂದು ಸ್ವಾರಸ್ಯದ ವಸ್ತುವೆಂದರೆ ಪಳೆಯುಳಿಕೆಗಳು. ಈಗಾಗಲೆ ತಿಳಿಸಿರುವಂತೆ ನೀಲ್ಸ್ ಸ್ಟೆನೋ ಇವುಗಳನ್ನು ಕುರಿತಂತೆ ಅತ್ಯಂತ ಮೌಲಿಕವಾದ ಮಾಹಿತಿಗಳನ್ನು ನೀಡಿದ. ಸಂಶೋಧನೆಗಳ ಮುಖಾಂತರ ಇದರ ಅಧ್ಯಯನವನ್ನು ಉನ್ನತ ಮಟ್ಟಕ್ಕೇರಿಸಿದವನು ಜಾರ್ಜ್ ಲೂಯಿ ಲೆಕಾರ್ಕ್ ಎಂಬುವವನು. ೧೮ನೆಯ ಶತಮಾನದ ಈತನಿಗೆ ಕೋಮ್ತೆ ದ ಬ್ಯೂಫೋನ್ ಎಂಬ ಇನ್ನೊಂದು ಹೆಸರಿದೆ. ಭೂಮಿಯ ಆಕೃತಿಯನ್ನಲ್ಲದೆ ಭೂಮಿಯಲ್ಲಿ ಅಂತರ್ಗತವಾಗಿರುವ ಶಾಖದ ಪರಿಮಾಣವನ್ನು ಆತನು ವಿಶೇಷವಾಗಿ ಗಮನಿಸಿದ. ಸೂರ್ಯನಿಂದ ಭೂಮಿಯು ಪಡೆಯುವ ಶಾಖಕ್ಕಿಂತಲೂ ಬಹುಪಟ್ಟು ಹೆಚ್ಚಾಗಿರುವ ಈ ಶಾಖವು ಎಲ್ಲಿಂದ ಬರುತ್ತದೆ? ಆ ಅಧಿಕ ಶಾಖವು ಭೂಗರ್ಭದಲ್ಲಿರುವ ಕಲ್ಲುಗಳನ್ನು ವಿಧವಿಧವಾಗಿ ಮಾರ್ಪಡಿಸುತ್ತದೆಂದು ಅವನು ಪ್ರತಿಪಾದಿಸಿದ. ಜೊತೆಗೆ, ಪಳೆಯುಳಿಕೆಗಳನ್ನು ಬೆಟ್ಟಗಳ ಮೇಲೆ ಕೂಡ ಕಂಡ ಅವನು ವಿಸ್ಮಿತನಾದ. ಯೂರೋಪ್, ಏಷ್ಯಾ ಮತ್ತು ಅಮೆರಿಕಾಗಳ ಅನೇಕ ಭಾಗಗಳಲ್ಲಿ ಯಾವುದೋ ಕಾಲದ ಸಮುದ್ರಜೀವಿಗಳ ಪಳೆಯುಳಿಕೆಗಳು ಸುಣ್ಣದ ಕಲ್ಲುಗಳ ನಡುವೆ ಸೇರಿಹೋಗಿವೆ. ಕೆಲವು ದೊಡ್ಡ ಭೂಜೀವಿ ಪ್ರಾಣಿಗಳ ಅಸ್ಥಿಪಂಜರಗಳು ಭೂಮಿಯ ಮೇಲ್ಪದರದಲ್ಲಿ ದೊರಕಿದಾಗ ಅವು ಇತ್ತೀಚಿನವರೆಗೆ ಜೀವಂತವಾಗಿದ್ದ ಪ್ರಾಣಿಗಳೆಂದು ತೀರ್ಮಾನಿಸಲು ಅವನಿಗೆ ಕಷ್ಟವಾಗಲಿಲ್ಲ. ಆದರೆ ಅವಕ್ಕಿಂತಲೂ ಕೆಳಪದರಗಳಲ್ಲಿ ಅಲ್ಲಲ್ಲಿ ಸಮುದ್ರ ಜೀವಿಗಳ ಅವಶೇಷಗಳು ದೊರಕಿದ್ದುವು; ಅವು ಎಂದೋ ನಶಿಸಿಹೋದ ಜೀವಿಗಳ ಪಳೆಯುಳಿಕೆಗಳೆಂದು ಆತ ತರ್ಕಿಸಿದ.

ಒಂದು ಕಾಲದಲ್ಲಿ ನೀರಿನಿಂದ ಆವೃತವಾಗಿದ್ದ ಪ್ರದೇಶವು ಕ್ರಮೇಣ ಸಮುದ್ರದಿಂದ ದೂರವಾಗಿದ್ದು ಪಳೆಯುಳಿಕೆಗಳು ದೊರೆತ ಪ್ರದೇಶಗಳಿಂದ ಸಾಬೀತಾಗುತ್ತದೆ. ಇದನ್ನು ಸ್ಪಷ್ಟಗೊಳಿಸಿದ ಬ್ಯೂಫೋನ್ ಭೂಮಿಯು ಏಳು ಹಂತಗಳಲ್ಲಿ ಅಮೋಘವಾದ ಪರಿವರ್ತನೆಗೊಂಡ ವಿಧಾನಗಳನ್ನು ಸಹ ವಿವರವಾಗಿ ತಿಳಿಸಿಕೊಟ್ಟ. ಬೇರೆ ಬೇರೆ ಮಾದರಿಗಳನ್ನುಳ್ಳ ಕಲ್ಲು ಬಂಡೆಗಳನ್ನಾಧರಿಸಿ ಅನೇಕ ಮಾದರಿಯ ಪ್ರಾಣಿಗಳು ಭೂಮಿಯ ಮೇಲೆ ಜೀವಿಸಿ ನಶಿಸಿಹೋಗಿವೆಯೆಂಬ ಸಿದ್ಧಾಂತವನ್ನು ಫ್ರಾನ್ಸಿನ ಕ್ಯೂವಿಯೇ ಎಂಬಾತ

ಪ್ರತಿಪಾದಿಸಿದ. ಹೀಗೆ ನಶಿಸಿಹೋಗಿದ್ದಕ್ಕೆ ಥಟಕ್ಕನೆ ಆಗಾಗ್ಗೆ ಸಂಭವಿಸಿರಬಹುದಾದ ವಿಪತ್ತುಗಳೇ ಕಾರಣವಿರಬೇಕೆಂದು ಅವನ ವಾದವಾಗಿತ್ತು. ಬೈಬಲ್ಲಿನಲ್ಲಿ ನಮೂದಿಸಿರುವ ಮಹಾಪೂರವು ಅಂತಹ ವಿಪತ್ತುಗಳಿಗೆ ಒಂದು ನಿದರ್ಶನವೆಂದು ಅವನ ಅಭಿಮತವಾಗಿದ್ದಿತು.

ಬಂಡೆಗಳನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಿ ಅವುಗಳ ಯಾವ ಹಂತಗಳಲ್ಲಿ ಪಳೆಯುಳಿಕೆಗಳು ಲಭ್ಯವಾಗುತ್ತವೆಂಬುದನ್ನು ನಿಷ್ಕೃಷ್ಟವಾಗಿ ನಿರೂಪಿಸಿದವನು ೧೮ನೆಯ ಶತಮಾನದ ಹಟನ್. ಈ ವಿವಿಧ ಹಂತಗಳು ಎಂದೋ ಒಮ್ಮೆ ಸಮುದ್ರ, ಸರೋವರ, ಅಥವಾ ಜೌಗು ಪ್ರದೇಶದ ನೆಲೆಗಳಾಗಿದ್ದುವೆಂಬ ತೀರ್ಮಾನವನ್ನು ಅವನು ಪ್ರಕಟಿಸಿದ. ಈತನ ಸಂಶೋಧನೆಗಳನ್ನು ನಂತರದ ಕಾಲದಲ್ಲಿ ವಿಲಿಯಮ್ ಸ್ಮಿತ್, ಚಾರ್ಲ್ಸ್ ಲಿಯೆಲ್, ಮುಂತಾದವರು ಮುಂದುವರಿಸಿ ಮಹತ್ತರವಾದ ವೈಚಾರಿಕ ತಿಳಿವಳಿಕೆಗೆ ಕಾರಣರಾದರು.

ಒಂದೆಡೆ ಭೂಮಿಯ ಸ್ವರೂಪವು ಅಧ್ಯಯನ ವಿಷಯವಾಗಿದ್ದರೆ ಅದೇ ಸಂದರ್ಭದಲ್ಲಿ ಇನ್ನೊಂದೆಡೆ ಭೂಮಿಯ ಗಾತ್ರವು ಅನೇಕ ವಿಜ್ಞಾನಿಗಳ ಆಸಕ್ತಿಯನ್ನು ಕೆರಳಿಸಿತ್ತು. ಭೂಮಿಯು ಗೋಲಾಕಾರದ ಆಕೃತಿಯನ್ನು ಹೊಂದಿದೆಯೆಂಬುದು ಅರಿಸ್ಟಾಟಲನ ಕಾಲದಿಂದಲೂ ಅಂಗೀಕೃತವಾಗಿದ್ದ ವಿಷಯ. ಆದರೆ ಅದರ ಗಾತ್ರವನ್ನು ನಿರ್ಧರಿಸುವ ಕೆಲಸ ದೂರದರ್ಶಕವು ಬಂದ ನಂತರದ ಕಾಲದಲ್ಲಿ ಹೆಚ್ಚಾಗಿ ಆರಂಭವಾಯಿತೆನ್ನಬಹುದು. ಜಾನ್ ಪಿಕಾರ್ಡ್ ಎಂಬ ೧೭ನೆಯ ಶತಮಾನದ ವಿಜ್ಞಾನಿಯು ನಕ್ಷತ್ರವೊಂದನ್ನು ಆಧಾರವಾಗಿಟ್ಟುಕೊಂಡು ಭೂಮಿಯ ಗೋಲದ ಒಂದು ಡಿಗ್ರಿಯು ೬೯.೧ ಮೈಲಿಗಳಷ್ಟಾಗಿರುತ್ತದೆಂದು ಲೆಕ್ಕ ಮಾಡಿದ. ಪ್ರಾಚೀನ ಕಾಲದ ಗ್ರೀಸಿನಲ್ಲಿ ಇರಾಟೊಸ್ತಿನೀಸ್ ಎಂಬುವನು ಇಂಥದೇ ಲೆಕ್ಕವನ್ನು ಅನುಸರಿಸಿ ಒಂದು ಡಿಗ್ರಿಗೆ ೬೦ ಮೈಲಿಗಳಿರುತ್ತದೆಂದು ಹೇಳಿದ್ದನೆಂದು ಚಾರ್ಲ್ಸ್ ಸಿಂಗರ್ ತಿಳಿಸಿದ್ದಾನೆ (೧೯೫೯, ಪು. ೩೧೭). ಪಿಕಾರ್ಡ್, ಕಯೆನ್, ಹ್ಯೂಗೆನ್ಸ್, ಮುಂತಾದವರ ಲೆಕ್ಕಾಚಾರಗಳನ್ನು ನ್ಯೂಟನ್ ಗಣನೆಗೆ ತೆಗೆದುಕೊಂಡಿದ್ದನೆಂದು ತಿಳಿದುಬರುತ್ತದೆ. ಕ್ಯಾಸಿನಿ, ಹ್ಯಾರಿಸನ್, ಮುಂತಾದ ಗಣ್ಯರು ಈ ಲೆಕ್ಕಾಚಾರಗಳನ್ನು ಮುಂದುವರಿಸಿ ಹೆಚ್ಚಿನ ನಿಖರತೆಯನ್ನು ಸ್ಥಾಪಿಸಿದರು.

ಭೂಮಿಯ ಉಗಮವನ್ನು ಕುರಿತಂತೆ ಯೂರೋಪಿನಲ್ಲಿ ಇತ್ತೀಚಿನವರೆಗೂ ಪ್ರಖ್ಯಾತವಾಗಿದ್ದ ಸಿದ್ಧಾಂತವೆಂದರೆ ಪ್ರಾಚೀನ ಗ್ರೀಸಿನ ಥೇಲಿಸ್ ಪ್ರತಿಪಾದಿಸಿದ್ದ ಸಿದ್ಧಾಂತ. ಅವನ ಪ್ರಕಾರ ಭೂಮಿಯು ನೀರಿನಿಂದ ಉದ್ಭವಿಸಿದ್ದು. ಅದು ಹೇಗೆ ಉದ್ಭವವಾಯಿತೆಂಬುದನ್ನು ಆತ ವಿವರವಾಗಿ ಹೇಳಿಲ್ಲದಿದ್ದರೂ ಮಾರ್ಡುಕ್ ದೇವತೆಯನ್ನು ದೂರವಿಟ್ಟು ಕೇವಲ ಪ್ರಾಕೃತಿಕ ಕಾರಣಗಳನ್ನು ಕೊಟ್ಟು ಭೂಮಿಯ ಉಗಮವನ್ನು ತಿಳಿಯಹೇಳುವುದು ಅವನ ವೈಶಿಷ್ಟ್ಯವಾಗಿದೆ. ಅವನಂತೆ ಪ್ರಸಿದ್ಧರಾಗಿದ್ದ ಇತರ ಕೆಲವು ಪ್ರಾಚೀನ ಗ್ರೀಸಿನ ತತ್ತ್ವವೇತ್ತರು ಅವನಿಗಿಂತಲೂ ಭಿನ್ನವಾಗಿ ಜಗತ್ತಿನ ಉಗಮವನ್ನು ಅರ್ಥೈಸಿದ್ದರು. ಉದಾಹರಣೆಗೆ, ಅನೆಕ್ಸಿಮಿನೀಸ್‌ನ ಪ್ರಕಾರ ಜಗತ್ತು ಗಾಳಿಯಿಂದ ಉದ್ಭವಿಸಿತು ಮತ್ತು ಹೆರಾಕ್ಲೈಟಸ್‌ನ ಅಭಿಪ್ರಾಯದಲ್ಲಿ ವಿಶ್ವದ ಆದಿ ತತ್ತ್ವವು ಅಗ್ನಿ ಹಾಗೂ ಜಗತ್ತೆಲ್ಲಾ ಅದರಿಂದಲೇ ಉದ್ಭವಿಸಿತು. ಈ ಅಭಿಪ್ರಾಯವನ್ನು ಪೈಥಾಗೊರಸ್‌ನ ಅನುಯಾಯಿಗಳೂ ಮಾನ್ಯ ಮಾಡಿದ್ದರು. ಪ್ರಾಚೀನ ಗ್ರೀಸ್‌ನ ಒಬ್ಬ ಕವಿಯು ''ಒಲಿಂಪಿಕ್ಸ್'' ಎಂಬ ತನ್ನ ಕೃತಿಯಲ್ಲಿ ಸಮುದ್ರದಾಳದಿಂದ ರೋಡ್ಸ್ ದ್ವೀಪವು ಹೊರಹೊಮ್ಮಿತೆಂದು ಚಿತ್ರಿಸಿದ್ದಾನೆ. ಸಮುದ್ರದ ಕೆಲವು ಭಾಗಗಳು ಕ್ರಮೇಣ ಭೂಮಿಯಾಗಿ ಪರಿವರ್ತನೆ ಹೊಂದಿತೆಂಬುದನ್ನು ಹೆರೊಡೋಟಸ್ ಸಮಗ್ರವಾಗಿ ವಿವರಿಸಿದ್ದಾನೆ. ಅವಲೋಕನದಲ್ಲಿ ಸ್ಥಿರನಂಬಿಕೆಯನ್ನಿರಿಸಿದ್ದ ಈ ಚರಿತ್ರಕಾರನು ಈಜಿಪ್ಟಿನ ಒಂದು ತಗ್ಗು ಪ್ರದೇಶವು ಮುಂಚೆ ಸಮುದ್ರದ ಖಾರಿಯಾಗಿದ್ದಿತೆಂದು ಹೇಳಿದ್ದಾನೆ. ಎತ್ತರದ ಬೆಟ್ಟಗಳಲ್ಲಿ ಸಮುದ್ರದ ಕಪ್ಪೆಚಿಪ್ಪುಗಳು ದೊರೆತಿದ್ದುದನ್ನು ಗಮನಿಸಿದ್ದ ಕ್ಸೆನೋಫೇನಿಸ್ ಇಂಥದೇ ತೀರ್ಮಾನವನ್ನು ನೀಡಿ ಸಮುದ್ರವು ಕಾಲಕ್ರಮದಲ್ಲಿ ಹಿಂದೆ ಸರಿದಿತ್ತೆಂದು ತಿಳಿಸುತ್ತಾನೆ. ಸೈರಾಕ್ಯೂಸ್ ಬಳಿಯ ಕಲ್ಲು ಗಣಿಗಳಲ್ಲಿ ಮೀನುಗಳ ಅಚ್ಚೊತ್ತುಗಳನ್ನು ಇದೇ ತರ್ಕದಿಂದ ಅರ್ಥೈಸಬೇಕೆಂದು ಅವನು ವಾದಿಸಿದ್ದಾನೆ. ಆರ್ಮೀನಿಯ, ಫ್ರಿಜಿಯಾ ಮತ್ತು ಲಿಡಿಯಾಗಳಲ್ಲಿ ಸಮುದ್ರದಿಂದ ಬಹಳ ದೂರವಿರುವ ಕೆಲವು ಪ್ರದೇಶಗಳಲ್ಲಿ ಭೂಮಿಯ ಒಳಪದರದಲ್ಲಿ ಸಮುದ್ರದ ಕಪ್ಪೆಚಿಪ್ಪುಗಳನ್ನು ತಾನು ಕಂಡಿದ್ದುದಾಗಿ ಕ್ರಿ.ಪೂ. ೫ನೆಯ ಶತಮಾನದ ಕ್ಯಾಂತೋಸ್ ಹೇಳುತ್ತಾನೆ. ಈ ಪ್ರದೇಶಗಳೆಲ್ಲಾ ಒಮ್ಮೆ ಸಮುದ್ರದ ಭಾಗಗಳಾಗಿದ್ದಿರಬೇಕೆಂದು ಈ ಆಧಾರದ ಮೇಲೆ ಅವನು ತೀರ್ಮಾನಿಸಿದ್ದಾನೆ. ಲಿಯೊನಾರ್ಡೊ ದ ವಿಂಚಿ ಸಹ ಇಂತಹ ಅಧ್ಯಯನಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದುದಾಗಿ ತಿಳಿಯಬರುತ್ತದೆ.

ಪ್ರಕೃತಿಯನ್ನು ಕುರಿತಾದ ತನ್ನ ಒಂದು ದೀರ್ಘ ಕವನದಲ್ಲಿ ಎಂಪಿಡಾಕ್ಲಿಸ್ ಭೂಮಿಯು ನಾಲ್ಕು ಹಂತಗಳನ್ನು ಹಾದುಬಂದಿದೆಯೆಂದು ಗುರುತಿಸುತ್ತಾನೆ. ಈ ವಿಕಾಸದ ಹಾದಿಯಲ್ಲಿ ಭೂಮಿಯ ಮೇಲೆ ತರಹೇವಾರಿ ಪ್ರಾಣಿಗಳು ಹುಟ್ಟಿವೆ ಮತ್ತು ನಶಿಸಿಹೋಗಿವೆ; ಅವುಗಳ ಮಧ್ಯದಿಂದ ಇಂದಿನ ಪ್ರಾಣಿಗಳು ವಿಕಾಸ ಹೊಂದಿವೆಯೆಂದು ಅವನು ಪ್ರತಿಪಾದಿಸಿದ್ದಾನೆ. ಪ್ರಾಣಿಗಳಿಗಿಂತಲೂ ಮುಂಚೆ ಸಸ್ಯಗಳು ಭೂಮಿಯ ಮೇಲೆ ಕಾಣಿಸಿಕೊಂಡಿದ್ದುವೆಂಬ ಪ್ರಮೇಯವನ್ನು ಸಹ ಅವನು ಎತ್ತಿಹಿಡಿದಿದ್ದ. ತನ್ನ ಕಾಲಕ್ಕಾಗಲೆ ನಶಿಸಿಹೋಗಿದ್ದ ಕೆಲವು ಪ್ರಾಣಿಗಳ ಮೂಳೆಗಳನ್ನು ಸಿಸಿಲಿಯಲ್ಲಿ ತಾನು ಕಂಡಿದ್ದುದಾಗಿ ಹೇಳುವ ಎಂಪಿಡಾಕ್ಲಿಸ್ ಅದರ ಆಧಾರದ ಮೇಲೆ ಒಂದು ನಿಷ್ಕರ್ಷೆಗೆ ಬಂದಿದ್ದ : ''ಅಲ್ಲಿ ಬೃಹತ್ ಪ್ರಾಣಿಗಳ ಒಂದು ದೊಡ್ಡ ಸಂತತಿಯೇ ಇದ್ದಿತು.'' ಇದನ್ನು ಉಲ್ಲೇಖಿಸಿರುವ ಆಡಮ್ಸ್ (೧೯೫೪, ಪು. ೧೪) ಥಿಯೋ ಫ್ರಾಸ್ಟಸ್ ಬಗೆಗೂ ಒಂದು ಮಾತು ಹೇಳುತ್ತಾನೆ (ಪು.೧೯). ಅರಿಸ್ಟಾಟಲನ ಶಿಷ್ಯನಾಗಿದ್ದ ಇವನು ಭೂಮಿಯಲ್ಲಿ ಹುದುಗಿರುವ ಖನಿಜಗಳು ಹಾಗೂ ಬಂಡೆಗಳ ವೈವಿಧ್ಯವನ್ನು ಕುರಿತು ಒಂದು ಗ್ರಂಥವನ್ನು ರಚಿಸಿದ್ದನಂತೆ.



ಭೂಮಿಯನ್ನು ತಿಳಿದುಕೊಳ್ಳುವ ಪ್ರಕ್ರಿಯೆಯಲ್ಲಿ ಬೌದ್ಧಮತದ ಸಿದ್ಧಾಂತಿಗಳು ತಮ್ಮದೇ ಆದ ಚಿಂತನೆಯನ್ನು ಬೆಳೆಸಿದ್ದರೆಂದು ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಅಂತಹ ಒಂದು ಚಿಂತನೆಯನ್ನು ಭಾಸ್ಕರಾಚಾರ್ಯರು ''ಸಿದ್ಧಾಂತ ಶಿರೋಮಣಿ''ಯ ಗೋಲಾಧ್ಯಾಯದಲ್ಲಿ ಪ್ರಸ್ತಾಪಿಸಿದ್ದಾರೆ. ಯಾವ ಆಧಾರವೂ ಇಲ್ಲದೆ ಆಕಾಶದಲ್ಲಿ ಭೂಮಿಯು ನಿಲ್ಲುವುದು ಅಶಕ್ಯವೆಂದು ಭಾವಿಸುವ ಬೌದ್ಧ ಸಿದ್ಧಾಂತಿಗಳ ನಿಲುವನ್ನು ನರಹರಯ್ಯನವರು ಸಂಕ್ಷಿಪ್ತವಾಗಿ ವ್ಯಾಖ್ಯಾನಿಸಿದ್ದಾರೆ (೧೯೨೪, ಪು.೧೨): ''ಬೌದ್ಧ ಸಿದ್ಧಾಂತಿಗಳು ಭೂಮಿ ಕೆಳಕೆಳಗೆ ಹೋಗುತ್ತಲೇ ಇರುವುದೆಂದು ಹೇಳುವುದುಂಟು. ಅದನ್ನು ಭಾಸ್ಕರಾಚಾರ್ಯರು ಅಂಗೀಕರಿಸುವುದಿಲ್ಲ. ಈ ವಿಷಯವು ನಮಗೂ ಪ್ರತ್ಯಕ್ಷ ಪ್ರಮಾಣದಿಂದಲೇ ವ್ಯಕ್ತವಾಗುವುದು. ಭೂಮಿ ಅನುಕ್ಷಣವೂ ಕೆಳಗೆ ಕೆಳಗೆ ಬೀಳುತ್ತಿದ್ದರೆ ಸೂರ್ಯಾದಿಗ್ರಹಗಳಿಗೂ ಭೂಮಿಗೂ ಇರುವ ದೂರವು ನಿರಂತರವಾಗಿ ಹೆಚ್ಚುತ್ತಿರಬೇಕು; ದೂರವು ಹೆಚ್ಚಿದಷ್ಟೂ ವಸ್ತುಗಳು ಗಾತ್ರದಲ್ಲಿ ಹ್ರಸ್ವವಾಗುವುವೆಂದು ಸಿದ್ಧವಾಗಿ ಇರುವುದಷ್ಟೆ; ಸೂರ್ಯಾದಿಗಳೇನಾದರೂ ಹಾಗೆ ಗಾತ್ರದಲ್ಲಿ ಹ್ರಸ್ವವಾಗುತ್ತಿರುವುದು ನಮಗೆ ಕಾಣುವುದೇ?''

ಖಗೋಳಶಾಸ್ತ್ರದಲ್ಲಿ ''ವೇದಾಂಗ ಜ್ಯೋತಿಷ'' ಎಂಬ ಗ್ರಂಥಕ್ಕೆ ಸಮಾನವಾದ ಸ್ಥಾನವು ಜೈನ ಸಾಹಿತ್ಯದ ''ಸೂರ್ಯಪ್ರಜ್ಞಪ್ತಿ'' ಎಂಬ ಗ್ರಂಥಕ್ಕಿದೆ. ಅರ್ಧಮಾಗಧಿ ಭಾಷೆಯಲ್ಲಿರುವ ಈ ಗ್ರಂಥವು ಸುಮಾರು ಕ್ರಿ. ಪೂ. ೩ನೆಯ ಶತಮಾನಕ್ಕೆ ಸೇರುತ್ತದೆಯಾದರೂ ಅದನ್ನು ಸ್ವತಃ ಮಹಾವೀರನೇ ರಚಿಸಿದ್ದೆಂಬ ಐತಿಹ್ಯವು ವ್ಯಾಪಕವಾಗಿದೆ. ಭದ್ರಬಾಹುವು ಇದಕ್ಕೆ ವ್ಯಾಖ್ಯಾನ ಬರೆದಿರುವುದರಿಂದ ಇದಕ್ಕೆ ''ಭದ್ರಬಾಹು ಸಂಹಿತಾ'' ಎಂಬ ಹೆಸರು ಕೂಡ ಇದೆ. ಜೈನಸಂಪ್ರದಾಯದಲ್ಲಿ ಭೂಮಿಯನ್ನು ಅರ್ಥೈಸಿರುವ ಬಗೆಯನ್ನು ಈ ಗ್ರಂಥದಲ್ಲಿ ನಾವು ಕಾಣಬಹುದು. ಅದರ ಪ್ರಕಾರ ಖಗೋಳಶಾಸ್ತ್ರದ ಕಲ್ಪನೆಗಳೆಲ್ಲಾ ಎರಡೆರಡಿವೆ; ಅಂದರೆ, ಎರಡು ಸೂರ್ಯ, ಎರಡು ಚಂದ್ರ ಮತ್ತು ೨೭ ನಕ್ಷತ್ರಗಳ ಎರಡು ಪುಂಜಗಳಿವೆ ಎಂದರ್ಥ. ಭೂಮಿಯು ಏಕಕೇಂದ್ರಕವಾದ ಉಂಗುರದಂತಿರುವ ಒಂದು ಚಪ್ಪಟೆಯಾದ ಭಾಗ. ಅಂತಹ ಅನೇಕ ಉಂಗುರಗಳ ಮಾಲೆಯೇ ಇಡೀ ಭೂಪ್ರದೇಶವಾಗುತ್ತದೆ. ಆ ಉಂಗುರಗಳನ್ನು ಏಕಕೇಂದ್ರಕ ಸಮುದ್ರದ ಉಂಗುರಗಳ ಮಾಲೆಯು ಪ್ರತ್ಯೇಕವಾಗಿರಿಸುತ್ತದೆ. – ಗಟ್ಟಿಯಾದ ವೈಚಾರಿಕ ನೆಲೆ ದೊರೆಯುವ ಮುನ್ನ ಇರಬಹುದಾದ ಅಭಿಪ್ರಾಯವೊಂದನ್ನು ಇದು ಪ್ರತಿನಿಧಿಸುತ್ತದೆಂದು ಸುಲಭವಾಗಿ ನಾವು ಗ್ರಹಿಸಬಹುದು.

ಸೂರ್ಯನು ವಿಶ್ವವನ್ನೆಲ್ಲಾ ಕ್ರಮಿಸುತ್ತಾ ಅಂತರಿಕ್ಷವನ್ನೆಲ್ಲಾ ಕ್ರಮವಾಗಿ ಬೆಳಗಿಸುತ್ತಾನೆಂದು ಋಗ್ವೇದದ ಒಂದು ಮಂತ್ರವು (೧.೫೦.೪) ಹೇಳುತ್ತದೆ. ಅದಕ್ಕೆ ಮೊದಲಿನ ಮಂತ್ರದಲ್ಲಿ (೧.೫೦.೩) ಪಶ್ಚಿಮಕ್ಕೆ ಹೋದಂತೆಲ್ಲಾ ಸೂರ್ಯೋದಯವು ತಡವಾಗಿ

ಉಂಟಾಗುವುದೆಂಬ ಅನುಭವವನ್ನು ಪ್ರಕಟಿಸಲಾಗಿದೆ. ಭೂಮಿಯ ಕೌತುಕಗಳನ್ನು ಅರಿತುಕೊಳ್ಳುವಲ್ಲಿ ಇವೆಲ್ಲಾ ಪ್ರಾಥಮಿಕ ಪ್ರಯತ್ನಗಳೆಂದು ಹೇಳಬಹುದು. ಇದರಿಂದ ಪ್ರಾರಂಭವಾಗಿ ಭೂಮಿಯು ಆಕಾಶದಲ್ಲಿ ನಿರಾಧಾರವಾಗಿ ತನ್ನ ಅಕ್ಷದ ಮೇಲೆ ಸುತ್ತುತ್ತಿದೆ ಎಂಬ ಮಜಲನ್ನು ಮುಟ್ಟಲು ವೈಚಾರಿಕ ನೆಲೆಯ ವಿಸ್ತರಣೆಯು ಹಲವು ಶತಮಾನಗಳಲ್ಲಿ ಉಂಟಾಯಿತೇ ವಿನಾ ಏಕಾಏಕಿ ಸಂಭವಿಸಲಿಲ್ಲ. ಸುಮಾರು ೭ನೆಯ ಶತಮಾನಕ್ಕೆ ಸೇರಿದ "ಸೂರ್ಯ ಸಿದ್ಧಾಂತ" ಎಂಬ ಗ್ರಂಥದ ವೇಳೆಗೆ ಭೂಮಿಯ ಬಗೆಗಿನ ಪರಿಕಲ್ಪನೆಗಳು ಸಾಕಷ್ಟು ಪಕ್ವಗೊಂಡಿವೆ ಎನ್ನಬಹುದು. ಆ ಗ್ರಂಥದಲ್ಲಿ (ಭೂಗೋಲಾಧ್ಯಾಯ, ಶ್ಲೋಕ ೩೨) ಭೂಮಿಯ ಗೋಲಾಕಾರ, ಅದು ಆಕಾಶದಲ್ಲಿ ನಿರಾಧಾರವಾಗಿ ನಿಂತಿರುವುದು, ಮೊದಲಾದ ಅಂಶಗಳ ಪ್ರಸ್ತಾಪವಿದೆ (ಮಧ್ಯೇ ಸಮಂತಾದಂಡಸ್ಯ ಭೂಗೋಲೋ ವ್ಯೋಮ್ನಿ ತಿಷ್ಠತಿ। ಬಿಭ್ರಾಣಃ ಪರಮಾಂ ಶಕ್ತಿಂ ಬ್ರಹ್ಮಣೋ ಧಾರಣಾತ್ಮಿಕಾಮ್॥).

"ಆಕಾಶದಲ್ಲಿರುವುದು" ಎಂದರೇನು? ಈ ಪ್ರಶ್ನೆಯು ನಮ್ಮ ಪ್ರಾಚೀನರಿಗೆ ಪದೇಪದೇ ಎದುರಾಗುತ್ತಿತ್ತು. ನರಹರಯ್ಯನವರು ಹೇಳುವಂತೆ (ಪು.೧೧-೧೨) "ಅದು ನಿರಾಧಾರಸ್ಥಾನ ರೂಪವಾದ ಶಕ್ತಿಯಿಂದ ಆಕಾಶದಲ್ಲಿ ನಿಂತಿರುವುದು." ನಿರಾಧಾರವಾದರೆ ಅದು ಬಿದ್ದುಹೋಗ ಬೇಡವೆ? ಇದಕ್ಕೆ "ಸೂರ್ಯಸಿದ್ಧಾಂತ" ಗ್ರಂಥವು ಉತ್ತರ ನೀಡಿದೆ. "ನಮ್ಮ ತಲೆಯ ಮೇಲೆ ಕಾಣುವುದನ್ನು ನಾವು ರೂಢವಾಗಿ ಮೇಲೆ ಎಂದುಕೊಂಡರೆ ಶೂನ್ಯವಾದ ಆಕಾಶದಲ್ಲಿ ಯಾವುದು ಮೇಲೆ, ಯಾವುದು ಕೆಳಗೆ, ಯಾವುದು ಪಾರ್ಶ್ವವು? ಆಧಾರವು ಯಾವುದು, ಆಧೇಯವು ಯಾವುದು? ಬಿದ್ದರೆ ಈಗಿರುವ ಸ್ಥಳದಿಂದ ಇನ್ನಷ್ಟು ಕೆಳಗೆ ಹೋಗಬಹುದು. ಪತನ ವ್ಯಾಪಾರವು ಮುಗಿದ ಬಳಿಕ ಅದೆಲ್ಲಿ ನಿಲ್ಲಬೇಕು? ಅಲ್ಲಿಗೂ ಆಕಾಶದಲ್ಲಿಯೇ ನಿಲ್ಲಬೇಕಷ್ಟೆ" (ನರಹರಯ್ಯ, ೧೯೨೪, ಪು. ೧೨).

ವರಾಹಮಿಹಿರನು ತನ್ನ "ಪಂಚಸಿದ್ಧಾಂತಿಕಾ" ಎಂಬ ಗ್ರಂಥದಲ್ಲಿ ಇದನ್ನು ಸಮರ್ಪಕವಾಗಿ ವಿವರಿಸಲು ಯತ್ನಿಸಿದ್ದಾನೆ. "ಐದು ಮಹಾಭೂತಗಳಿಂದ ಕೂಡಿದ ಗೋಲಾಕಾರದ ಭೂಮಿಯು ಆಕಾಶದಲ್ಲಿ ನಿಂತಿದೆ; ಅಯಸ್ಕಾಂತಗಳ ಪಂಜರವೊಂದರಲ್ಲಿ ಕಬ್ಬಿಣದ ಗುಂಡೊಂದು ಹೇಗಿರಬಹುದೋ ಹಾಗೆ ಆಕಾಶದಲ್ಲಿ ಭೂಮಿಯು ನಿಂತಿದೆ" (೧೩.೧-೪: ಪಂಚಮಹಾಭೂತ-ಮಯಃ ತಾರಾಗಣಪಂಜರೇ ಮಹೀಗೋಲಃ। ಖೇಽಯಸ್ಕಾಂತಸ್ಥೋ ಲೋಹ ಇವಾವಸ್ಥಿತೋ ವೃತ್ತಃ॥). ಇದಕ್ಕೆ ವ್ಯಾಖ್ಯಾನ ನೀಡುವಾಗ ಲಲ್ಲನು ಹೇಳುತ್ತಾನೆ : "ಮಹೀಗೋಲವು (ಅಂದರೆ, ಭೂಮಿಯು) ಅನಾಧಾರವಾದರೂ ಸರ್ವಾಧಾರವಾದುದು," ಎಂದು. ಎರಡನೆಯ ಆರ್ಯಭಟನು ತನ್ನ "ಮಹಾಸಿದ್ಧಾಂತ"ದಲ್ಲಿ ಇದನ್ನೇ ಸ್ಪಷ್ಟೀಕರಿಸಿದ್ದಾನೆ : "ನಾನ್ಯಾಧಾರಃ ಸ್ವಶಕ್ತ್ಯೈವ ವಿಯತಿ ನಿಯತಂ ತಿಷ್ಠತೀಹಾಸ್ಯ ಪೃಷ್ಠೇ." ಬಹುಮಟ್ಟಿಗೆ ಇವೇ ಮಾತುಗಳು ಎರಡನೇ ಭಾಸ್ಕರಾಚಾರ್ಯನ "ಸಿದ್ಧಾಂತ ಶಿರೋಮಣಿ" ಗ್ರಂಥದಲ್ಲೂ ಬರುತ್ತವೆ.

ಭೂಮಿಗೆ ಆಧಾರವಾಗಿ ಏನಾದರೊಂದು ಇರಬೇಕೆಂಬ ಕಲ್ಪನೆಯಿಂದಾಗಿ ಭೂಮಿಯು ಆದಿಶೇಷನ ಮೇಲೆ ನಿಂತಿದೆಯೆಂಬ ಭಾವನೆ ಬೆಳೆದಿದೆ. ಅದನ್ನು ಆರ್ಯಭಟನು ಚೆನ್ನಾಗಿ ಗುರುತಿಸಿ ಅದು ಎಷ್ಟೇ ಸ್ಥಿರವಾದ ನಂಬಿಕೆಯಾದರೂ ಆಧಾರರಹಿತವಾದುದೆಂದು ತೋರಿಸಿ ಕೊಟ್ಟಿದ್ದಾನೆ. ಭೂಮಿಯು ಆದಿಶೇಷನ ಮೇಲೆ ನಿಂತಿದ್ದರೆ ಆದಿಶೇಷನು ಯಾವುದರ ಮೇಲೆ ನಿಂತಿದ್ದಾನೆ? ಹೀಗೆ ಪ್ರಶ್ನೆಯು ನಿರಂತರವಾಗಿ ಮುಂದುವರಿಯುತ್ತದೆ. ಆದ್ದರಿಂದ ಆಕಾಶದಲ್ಲಿ ನಿರಾಧಾರವಾಗಿ ಭೂಮಿಯು ನಿಂತಿದೆಯೆಂಬು ದರಲ್ಲಿ ಬಾಧಕವಿಲ್ಲವೆಂದು ಅವನು ಹೇಳುತ್ತಾನೆ. ಲಲ್ಲನು ಇದನ್ನು ವಿಸ್ತರಿಸುವಾಗ ಮೊದಲಿಗೆ ತಪ್ಪು ಕಲ್ಪನೆಗಳನ್ನು ಕೈಬಿಡಬೇಕೆಂದು ವಾದಿಸುತ್ತಾನೆ. ಭೂಮಿಯು ಕನ್ನಡಿಯಂತೆ ಚಪ್ಪಟೆಯಾಗಿದೆ, ಅನೇಕ ಯೋಜನೆಗಳಷ್ಟಿರುವ ಭೂಮಿಯು ದೋಣಿಯಂತೆ ನೀರಿನ ಮೇಲೆ ತೇಲುತ್ತಿದೆ, ಅದು ಆಮೆಯ ಮೇಲೆ ನಿಂತಿದೆ, ಅದು ಮೇಲಕ್ಕೆ-ಕೆಳಕ್ಕೆ ಚಲಿಸುತ್ತಿರುತ್ತದೆ, ರಥದ ಚಕ್ರದಂತೆ ಅದು ಸುತ್ತುತ್ತಿರುತ್ತದೆ, ಮುಂತಾದುವೆಲ್ಲಾ ಅಂತಹ ಮಿಥ್ಯಾಕಲ್ಪನೆಗಳೆಂದು ಅವನು ಗುರುತಿಸಿದ್ದಾನೆ (ಬಿ. ವಿ. ಸುಬ್ಬರಾಯಪ್ಪ ಮತ್ತು ಕೆ. ವಿ. ಶರ್ಮ, ೧೯೮೫, ಪು. ೪೧). ಇದಾವುದೂ ಸರಿಯಲ್ಲವೆಂಬುದು ಅವನ ತೀರ್ಮಾನವಾದರೂ ಆರ್ಯ ಭಟನು ಹೇಳುವಂತೆ ಭೂಮಿಯು ತನ್ನ ಅಕ್ಷದ ಮೇಲೆ ಸುತ್ತುವುದಿಲ್ಲವೆಂದು ಅವನು ಅಭಿಪ್ರಾಯಪಟ್ಟಿದ್ದಾನೆ. ಬೆಳಿಗ್ಗೆ ತಮ್ಮ ಗೂಡುಗಳನ್ನು ಬಿಟ್ಟು ಹೊರಟ ಪಕ್ಷಿಗಳು ಸಂಜೆಗೆ ಮತ್ತೆ ಅಲ್ಲಿಗೇ ಹಿಂದಿರುಗುವುದು ಭೂಮಿಯ ಸುತ್ತುವಿಕೆಯನ್ನು ಸುಳ್ಳಾಗಿಸುತ್ತದೆಯೆಂದು ಅವನು ಹೇಳುತ್ತಾನೆ.

ನಕ್ಷತ್ರಗುಚ್ಛಗಳು ಪಶ್ಚಿಮಕ್ಕೆ ಚಲಿಸುವಂತೆ ತೋರುವುದು ಭೂಮಿಯು ತನ್ನ ಅಕ್ಷದ ಮೇಲೆ ಸುತ್ತುತ್ತಿರುವುದರಿಂದ ಎಂಬುದನ್ನು ಮೊದಲಿಗೆ ಬಹಳ ನಿಖರವಾಗಿ ನಿರೂಪಿಸಿದ ಕೀರ್ತಿ ಆರ್ಯಭಟನಿಗೆ ಸಲ್ಲುತ್ತದೆ (ಅವನು ಆರ್ಯಭಟನೇ ಹೊರತು ಈಚೆಗೆ ಕೆಲವು ವಿದ್ವಾಂಸರು ವಿರೂಪಗೊಳಿಸಿರುವಂತೆ ಅವನ ಹೆಸರು ಆರ್ಯಭಟ್ಟ ಅಲ್ಲ). ಇದಕ್ಕೆ ಅವನು ನೀಡಿರುವ ಉಪಮೆಯು ಪ್ರಸಿದ್ಧವಾಗಿದೆ : ಹೊಳೆಯಲ್ಲಿ ದೋಣಿಯು ವೇಗವಾಗಿ ಚಲಿಸುವಾಗ ಅದರಲ್ಲಿರುವ ವ್ಯಕ್ತಿಗೆ ದಡದಲ್ಲಿ ರುವ ಗಿಡ-ಮರಗಳು ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಿರುವಂತೆ ತೋರುತ್ತದೆ. ಭೂಮಿಯು ತನ್ನ ಅಕ್ಷದ ಮೇಲೆ ಪಶ್ಚಿಮಕ್ಕೆ ಸುತ್ತುತ್ತದೆ, ಎಂದು ಲಲ್ಲನು ತಿಳಿಸುತ್ತಾನೆ. ಅದಕ್ಕೆ ಪ್ರವಹವೆಂಬ ಗಾಳಿಯು ಕಾರಣವೆಂದು ಅವನು ಬಗೆದಿದ್ದಾನೆ. ಈ ಸುತ್ತುವಿಕೆಯಿಂದಾಗಿ ಉತ್ತರ ಧ್ರುವದಲ್ಲಿರುವ ದೇವತೆಗಳಿಗೆ ಭೂಮಿಯು ಎಡದಿಂದ ಬಲಕ್ಕೆ ತಿರುಗುತ್ತಿದೆ ಯೆಂದು ತೋರುತ್ತದೆಯಾದರೆ ದಕ್ಷಿಣ ಧ್ರುವದಲ್ಲಿರುವ ದಾನವರಿಗೆ ಭೂಮಿಯು ಬಲದಿಂದ ಎಡಕ್ಕೆ ಸುತ್ತುತ್ತಿರುವಂತೆ ಭಾಸವಾಗುತ್ತದೆಯೆಂದು ಲಲ್ಲನು ವಿವರಿಸಿ ದ್ದಾನೆ (ಬಿ. ವಿ. ಸುಬ್ಬರಾಯಪ್ಪ ಮತ್ತು ಕೆ. ವಿ. ಶರ್ಮ, ೧೯೮೫, ಪು. ೨೨: ಸದೈವ ನಿತ್ಯಂ ಪ್ರವಹೇಣ ವಾಯುನಾ ನಿರಕ್ಷದೇಶೋಪರಿಗೋ ಭ ಪಂಜರಃ। ಸ್ವಪಶ್ಚಿಮಾ-ಶಾಭಿಮುಖೇಽಪಿ ನೀಯತೇಽಸುರಾಮರಾಣಾಂ ಅಪಸವ್ಯಸವ್ಯಗಃ॥).

ಸ್ವತಃ ಶ್ರೇಷ್ಠ ಖಗೋಳಶಾಸ್ತ್ರಜ್ಞನಾಗಿದ್ದ ಬ್ರಹ್ಮಗುಪ್ತನು ಆರ್ಯಭಟನ ಸಿದ್ಧಾಂತವನ್ನು ಕಟುವಾಗಿ ಟೀಕಿಸಿದ್ದಾನೆ. ಅವನ ಪ್ರಕಾರ ಭೂಮಿಯ ಸುತ್ತುವಿಕೆಯು ಅಬದ್ಧವಾದ ಕಲ್ಪನೆ. ತನ್ನ ಸಮಕಾಲೀನ ಸಂಪ್ರದಾಯಸ್ಥರ ಮೊಂಡು ತನಕ್ಕೆ ಮಣಿದು ಬ್ರಹ್ಮಗುಪ್ತನು ಆರ್ಯಭಟನನ್ನು ವಿರೋಧಿಸಿರಬೇಕು. ಅಲ್-ಬಿರೂನಿಯ ಕಾಲಕ್ಕಾಗಲೇ ಆರ್ಯಭಟನ ಗ್ರಂಥವು ಅಲಭ್ಯವಾಗಿದ್ದುದು ಈ ಊಹೆಗೆ ಬಲವಾದ ಸಮರ್ಥನೆ ನೀಡುತ್ತದೆ. ಒಂಭತ್ತನೆಯ ಶತಮಾನದ ಪೃಥೂದಕಸ್ವಾಮಿಯು ಇದನ್ನು ಚೆನ್ನಾಗಿ ಗ್ರಹಿಸಿದ್ದಾನೆ: "ಭೂಮಿಯು ತನ್ನ ಅಕ್ಷದ ಮೇಲೆ ಸುತ್ತುವುದರಿಂದ ಗ್ರಹ-ನಕ್ಷತ್ರಗಳು ಹುಟ್ಟಿ ಮುಳುಗಿದಂತೆ ತೋರುತ್ತದೆ" (ಭ ಪಂಜರಃ ಸ್ಥಿರಃ। ಭೂರೇವ ಆವೃತ್ಯಾ-ವೃತ್ಯ ಪ್ರತಿದೈವಸಿಕೌ ಉದಯಾಸ್ತಮಯೌ ಸಂಪಾದಯತಿ ನಕ್ಷತ್ರಗ್ರಹಾಣಾಮ್॥). ಇದನ್ನೇ ಪ್ರತಿಪಾದಿಸಿದ್ದ ಆರ್ಯ ಭಟನನ್ನು ಬ್ರಹ್ಮಗುಪ್ತನು ತೀವ್ರವಾಗಿ ವಿರೋಧಿಸಿದ್ದು ಸಂಪ್ರದಾಯಸ್ಥ ಜನರ ತಪ್ಪು ಅಭಿಪ್ರಾಯದಿಂದ. ಮೊದಲನೆಯ ಭಾಸ್ಕರ, ಮುಂತಾದವರೂ ಬ್ರಹ್ಮಗುಪ್ತನನ್ನೇ ಅನುಸರಿಸಿದರು, ಎಂಬರ್ಥ ಬರುವ ಮಾತುಗಳನ್ನು ಪೃಥೂದಕಸ್ವಾಮಿಯು ಆಡಿದ್ದಾನೆ: ಆಚಾರ್ಯಾರ್ಯ-ಭಟೇನಾಪಿ ಭೂ ಭ್ರಮಣಮಭ್ಯುಪಗತಮ್। ಪ್ರಾಣೇನೈತಿ ಕಲಾಂ ಭೂಃ....। ಲೋಕಭಯಾತ್ ಭಾಸ್ಕರಾದಿ-ಭಿರನ್ಯಥಾ ಮತ್ವೇಯಮಾರ್ಯಾ ವ್ಯಾಖ್ಯಾತಾ॥ ಇದೇ ಸಾಂಪ್ರದಾಯಿಕ ಅಭಿಪ್ರಾಯವನ್ನು ಮಂಡಿಸುತ್ತಾ ಆರ್ಯಭಟನನ್ನು ವಿರೋಧಿಸಲು ಅಪ್ಪಯ್ಯ ದೀಕ್ಷಿತನು "ಭೂಮಿಯು ಸ್ಥಿರವಾಗಿದೆ" (ಪೃಥಿವೀ ಪ್ರತಿಷ್ಠಾ) ಎಂಬ ಶ್ರುತಿವಾಕ್ಯವನ್ನು ಉದ್ಧರಿಸಿದ್ದಾನೆ. ಸಾಂಪ್ರದಾಯಿಕತೆಗೆ ಶರಣಾದಾಗ ವೈಚಾರಿಕ ಬೆಳವಣಿಗೆಯು ಹೇಗೆ ಕೆಲವೊಮ್ಮೆ ಕುಂಠಿತವಾಗಬಹುದೆಂಬುದಕ್ಕೆ ಇದೊಂದು ಪ್ರಖ್ಯಾತ ನಿದರ್ಶನವಾಗಿದೆ.

ಕೊಲಂಬಸ್‌ನ ಕಾಲದಲ್ಲಿ ಕೂಡ ಯೂರೋಪಿನಲ್ಲಿ



ಕೆಲವರು ಭೂಮಿಯು ಚಪ್ಪಟೆಯಾಗಿದ್ದಿತೆಂದು ಭಾವಿಸಿದ್ದುದಕ್ಕೆ ಇಂತಹ ಸಂಪ್ರದಾಯ ಶರಣತೆಯೇ ಕಾರಣವಾಗಿದ್ದಿರಬೇಕು. ಏಕೆಂದರೆ ಅವನ ಕಾಲಕ್ಕಾಗಲೇ ಭೂಮಿಯ ಆಕೃತಿಯ ಬಗ್ಗೆ ಸ್ಪಷ್ಟವಾದ ತಿಳಿವಳಿಕೆಯು ಮೂಡಿದ್ದಿತು. ಅಂತೆಯೇ ಭಾರತದಲ್ಲಿ ಎರಡನೆಯ ಭಾಸ್ಕರನ ಕಾಲಕ್ಕೆ (೧೨ನೆಯ ಶತಮಾನ) ಭೂಮಿಯ ಗೋಲಾಕಾರವು ಸ್ಥಿರೀಕರಿಸಲ್ಪಟ್ಟಿದ್ದಾಗ್ಯೂ ಅವನಿನ್ನೂ ಭೂಮಿಯು ಚಪ್ಪಟೆಯಾಗಿಯೇ ಇದೆಯೆಂದು ಪ್ರತಿಪಾದಿಸುತ್ತಿದ್ದ (ಸಮೋ ಯತಃ ಸ್ಯಾತ್ ಪರಿಧೇಃ ಶತಾಂಶಃ ಪೃಥ್ವೀ ಚ ಪೃಥ್ವೀ ನಿತರಾಂ ತನೀಯಾನ್। ನರಶ್ಚ ತತ್ಪೃಷ್ಠಗತಸ್ಯ ಕೃತ್ಸ್ನಾ ಸಮೇವ ತಸ್ಯ ಪ್ರತಿಭಾತ್ಯತಃ ಸಾ॥). ಅವನಿಗೆ ಬಹಳ ಮುಂಚೆಯೇ ''ಕಂದುಕರೂಪಾ ಧಾತ್ರೀ'' (ಎಂದರೆ, ಭೂಮಿಯು ಗೋಲಾಕಾರವಾದದ್ದು) ಎಂದು ''ಮಹಾಸಿದ್ಧಾಂತ'' (೧೬.೫) ಎಂಬ ಗ್ರಂಥವು ನಿರೂಪಿಸಿತ್ತು. ಇದಕ್ಕೆ ಸಂಬಂಧಿಸಿದ ಬೆಳವಣಿಗೆಗಳನ್ನು ಡಾ॥ ಎಸ್. ಬಾಲಚಂದ್ರರಾವ್ ಚೆನ್ನಾಗಿ ದಾಖಲಿಸಿದ್ದಾರೆ (೧೯೯೪, ಪು. ೪೬).

ಕ್ರಿ. ಪೂ. ೬ನೆಯ ಶತಮಾನದಲ್ಲಿ ಪ್ರಾಚೀನ ಗ್ರೀಸಿಗೆ ಸೇರಿದ ಪೈಥಾಗೊರಸ್ ಭೂಮಿಯ ಗೋಲಾಕಾರವನ್ನು ಪ್ರತಿಪಾದಿಸಿದ್ದುದುಂಟು. ಅದಾದ ಎರಡು ಶತಮಾನಗಳ ನಂತರ ಬಂದ ಅರಿಸ್ಟಾಟಲನು ಅದನ್ನು ಮಾನ್ಯಮಾಡಿ ಕೆಲವು ನಿದರ್ಶನಗಳ ಸಹಾಯದಿಂದ ಸಿದ್ಧಾಂತವನ್ನು ಕ್ರೋಡೀಕರಿಸಿದ್ದ. ಗ್ರಹಣ ಕಾಲದಲ್ಲಿ ಚಂದ್ರನ ಮೇಲೆ ಬೀಳುವ ಭೂಮಿಯ ನೆರಳು ಗೋಲಾಕಾರದಲ್ಲಿರುತ್ತದೆಂಬುದನ್ನು ಅವಲೋಕಿಸಿ ಅರಿಸ್ಟಾಟಲ್ ತನ್ನ ವಾದವನ್ನು ಮಂಡಿಸಿದ್ದ. ಉತ್ತರ ದಿಕ್ಕಿನಿಂದ ದಕ್ಷಿಣಕ್ಕೆ ಪ್ರಯಾಣ ಮಾಡಿದಾಗ ಸೂರ್ಯ ಮತ್ತು ನಕ್ಷತ್ರಗಳ ಸ್ಥಾನಗಳಲ್ಲಿ ಬದಲಾವಣೆ ತೋರುವುದು ಸಹ ಇದೇ ತೀರ್ಮಾನವನ್ನು ಬೆಂಬಲಿಸುತ್ತದೆಯೆಂದು ಅವನು ನಿರೂಪಿಸಿದ್ದ.

ಕ್ರಿ. ಪೂ. ೩ನೆಯ ಶತಮಾನದಲ್ಲಿ ಎರಾಟೊಸ್ತಿನೀಸ್ ಎಂಬ ಪ್ರಾಚೀನ ಗ್ರೀಸಿನ ಖಗೋಳ ವಿಜ್ಞಾನಿಯು ಭೂಮಿಯ ಗಾತ್ರವನ್ನು ಗೊತ್ತುಪಡಿಸಲು ಯತ್ನಿಸಿದ್ದ. ದಕ್ಷಿಣ ಈಜಿಪ್ಟಿನಲ್ಲಿ ನಡುಮಧ್ಯಾಹ್ನದಲ್ಲಿ ನೆತ್ತಿಯ ಮೇಲೆ ಸೂರ್ಯನಿರುವಾಗ ಉತ್ತರ ಈಜಿಪ್ಟಿನ ಅಲೆಕ್ಸಾಂಡ್ರಿಯಾದಲ್ಲಿ ಅದು ೭ ಡಿಗ್ರಿಗಳಷ್ಟು ವಾಲಿರುತ್ತದೆಂಬ ಅಂಶವನ್ನು ಅವನು ದಾಖಲು ಮಾಡಿದ್ದಾನೆ. ಇದರ ಆಧಾರದ ಮೇಲೆ ಭೂಮಿಯ ಪರಿಮಾಣವನ್ನು ಅವನು ಲೆಕ್ಕ ಮಾಡಿದ್ದ; ಇಂದಿನ ಲೆಕ್ಕಾಚಾರಕ್ಕೆ ಸರಿಸುಮಾರಾಗಿ ಅದು ಸರಿಹೊಂದುತ್ತದೆಂಬುದು ಗಮನಾರ್ಹವಾಗಿದೆ.

ಭೂಮಿಯ ಬಹುಭಾಗವು ನೀರಿನಿಂದ ಆವೃತವಾಗಿದೆಯೆಂದೂ, ಅದಕ್ಕೆ ಹೋಲಿಸಿದರೆ ನೀರಿನಿಂದ ಆವೃತವಾಗಿರದ ಭೂಭಾಗವು ಬಹಳ ಕಡಿಮೆಯೆಂದೂ ಲಲ್ಲನು ೮ನೆಯ ಶತಮಾನದಲ್ಲಿ ಪ್ರತಿಪಾದಿಸಿದ್ದನು (ಭೂಗೋಲೋ ಜಲಮಗ್ನೋಽಸ್ತಿ ಜಲಾದ್ಬಹಿರಪಿ ಸ್ಥಿತಃ। ತತ್ರಾದಿಕೋ ಜಲಾಂತಃಸ್ಥೋ ಬಹಿಃ ಸ್ವಲ್ಪೋಽಸ್ತಿ॥).

ಚಂದ್ರನ ಮೇಲೆ ಬೀಳುವ ಭೂಮಿಯ ನೆರಳಿನ ಬಗ್ಗೆ ಅರಿಸ್ಟಾಟಲನು ಪ್ರಸ್ತಾಪ ಮಾಡಿದ್ದನೆಂದು ಮೇಲೆ ಉಲ್ಲೇಖಿಸಲಾಯಿತಷ್ಟೆ. ಅದನ್ನು ಕುರಿತು ಖಚಿತವಾದ ಮಾಹಿತಿ ಮತ್ತು ಲೆಕ್ಕಾಚಾರಗಳನ್ನು ಆರ್ಯಭಟ ಹಾಗೂ ಅವನ ನಂತರದ ಭಾಸ್ಕರ, ಮುಂತಾದವರು ನೀಡಿದ್ದಾರೆ. ಭೂಮಿಯ ನೆರಳಿನ ಉದ್ದ ಮತ್ತು ವ್ಯಾಸಗಳನ್ನು ಲೆಕ್ಕ ಮಾಡುವಾಗ ಅವರು ಚಂದ್ರನ ಸಾಮಾನ್ಯ ಗತಿಯನ್ನು ಗಮನದಲ್ಲಿರಿಸಿಕೊಂಡು ಈ ರೀತಿಯ ಸೂತ್ರವನ್ನು ನೀಡಿದ್ದಾರೆ :

$$\text{ಭೂಮಿಯ ನೆರಳಿನ ಉದ್ದ} = \frac{\text{ಸೂರ್ಯನಿರುವ ದೂರ} \times \text{ಭೂಮಿಯ ವ್ಯಾಸ}}{\text{ಸೂರ್ಯನ ವ್ಯಾಸ - ಭೂಮಿಯ ವ್ಯಾಸ.}}$$

$$\text{ಚಂದ್ರನ ಗತಿಯಲ್ಲಿ ನೆರಳಿನ ವ್ಯಾಸ} = \frac{(\text{ಭೂಮಿಯ ನೆರಳಿನ ಉದ್ದ - ಚಂದ್ರನಿರುವ ದೂರ}) \times \text{ಭೂಮಿಯ ವ್ಯಾಸ}}{\text{ಭೂಮಿಯ ನೆರಳಿನ ಉದ್ದ.}}$$

ಈ ಸೂತ್ರಗಳಲ್ಲಿ ಸೂಚಿತವಾಗಿರುವ ಲೆಕ್ಕಾಚಾರದ ನಿಖರತೆಯನ್ನು ಎಸ್. ಎನ್. ಸೇನ್ ಸ್ಪಷ್ಟಪಡಿಸಿದ್ದಾರೆ (ಬೋಸ್, ಇತ್ಯಾದಿ; ೧೯೮೯, ಪು.೧೧೯).

ಭೂಮಿಯ ಗುರುತ್ವಾಕರ್ಷಣ ಶಕ್ತಿಯ ಬಗೆಗೆ ಒಂದು ರೀತಿಯ ನಿಖರವಾದ ಕಲ್ಪನೆ ಪ್ರಾಚೀನ ಭಾರತೀಯ ಖಗೋಳಶಾಸ್ತ್ರಜ್ಞರಲ್ಲಿ ಇದ್ದಂತೆ ತೋರುತ್ತದೆ. ಮೇಲಕ್ಕೆಸೆಯಲ್ಪಟ್ಟ ವಸ್ತುವು ಭೂಮಿಗೆ ಹಿಂದಿರುಗಿ ಬೀಳಲು ಕಾರಣವೇನೆಂಬುದನ್ನು ವಿಚಾರ ಮಾಡುವಾಗ ಭಾಸ್ಕರನು ಕೊಡುವ ವಿವರಣೆ ಇದಕ್ಕೆ ನಿದರ್ಶನವಾಗಿದೆ. ವಸ್ತುಗಳನ್ನು ಭೂಮಿಯು ಆಕರ್ಷಿಸುವುದು ಅದಕ್ಕೆ ಕಾರಣವೆಂದು ಭಾಸ್ಕರನು ತಿಳಿಸುತ್ತಾನೆ. ಅವನಿಗಿಂತಲೂ ಹಿಂದಿನ ಪತಂಜಲಿಯು ಪಾಣಿನಿಯ ಅಷ್ಟಾಧ್ಯಾಯಿಗೆ ಬರೆದ ಮಹಾಭಾಷ್ಯದಲ್ಲಿ ಇದೇ ಪ್ರಶ್ನೆಯನ್ನೆತ್ತಿಕೊಂಡಿದ್ದಾನೆ. ದಾಸ್‌ಗುಪ್ತ ಉಲ್ಲೇಖಿಸಿರುವಂತೆ ಅವನ ಉತ್ತರ ಭಾಸ್ಕರನದಕ್ಕಿಂತಲೂ ತೀರಾ ಭಿನ್ನವಾಗಿದೆ (೧೯೮೯, ಪು.೨೬). ಅವನ ಪ್ರಕಾರ ವಸ್ತುಗಳು ಭೂಮಿಯ ಮೇಲಿನ ವಸ್ತುಗಳೊಂದಿಗೆ ಸಂಬಂಧ ಹೊಂದಿವೆಯಾದ್ದರಿಂದ ಮೇಲಕ್ಕೆಸೆಯಲ್ಪಟ್ಟಾಗ ಭೂಮಿಗೆ ಹಿಂದಿರುಗಿ ಬೀಳುತ್ತವೆ!

ಭಾಸ್ಕರನಿಗಿಂತಲೂ ಸ್ಪಷ್ಟವಾಗಿ ಲಲ್ಲನು ಭೂಮಿಯ ಆಕರ್ಷಣಾ ಶಕ್ತಿಯ ಬಗೆಗೆ ಪ್ರತಿಪಾದನೆ ಮಾಡಿದ್ದಾನೆ. ಜಂತೆಯ ಮೇಲೆ ತಲೆಕೆಳಗಾಗಿ ಓಡಾಡುವ ಹಲ್ಲಿಯಂತೆ ಭೂಮಿಯ ಇನ್ನೊಂದು ಪಾರ್ಶ್ವದಲ್ಲಿ ವಾಸಿಸುವ ಜನ ಸಲೀಸಾಗಿ ಓಡಾಡಬಲ್ಲರು. ಭಾರದ ವಸ್ತುವು ಮೇಲಿನಿಂದ ಕೆಳಕ್ಕೆ ಬೀಳಲು ಭೂಮಿಯ ಆಕರ್ಷಣಾ ಶಕ್ತಿಯು ಕಾರಣ. ಆದರೆ ಸ್ವತಃ ಭೂಮಿಯು ಯಾವ ಸಮತಲದ ಮೇಲೂ ಬೀಳಲಾರದು. ಏಕೆಂದರೆ ಅಂತಹ ಸಮತಲವು ಯಾವುದೂ ಇಲ್ಲ (ಬಿ. ವಿ. ಸುಬ್ಬರಾಯಪ್ಪ ಮತ್ತು ಕೆ. ವಿ. ಶರ್ಮ, ೧೯೮೫, ಪುಟ. ೨೫). ಭೂಗರ್ಭದಲ್ಲಿ ಅಡಗಿರುವ ಖನಿಜಗಳನ್ನು ಕುರಿತಂತೆ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿಪುಲವಾದ ನಿರೂಪಣೆಗಳಿವೆ. ಅವು ಹೇಗೆ ರೂಪುಗೊಂಡವೆಂಬ ವಿಷಯವನ್ನು ಕೌಟಿಲ್ಯನು ಚರ್ಚಿಸಿಲ್ಲ. ೧೬ನೆಯ ಶತಮಾನದ ಯೂರೋಪಿನಲ್ಲಿ ಜಾರ್ಜಿಯಸ್ ಅಗ್ರಿಕೋಲ ಎಂಬ ಭೂವಿಜ್ಞಾನಿಯು ಭೂಮಿಯಲ್ಲಿ ಖನಿಜಗಳು ನರಗಳಂತೆ ವ್ಯಾಪಿಸಿರುವ ಹಾದಿಯನ್ನು ಗುರುತಿಸಲು ಸಾಧ್ಯವೆಂದು ನಿರೂಪಿಸಿ ಒಂದು ಸಮಗ್ರವಾದ ಚಿತ್ರವನ್ನು ನೀಡಿದ್ದನು.

ಇಪ್ಪತ್ತನೆಯ ಶತಮಾನದಲ್ಲಿ ಆಲ್‌ಫ್ರೆಡ್ ವೇಗೆನರ್ ಮತ್ತು ಆರ್ಥರ್ ಹೋಮ್ಸ್ ಎಂಬ ಭೂವಿಜ್ಞಾನಿಗಳು ಸಾವಿರಾರು ಶತಮಾನಗಳ ಅವಧಿಯಲ್ಲಿ ಬೇರೆ ಬೇರೆ ಖಂಡಗಳು ಕ್ರಮೇಣ ಆ ಕಡೆ, ಈ ಕಡೆ ಸರಿಯುತ್ತಾ ಹೋದುವೆಂಬ ಅದ್ಭುತವಾದ ಸಂಶೋಧನೆಯನ್ನು ಪ್ರಮಾಣಗಳ ಸಹಿತವಾಗಿ ವಿಜ್ಞಾನಿಗಳ ಮುಂದೆ ಇರಿಸಿದ್ದಾರೆ. ಹಲವು ಲಕ್ಷ ವರ್ಷಗಳ ಹಿಂದೆ ಒಂದೆಡೆ ಒಟ್ಟಾಗಿರುತ್ತಿದ್ದ ಭೂ ಪ್ರದೇಶಗಳು ಕ್ರಮೇಣ ಬೇರೆಬೇರೆ ಖಂಡಗಳಾಗಿ ಮಾರ್ಪಟ್ಟಿರುವುದು ಕೂಡ ಒಂದು ನಿಯಮದ ಪ್ರಕಾರ ಎಂಬುದನ್ನಿವರು ಪ್ರತಿಪಾದಿಸಿದ್ದಾರೆ.

ಜ್ಞಾನದ ಹಾದಿಯನ್ನು ಸತತವಾಗಿ ಕ್ರಮಿಸುತ್ತಲೇ ಬಂದಿರುವ ಮಾನವ ವಿಸ್ಮಯ, ಅಸ್ಪಷ್ಟತೆ, ಸಾಂಪ್ರದಾಯಿಕ ನಂಬಿಕೆ, ಮುಂತಾದುವನ್ನು ಹಿಂದಕ್ಕೆ ಹಾಕಿ ಸರ್ವತೋಮುಖವಾದ ವೈಚಾರಿಕ ನೆಲೆಯನ್ನು ವಿಸ್ತರಿಸಿಕೊಳ್ಳುತ್ತಾ ಬಂದಿದ್ದಾನೆ. ಈ ವಿಕಾಸಕ್ಕೆ ಕೊನೆಯೆಂಬುದಿಲ್ಲ. ಮಾನವ ಇನ್ನೂ ಅದೇ ದಿಕ್ಕಿನಲ್ಲಿ ಹೆಜ್ಜೆ ಹಾಕುತ್ತಲೇ ಮುಂದುವರಿಯುತ್ತಾನೆ. ಅದು ವೈಜ್ಞಾನಿಕ ಪದ್ಧತಿಯ ಒಂದು ಮೂಲಭೂತ ಲಕ್ಷಣ ಮತ್ತು ಅನಿವಾರ್ಯವಾದ ಸೂತ್ರ.

❑❑❑

*(೩ನೇ ಪುಟದಿಂದ)*

ದೇಶದ ಕೆಲವು ಟಿ.ವಿ. ಚಾನಲ್‌ಗಳು ಯಾವ ಬದಲಾವಣೆಯೂ ಇಲ್ಲದೆ ಪ್ರಸಾರ ಮಾಡುತ್ತವೆ. ಅಮೆರಿಕಾದ ಗರ್ವ ಪ್ರದರ್ಶನವು ನ್ಯಾಯಯುತವಾದ್ದು, ಚೀಣಾ ಏನೋ ಅಪರಾಧ ಮಾಡಿದೆ ಎಂಬಂತೆ ಚಿತ್ರಿಸಲಾಗುವ ಈ ಪ್ರಸಾರ ಹೇಗೆ ನಮ್ಮ ಸಮ್ಮತಿ ಪಡೆಯಲು ಅರ್ಹವಾದೀತು ? ಆದರೂ ಒಡೆಯನ ಆಜ್ಞೆಯನ್ನು ಪರಿಪಾಲಿಸುವ ಸೇವಕನಂತೆ ಭಾರತದ ಮಾಧ್ಯಮಗಳು ನಡೆದುಕೊಳ್ಳುತ್ತಿರುವುದು ಒಂದು ತುಚ್ಛ ಸಂಪ್ರದಾಯವಾಗುತ್ತಿದೆ. ತಾನು ಬೇರೆಲ್ಲ ಪಕ್ಷಗಳಿಗಿಂತಲೂ ಹೆಚ್ಚು ರಾಷ್ಟ್ರೀಯವೆಂದು ಡಂಗೂರ ಸಾರುವ ಭಾರತೀಯ ಜನತಾ ಪಕ್ಷದ ನೇತೃತ್ವದಲ್ಲಿ ಇದೆಲ್ಲಾ ನಡೆಯುತ್ತಿರುವುದೊಂದು ವಿಪರ್ಯಾಸ.

ಇದಕ್ಕೆ ಇನ್ನೊಂದು ನಿದರ್ಶನ ಕೇಂದ್ರ ಅರ್ಥಮಂತ್ರಿ ಇತ್ತೀಚೆಗೆ ನೀಡಿದ ಒಂದು ಹೇಳಿಕೆ. ಹಿಂದೆಂದೂ ಇಲ್ಲದಷ್ಟು ಕುಸಿತವನ್ನು ನಮ್ಮ ರೂಪಾಯಿ ಕಂಡಿದೆ. ಷೇರು ಪೇಟೆಯ ಹಗರಣಗಳು, ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಬಿದ್ದಿರುವ ಪೆಟ್ಟು, ಉತ್ಪಾದನೆಯಲ್ಲಿ ಕುಸಿತ, ಇವೆಲ್ಲಾ ಇದಕ್ಕೆ ಕಾರಣ. ಒಂದು ಡಾಲರಿಗೆ ೪೭ ರೂಪಾಯಿ ವಿನಿಮಯ ಬೆಲೆ. ಅದಕ್ಕೆ ಯಶವಂತ ಸಿನ್ಹಾ ವಿವರಣೆ ಇದು: ''ಅದನ್ನು ಅಂತರರಾಷ್ಟ್ರೀಯ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕು.'' ಹಾಗೆಂದರೇನು ? ಯಜಮಾನನು ನಿರ್ಧರಿಸಿದಂತೆ ನಾವು ನಡೆದುಕೊಳ್ಳಬೇಕೆಂದೆ ? ಕೃತಕವಾಗಿ ಡಾಲರಿನ ಬೆಲೆಯನ್ನು ಏರಿಸಿ ಭಾರತದ ಸಂಪತ್ತನ್ನು ಲೂಟಿಮಾಡುವ ಹುನ್ನಾರಕ್ಕೆ ಕುಮ್ಮಕ್ಕು ನೀಡಲೆಂದು ಸಿನ್ಹಾ ಅರ್ಥ ಸಚಿವರಾಗಿ ದೇಶಕ್ಕೆ ಅನರ್ಥ ತರುತ್ತಿದ್ದಾರೆ. ಈ ತಿಂಗಳ ದುರಂತಗಳಲ್ಲಿ ದುರ್ಭರವಾದ್ದು ಇದು. ಅದನ್ನು ತಡೆಗಟ್ಟಲು ಭಾರತದ ಜನತೆಯ ಮಧ್ಯಪ್ರವೇಶವು ಕ್ರಿಯಾತ್ಮಕ ರೂಪದಲ್ಲಿ ಆಗಬೇಕಾಗಿದೆ.

- ಜಿ. ರಾಮಕೃಷ್ಣ

# ಸಾವಿನ ನೆರಳು



ಸತ್ತ ಮುಖ, ಊದಿದ ಕೆನ್ನೆಗಳು.... ಸೀರೆಯ ಸೆರಗಿನ ಹಿಂದಿನಿಂದ ಅವಳು ಅವನತ್ತ ಕಣ್ಣೆತ್ತಿ ನೋಡಿದಳು. ಆ ನಂತರ ಮುಖ ತಿರುಗಿಸಿಬಿಟ್ಟಳು... ಭಯಾನಕ... ಕುರೂಪಿ... ಪೆದ್ದು. ಅವಳ ಕತ್ತಿನ ಮೇಲೆ ಬೆವರ ಹನಿಗಳು ಇಳಿಯಲಾರಂಭಿಸಿದವು. ನಿಟ್ಟುಸಿರು ಬಾರದಂತೆ ಅವಳು ತನ್ನ ತುಟಿಗಳನ್ನು ಗಟ್ಟಿಗೆ ಕಚ್ಚಿಕೊಂಡಳು. ಅವಳ ಉಸಿರಾಟದ ಗತಿ ಏರುಪೇರಾಯಿತು. ದೇಹ ತೂರಾಡಲಾರಂಭಿಸಿತು.

ಅವಳು ತನ್ನನ್ನು ತಾನು ಸಾವರಿಸಿ ಕೊಂಡಳು. ಹಾಗೂ ಒಂದೆಡೆಗೆ ವಾಲಿ ಅರ್ಧ ಕಣ್ಣು ಮುಚ್ಚಿಕೊಂಡು ನಿಂತು ಕೊಂಡಳು. ದುರುಗುಟ್ಟಿಕೊಂಡು ನೋಡು ತ್ತಿದ್ದ "ಅವರ" ಹೆಣದ ಕಣ್ಣುಗಳನ್ನು ಸಂಧಿಸಲು ತನ್ನ ಕಣ್ಣು ತೆರೆಯಲಿ ಎಂದುಕೊಂಡಳು.

ಮತ್ತೆ ತನ್ನ ದೃಷ್ಟಿಯನ್ನು ಹಿಂತೆಗೆದು ಕೊಂಡು ನೆನೆಸಿಕೊಂಡಳು - ಅವನು ಬದುಕಿದ್ದಾಗ ತಾನು ಎಂದೂ ಅವನ ದೃಷ್ಟಿಯನ್ನು ಸಂಧಿಸಿರಲಿಲ್ಲ. ಮತ್ತೀಗ ಅವನ ಸತ್ತ ದೃಷ್ಟಿ ಅವಳ ನೋಟಕ್ಕೆ ಉತ್ತರವನ್ನಿತ್ತಿತ್ತು. ಅವಳು ಗೋಣು ಬಾಗಿಸಬೇಕೆಂದು ಹೇಳಿ ಹಿಂದಿನಿಂದ ಅವಳ ಅತ್ತೆ ಅವಳನ್ನು ಇರಿಯಲಾರಂಭಿಸಿದರು. ಅವಳ ಮುಂದಿದ್ದ ಹೆಣಕ್ಕಿಂತಲೂ ಹೆಚ್ಚಾಗಿ ಅವಳ ದೇಹ ಮರಗಟ್ಟಿಹೋಗಿತ್ತು. ಮಾವ ಎಷ್ಟೇ ಹೇಳಿದರೂ "ಅವರ" ಕೈಯೊಂದಿಗೆ ಅವಳು ತನ್ನ ಕೈಯನ್ನು ಸೇರಿಸಲಿಲ್ಲ. ಸುತ್ತಲೂ ತನ್ನ ಪತಿಗಾಗಿ ಕಣ್ಣೀರಿಡುತ್ತಿದ್ದವರ ಗದ್ದಲ ಅವಳನ್ನು ಗಲಿಬಿಲಿಗೊಳಿಸಿತು. ಕೈಯಿಂದ ಬೆವರಿಳಿಯಲಾರಂಭಿಸಿತು.

ಸುತ್ತಲೂ ಹೆಚ್ಚುತ್ತಿದ್ದ ಪಿಸುಮಾತಿನ ನಡುವೆ ಅವಳ ಅಂಗಾಂಗಗಳಲ್ಲಿ ಮೌನ ಹೆಚ್ಚಿತು.

"ಹೋಗು." ಅವಳ ಮಾವ ಬಲವಾಗಿ ಪಿಸುಗುಟ್ಟಿದರು. "ತಯಾರಾಗು... !"

"ಬಾ" ಅವಳ ಅತ್ತೆ ಅವಳನ್ನು ಎಳೆಯುತ್ತಾ ಹೇಳಿದರು.

ತನ್ನ ಕಣ್ಣಲ್ಲಿ ಒಸರುತ್ತಿದ್ದ ನೀರನ್ನು ಒರೆಸಲು ಅವಳು ತನ್ನ ಬಲಗೈಯನ್ನೆತ್ತಿದಳು. ಸುತ್ತಲಿದ್ದ ಶೋಕತಪ್ತರು ತನ್ನನ್ನು ಗಂಡನ ಸಾವಿಗೆ ಕಾರಣಳಾದ ಅಪಶಕುನದ ಹೆಣ್ಣೆಂದು ಜರೆಯುವರೆಂದೆನಿಸಿತು. ಅವಳು ತೂರಾಡಿದಳಾದರೂ ಅಲುಗಾಡಲಿಲ್ಲ.

"ನಡಿ." ಅವಳ ಅತ್ತೆ ಹೇಳಿದರು.

ಆದರೂ ಅವಳು ಅಲ್ಲೇ ನಿಂತುಕೊಂಡು ಹೆಣದತ್ತ ದಿಟ್ಟಿಸಿ ನೋಡಿದಳು, ಹಾಗಾಗಿಯಾದರೂ "ಅವರಿಗಾಗಿ" ತನ್ನಲ್ಲಿ ಮರುಕ ಹುಟ್ಟಬಹುದೇನೋ ಎಂಬ ಭಾವನೆಯಿಂದ.

ಆದರೆ ಹತ್ತಿರವಿದ್ದಾಗಲೂ ಅವನು ಯಾವಾಗಲೂ ಅವಳಿಂದ ದೂರವೇ ಉಳಿದಿದ್ದ. ಒಮ್ಮೆ ಮಾತ್ರ ಅವರು ಒಂದಾಗಿದ್ದರು - ಅವರು ಮದುವೆಯಾದ ರಾತ್ರಿ. ಅವನು ಅವಳಿಂದ ವಿಮುಖನಾಗಿದ್ದ. ಶಾಲೆಯಲ್ಲಿ ಮದರ್ ಸುಪೀರಿಯರ್ ಅವರು ಹುಡುಗಿಯರು ಸನ್ಯಾಸಿನಿಯರಂತಿರಬೇಕೆಂದು ಹೇಳಿದಂತೆಯೇ ತಾನಂದು ಸನ್ಯಾಸಿನಿಯಂತೆನಿಸಿತ್ತವಳಿಗೆ.

ಬೆನ್ನಮೇಲೆ ಅತ್ತೆಯ ಕೈಯ ಭಾರ ತಾಳಲಾರದೆ ಅವಳು ಕೋಣೆಯಿಂದ ಹೊರನಡೆದಳು. ಸೊಸೆಗೆ ಮೊದಲೇ ಅವಳ ಅತ್ತೆ ಹಾಲಿನತ್ತ ನಡೆದರು. ಅಡಿಗೆ ಮನೆಯಲ್ಲಿದ್ದ ಬಚ್ಚಲಿನತ್ತ ಸಾವಿತ್ರಿ ನಡೆದಳು. ಅಲ್ಲೇ ಕಲ್ಲ ಮೇಲೆ ಅವಳು ತನ್ನ ಎಣ್ಣೆ, ಸಾಬೂನುಗಳನ್ನಿಟ್ಟಿದ್ದಳು. ಮನೆಯ ಹೆಣ್ಣು ಮಕ್ಕಳಿಗೆಲ್ಲ ಅದೇ ಸ್ನಾನದ ಮನೆಯಾಗಿತ್ತು.

ಕತ್ತಲಲ್ಲಿ ಅವಳು ತಡಕಿದಳು. ಕಲ್ಲುಗಳ ಮೇಲೆ ಸಣ್ಣ ಕಿಟಕಿ ತೆರೆದು, ತನ್ನ ತಂದೆಯ ಮನೆಯಿಂದ ತಂದಿದ್ದ ದುಂಡು ಜಪಾನೀ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡಳು. ಮಾವನ ಮನೆಯಲ್ಲಿ ಇದ್ದದ್ದೇ ಒಂದು ಕನ್ನಡಿ. ಅದು ಕೂಡ ಮಾವನ ಕೋಣೆಯಲ್ಲಿರುತ್ತಿತ್ತು. ಹಜಾಮ ಬಂದಾಗ ಆ ಹಿರಿಯರು ಮುಖ ನೋಡಿಕೊಳ್ಳಲು ಉಪಯೋಗಿಸುತ್ತಿದ್ದ ಕನ್ನಡಿ ಯದು. ತನ್ನ ಸಣ್ಣ ವಯಸ್ಸಿನಲ್ಲಿ ಈ ದುಂಡು ಕನ್ನಡಿಯಲ್ಲಿ ತನ್ನನ್ನು ಸ್ಕೂಲ್ ಯೂನಿಫಾರಂ ನಲ್ಲಿ ನೋಡಿಕೊಂಡು ಕೇಕೆ ಹಾಕಿ ನಕ್ಕಿದ್ದು ಅವಳಿಗೆ ನೆನಪಾಯಿತು; ಆ ನಂತರ ಮಹಾರಾಣಿ ಗಾಯಿತ್ರಿದೇವಿ ಶಾಲೆಯಲ್ಲಿ ಓದುತ್ತಿದ್ದಾಗ ಕುರ್ತಾ ಪೈಜಾಮ ಹಾಕಿಕೊಂಡು ಕನ್ನಡಿಯಲ್ಲಿ ನೋಡಿಕೊಂಡು ಮುಸಿನಕ್ಕಿದ್ದಳು. ಆನಂತರ "ಚಿತ್ರಮಾಲ"ದಲ್ಲಿ ಸಿನಿತಾರೆ ರೇಖಾ ರಾಜ್ ಬಬ್ಬರ್‌ನೊಂದಿಗೆ ಕಣ್ಣಾ ಮುಚ್ಚಾಲೆ ಆಡಿದಾಗ ಕಾಣುವಂತೆ ತಾನೂ ಕಾಣುತ್ತೇನೆಯೇ ಎಂದು ಪರೀಕ್ಷಿಸಲು ಮಿರ್ಜಾ ಇಸ್ಮೈಲ್ ರಸ್ತೆಯಲ್ಲಿ ಕೊಂಡುಕೊಂಡ ಲಿಪ್‌ಸ್ಟಿಕ್ಕನ್ನು ದಪ್ಪಗೆ ಹಚ್ಚಿಕೊಂಡು ಇದೇ ಕನ್ನಡಿಯಲ್ಲಿ ನೋಡಿಕೊಂಡಿದ್ದಳು.

ಅವಳು ಬೆತ್ತದ ಮೂಡೆಯ ಮೇಲೆ ಕುಳಿತುಕೊಂಡಳು; ತನ್ನ ಕೈಯಲ್ಲಿ ಕೈ ಹಾಕಿಕೊಂಡು ತಲೆಯನ್ನು ಬಾಗಿಸಿಕೊಂಡಳು. ಹಾಗಾದರೂ ಕಣ್ಣೀರು ಬರುವುದೇನೋ ಎಂದು ಪ್ರಯತ್ನಪಟ್ಟಳು. "ಸಾವಿತ್ರಿ !" ಅತ್ತೆಯ ದನಿ ಕೇಳಿಸಿತು.

ಸೊಸೆ ಉತ್ತರಿಸಲಿಲ್ಲ. ಸೀರೆಯ ತುದಿಯನ್ನು ಕಣ್ಣವರೆಗೆ ಎಳೆದುಕೊಂಡು, ಅಳುವೇನಾದರೂ ಬಂದರೆ ಯಾರಿಗೂ ಕೇಳದಿರಲೆಂದು ಅದನ್ನು ಬಾಯಿಗೆ ತುರುಕಿಕೊಂಡಳು.

"ಮಗಳೇ," ಅವಳ ಅತ್ತೆ ಹೇಳಿದರು. "ನೀನು ನಿಜವಾಗಿಯೂ ಪುಣ್ಯವಂತೆ. ದೇವತೆಗಳು "ಸತಿ"ಯಾಗಲಿಕ್ಕೆ ನಿನ್ನನ್ನು ಕರೀತಿದ್ದಾರೆ. ನನ್ನ ಮಗನೊಂದಿಗೆ ಮದುವೆಯಾದಾಗ ಹಾಕಿಕೊಂಡು ಬಂದ ನಿನ್ನ ಆ ಬಟ್ಟೆಗಳನ್ನು ತಂದಿದ್ದೇನೆ." ಅವಳ ಗಡಸು ರೈತದನಿ ಮೃದುವಾಗಿತ್ತು.

ಎದುರಿನ ಕೋಣೆಯಿಂದ ಬಂದ ಅತ್ತೆಯ ಮಾತಿನೊಂದಿಗೇ ಹೆಣದ ಕಡೆಯಿಂದ ಸಾವಿನ ನೆರಳು ತನ್ನತ್ತ ಹರಡುತ್ತಿದೆಯೆನ್ನಿಸಿತು ಸಾವಿತ್ರಿಗೆ. ಬೆಕ್ಕು ಹತ್ತಿರ ಬರುವುದು ಕಂಡಾಗ ಪಾರಿವಾಳ ಕಣ್ಣು ಮುಚ್ಚಿಕೊಳ್ಳುವಂತೆ ಅವಳು ಕಣ್ಣು ಮುಚ್ಚಿದಳು.

"ಬಾ ನಮ್ಮ ಪುಣ್ಯವಂತೆ ಸಾವಿತ್ರಿ.."

ಮುದಿ ಹೆಂಗಸಿನತ್ತ ತನ್ನ ಉರಿಯುವ ಮುಖವನ್ನು "ಇಲ್ಲ"ವೆಂದು ಆಡಿಸಲು ಸಾವಿತ್ರಿ ಅವರತ್ತ ತಿರುಗಿದಳು.

"ದೇವಿ... ಬಾ. ತಯಾರಾಗು" ಅತ್ತೆ ಆಗ್ರಹಿಸಿದರು. ಅತ್ತೆ ತನ್ನನ್ನು ಉಬ್ಬಿಸುತ್ತಿದ್ದಾರೆಂದು ಅರಿತುಕೊಂಡ ಸೊಸೆ ಬೇರೆಡೆ ಮುಖ ತಿರುಗಿಸಿದಳು.

"ತನ್ನ ಗಂಡನನ್ನು ಕರೆತರಲು ಸಾವಿತ್ರಿ ಯಮನ ಹತ್ತಿರ ಹೋದಳು," ಅತ್ತೆ ಮುಂದುವರೆಸಿದರು. "ನೀನು ಅವಳ ಅವತಾರ, ಅದಕ್ಕೇ ಅವರು ನಿನಗೆ ಆ ಹೆಸರನ್ನು ಕೊಟ್ಟಿದ್ದಾರೆ."

ಸೊಸೆ ತಲೆಯಾಡಿಸಿದಳು. ಅವಳ ಕೋಮಲ ಮುಖ ಗಂಭೀರವಾಯಿತು.

"ಅಚ್ಛಾ, ನಾನು ಮನೆಯ ಯಜಮಾನನನ್ನು ಕರೆಯುತ್ತೇನೆ." ಅತ್ತೆ

**ಮುಲ್ಕರಾಜ್ ಆನಂದ್**

ಹೇಳಿದರು. ''ಅವರಿಗೆ ಶಾಸ್ತ್ರ ಗೊತ್ತು.'' ಮತ್ತವರು ಗಂಡನನ್ನು ಕರೆತರಲು ಹೋದರು.

ಕೋಣೆಯ ಕತ್ತಲು ತನ್ನ ಕೊನೆ ತರುವುದು ಖಚಿತವೆಂದು ಅವಳಿಗೆ ಅನ್ನಿಸಿತು.

ಕಿಕ್ಕಿರಿದ ಕೋಣೆಯಿಂದ ಈಚೆ ಬಂದ ಮೇಲೆ ಹೊರಗೆ ಹೊಲಗಳತ್ತ ನಡೆದು ಬಿಡೋಣವೆಂದುಕೊಂಡಳು ಸಾವಿತ್ರಿ. ಆದರೆ ಈಗ ದಾರಿಯೇ ಇಲ್ಲವೆನಿಸಿತವಳಿಗೆ. ಈ ಹಳ್ಳಿ ಗಮಾರನೊಂದಿಗೆ ತನಗೆ ಮದುವೆ ನಿಶ್ಚಯವಾಗಿಯೂ ಬೇಡವೆಂದು ಅವಳು ಹೇಳಿದ್ದಳು. ಅವನು ಡಾಕ್ಟರನಾಗುವನೆಂದು ತಂದೆ ಅವಳಿಗೆ ಹೇಳಿದ್ದರು. ಅವಳು ಅತ್ತಿದ್ದಳು. ಆದರೂ ತನ್ನ ಹಣೆಬರಹವನ್ನು ಒಪ್ಪಿಕೊಂಡು ಸದ್ಯದಲ್ಲೇ ಅವನು ಡಾಕ್ಟರನಾಗಬಹುದೆಂದೂ ತಾನು ತನ್ನ ಶಾಲೆಯ ಅನೇಕ ಕ್ರಿಶ್ಚಿಯನ್ ಹುಡುಗಿಯರಂತೆ ದಾದಿ ಆಗುವೆನೆಂದೂ ಅವಳು ಅಂದುಕೊಂಡಿದ್ದಳು. ಆನಂತರ ಅವಳು ಅವನೊಂದಿಗೆ ಯಾವುದಾದರೂ ದೊಡ್ಡ ಪಟ್ಟಣಕ್ಕೆ ಹೋಗುವುದೆಂದುಕೊಂಡಿದ್ದಳು. ಸ್ವಲ್ಪ ತೊಂದರೆಗಳೇನೋ ಇದ್ದವು, ನಿಜ. ಆದರೆ ಪತಿಯ ಚಿತೆಯ ಮೇಲೆ ತನ್ನ ಜೀವನ ಕೊನೆಗೊಳ್ಳುವುದೆಂದು ಅವಳು ಎಣಿಸಿರಲಿಲ್ಲ. ಮನೆಯಲ್ಲಿ ಒಬ್ಬಳೇ ಹಾಲಿನಲ್ಲಿ ಕುಳಿತು ''ಸ್ಟಾರ್‌ಡಸ್ಟ್'' ಓದುತ್ತಿದ್ದಾಗ, ಸತ್ಯ ಹುಷಾರಾಗಿ ಆಸ್ಪತ್ರೆಯಿಂದ ಹಿಂತಿರುಗುವನೆಂದು ಅವಳು ಆಸೆಯಿಟ್ಟುಕೊಂಡಿದ್ದಳು. ಡಾ. ಜಯಚಂದ್ ಹೇಳಿದ್ದರು: ''ಮೆಡಿಕಲ್ ಕಾಲೇಜಿಗೆ ಸೇರಲು ಪರೀಕ್ಷೆ ಪಾಸಾಗಲಿಲ್ಲವೆಂದು ಅವನಿಗೆ ಬೇಜಾರಾಗಿದೆ. ಅದನ್ನು ಅವನು ಮನಸ್ಸಿಗೆ ಹಚ್ಚಿಕೊಂಡಿದ್ದಾನೆ.''

ಬಹುಶಃ ಅವನಿಗೂ ಈ ಮನೆಯ ಕತ್ತಲೆ ಕೋಣೆಗಳಿಂದ, ಈ ಸೆಗಣಿಯ ತೊಪ್ಪೆಗಳಿಂದ, ಮರಳು ಗಲೀಜುಗಳಿಂದ ದೂರ ಹೋಗಬೇಕೆಂದಿದ್ದಿತ್ತೋ ಏನೋ. ಅವನು ಯಾವತ್ತೂ ಅವಳ ಮಂಚದತ್ತ ತಿರುಗಿರಲಿಲ್ಲ. ಅವಳನ್ನು ಕಂಡರೆ ಮುಖ ತಿರುಗಿಸುತ್ತಿದ್ದ. ''ಚಿತ್ರಹಾರ್''ನಲ್ಲಿ ನಾಯಕ ನಾಯಕಿಯನ್ನು ಪ್ರೀತಿಸುವಂತೆ ಅವನೂ ತನ್ನನ್ನು ಪ್ರೀತಿಸಬೇಕೆಂದು ಅವಳು ಬಹುವಾಗಿ ಆಸೆಪಟ್ಟಿದ್ದಳು.

ತನ್ನ ಅಹಿತಕರ ಮದುವೆಯಿಂದಾಗಿ ಅವಳ ಮುಖ ಮರಗಟ್ಟಿಹೋಗಿತ್ತು. ಶಾಲೆಯಲ್ಲಿ ಟೀಚರುಗಳಿಂದೆಲ್ಲ ''ಚುರುಕು ಹುಡುಗಿ'' ಎನಿಸಿಕೊಂಡಿದ್ದ ಅವಳು ಇನ್ನೂ ಆಸೆಯಿಟ್ಟುಕೊಂಡಿದ್ದಳು. ಅವಳು ಮೊನ್ನೆ ಆಸ್ಪತ್ರೆಗೆ ಹೋಗಿದ್ದಾಗ ಏನನ್ನಾದರೂ ಲಘುವಾಗಿ ಮಾತನಾಡಿ ಅವನನ್ನು ನಗಿಸಬೇಕೆಂದಿದ್ದಳು. ಅವಳು ಡಾ. ಜಯಚಂದ್‌ರೊಂದಿಗೆ ಬಂದಾಗ, ರಾಮಪುರದ ಹತ್ತಿರದ ಹಳ್ಳಿಗರು ತನ್ನನ್ನು ಸಿನಿಮಾ ನಟಿಯೆಂದುಕೊಂಡು ಸುತ್ತುವರೆದಿದ್ದರೆಂದು ಹೇಳಬೇಕೆಂದಿದ್ದಳು. ಆದರೆ ಅವನು ಸತ್ತುಹೋಗಿದ್ದರಿಂದ ಅವಳು ಏನೂ ಹೇಳಲಾಗಲಿಲ್ಲ. ಮತ್ತೀಗ ಅವಳು ತನ್ನ ಪತಿಯ ಚಿತೆಯೇರಬೇಕೆಂದು ಅವರೆಲ್ಲ ಹೇಳುತ್ತಿದ್ದರು. ''ಅಯ್ಯೋ, ಯಾಕಿಷ್ಟೆಲ್ಲಾ ಕಷ್ಟ?'' ಬಾಗಿದ ಮುಖ ಹೊತ್ತು ಅವಳು ತನಗೆ ತಾನೇ ಕೇಳಿಕೊಂಡಳು.

ಅವಳ ಅತ್ತೆ ಹಿಂತಿರುಗಿ ಬಂದು ಹೇಳಿದರು : ''ನಿನ್ನ ಮಾವ ಮಾತ್ರವಲ್ಲ, ಸರಪಂಚರು, ಊರಿನ ಹಿರಿಯರು ಎಲ್ಲರೂ ಹೇಳುತ್ತಾರೆ - ನೀನು ಪುಣ್ಯವಂತೆ, ಸಾವಿತ್ರಿ... ದುರ್ಗಾಮಾತೆ ಸ್ಮಶಾನದಲ್ಲಿ ತಾನು ಶಿವನನ್ನು ಕೂಡಿದಂತೆ ನೀನು ನಿನ್ನ ಗಂಡನನ್ನು ಕೂಡಬೇಕೆಂದು ಅವಳು ನಿನ್ನನ್ನು ಕರೆದಿದ್ದಾಳೆ....''

''ನಿನಗೆ ಸಾವಿತ್ರಿಯೆಂದು ಹೆಸರಿಟ್ಟರು'' ಮಾವ ಹೇಳಿದರು. ''ನಾವು ನಮ್ಮ ಮಗನಿಗೆ ಸತ್ಯ ಎಂದು ಹೆಸರಿಟ್ಟೆವು. ನಿಮ್ಮಿಬ್ಬರ ಜಾತಕ ಕೂಡುವುದೆಂದು ಜ್ಯೋತಿಷಿಗಳಿಗೆ ತಿಳಿದಿತ್ತು... ಸತ್ಯಯುಗದ ಸಾವಿತ್ರಿ ಯಮನನ್ನು ಎದುರಿಸಿ ಸತ್ಯವಾನನನ್ನು ವಾಪಸು ಕರೆತಂದಳು ಎಂದಿದ್ದರು. ನೀನು ಸತ್ಯನೊಂದಿಗೆ ಹೋಗಿ ಅವನ ಆತ್ಮವನ್ನು ವಾಪಸ್ಸು ಕರೆದುಕೊಂಡು ಬಾ. ನಿನ್ನ ಹೊಸ ಅವತಾರದಲ್ಲಿ ನೀನು ಸಾವನ್ನೆದುರಿಸಿದ ದೇವಿಯಾಗುವೆ...''

''ಹಾಂ ಬೀಬಿ'' ಸರಪಂಚರು ಹೇಳಿದರು. ''ಹಾಂ'' ಅವರು ಕೆಮ್ಮಿದರು.

''ಹಾಂ... ಹಾಂ... ಹಾಂ... ನಮ್ಮ ಹಳ್ಳಿಗೇ ಮೋಕ್ಷ ಸಿಗುವುದು. ಹತ್ತು ವರ್ಷದ ಹಿಂದೆ ನಮ್ಮೂರಿನಿಂದ ಸತಿ ಹೋದಾಗ, ಅದರ ನಂತರ ಮೂರು ಒಳ್ಳೆ ಫಸಲು ಬಂದಿತ್ತು...''

''ಹಿರಿಯರ ಮಾತು ಕೇಳು,'' ಅವಳ ಅತ್ತೆ ಹೇಳಿದರು. ''ಅವರೆಲ್ಲ ತಿಳಿದವರು. ನಮ್ಮ ಈಗಿನ ಹುಡುಗಿಯರಿಗೆ ಧರ್ಮ ಎನ್ನುವುದು ಇಲ್ಲ, ಬರೀ ಸಿನಿಮಾ ಮತ್ತು ಸಿಗರೇಟು... ನೀನು ದೇವಿ, ಸಾವಿತ್ರಿ,...''

ಸಾವಿತ್ರಿ ತಲೆ ಬಾಗಿಸಿಕೊಂಡೇ ಇದ್ದಳು. ಅವಳ ದೇಹ ಇನ್ನೂ ಮರಗಟ್ಟಿತು. ತನ್ನ ಕೊನೆ ಬಂದಿದೆಯೆಂದು ಅವಳಿಗೆ ತಿಳಿಯಿತು. ಶಾಲೆಯಲ್ಲಿ ಕ್ರಿಶ್ಚಿಯನ್ ಸನ್ಯಾಸಿನಿಯರು ಹೇಳಿದ್ದ, ಯೇಸುಕ್ರಿಸ್ತನು ಎಲ್ಲಾ ಪಾಪಿಗಳಿಗೆ ಮಾತುಕೊಟ್ಟಿದ್ದ, ಅಂತಿಮ ದಿನವನ್ನು ಅವಳು ಎದುರಿಸಬೇಕು.

ಅವಳಿಗೆ ತಿಳಿಯದ ದೇವರಿಗೆ, ಅವಳೊಳಗೆಲ್ಲಿಂದಲೋ ಒಂದು ಕೂಗು ಎದ್ದಿತು; ತನ್ನ ಹೆಸರಿಗೆ ತಕ್ಕನಾಗಬೇಕೆಂಬ ಎಲ್ಲರ ಆಣತಿಯ ವಿರುದ್ಧವೋ ಎಂಬಂತೆ. ''ಹೆಸರಿಟ್ಟಿದ್ದ ಜ್ಯೋತಿಷಿ ನನ್ನನ್ನು ಸಾಯಿಸಿಬಿಟ್ಟಿದ್ದ,'' ಅವಳ ಒಳದನಿ ನಿಟ್ಟುಸಿರಿಟ್ಟಿತು. ಅವಳ ಮೌನ ಭಾರವೆನಿಸಿತು; ಅದು ಹಿರಿಯರ ದನಿಯಿಂದ ತುಂಬಿದ ಭಾರ ಎನಿಸಿತು.

ಬಹಳ ಹಿಂದೆ ಎಲ್ಲೋ ಓದಿದ, ನೆನಪಿನಾಳದಲ್ಲಿ ದಟ್ಟವಾಗಿ ಉಳಿದಿದ್ದ ಕಥೆಯೊಂದರಲ್ಲಿ, ವಕೀಲರ ಮಗ - ಕವಿಯೊಬ್ಬ ವಿಧವೆಯೊಬ್ಬಳನ್ನು ಸತಿಯ ಚಿತೆಯ ಮೇಲಿಂದ ರಕ್ಷಿಸಿ ಅವಳನ್ನು ಮದುವೆ ಮಾಡಿಕೊಂಡ ನೆನಪು ಮೂಡಿ, ಇಷ್ಟವರೆಗೆ ಸುಮ್ಮನಿದ್ದವಳು ''ಇಲ್ಲ, ಇಲ್ಲ, ಇಲ್ಲ'' ಎಂದು ಕೂಗಿಕೊಂಡಳು.

''ಬಾ'' ಅವಳ ಅತ್ತೆ ಹೇಳಿದರು. ''ಸೂರ್ಯ ಹುಟ್ಟಲಿದ್ದಾನೆ. ಸದ್ಯದಲ್ಲೇ ಸತ್ಯನ ದೇಹವನ್ನು ಚಿತೆಗೆ ಒಯ್ಯಬೇಕು. ಪುರೋಹಿತರು ಪ್ರಾರ್ಥನೆ ಮುಗಿಸಿದ್ದಾರೆ.''

ಸಾವಿತ್ರಿ ಅಲುಗಾಡಲಿಲ್ಲ. ತಾನು ಕುಳಿತುಕೊಂಡೇ ಇದ್ದರೆ ಅವಳು ಸತಿಯಾಗಬೇಕೆಂದು ಯಾರೂ ಬಲವಂತ ಮಾಡಲಾರರೋ ಎಂಬಂತೆ.

ಅವಳ ಅತ್ತೆ ಬಾಗಿಲಿನತ್ತ ಹೋಗಿ ಕೂಗಿದರು, ''ಗಂಗಾ, ಮುಕುಂದ್, ರಾಣಿ.'' ಮೂರು ಜನ ಹೆಂಗಸರು ಬಂದರು.

''ಅಕ್ಕಂದಿರೇ, ಅವಳಿಗೆ ಸ್ನಾನ ಮಾಡಿಸಿ. ಅವಳು ಪುಣ್ಯವಂತೆ. ಅವಳು ಸತಿಯಾಗಲಿರುವಳು.'' ಅವಳನ್ನು ಪವಿತ್ರಗೊಳಿಸಿದ ನಂತರ ಅವರು ಅವಳಿಗೆ ಕೆಂಪು ಸೀರೆ ಉಡಿಸಿದರು. ಪತ್ರಕರ್ತ ದಯಾರಾಮನ್ ಮನೆಯ ಬಳಿಯಿಂದ ಸ್ಮಶಾನಕ್ಕೆ ಗಂಡಸರು ಮೃತದೇಹವನ್ನು ಹೊತ್ತುಕೊಂಡು ಹೋದರು. ಶಾಹ್‌ಪುರದ ರಾಜನ ಪಲ್ಲಕ್ಕಿ ಹೊರುವವರಾಗಿದ್ದ ನಾಲ್ಕು ಜನ ಕೃಷಿ ಕಾರ್ಮಿಕರು ಸತ್ಯನ ದೇಹವನ್ನು ಹೊತ್ತುಕೊಂಡು ಹೋದರು. ಅವರ ಹಿಂದೆ ಊರಿನ ಸರಪಂಚರು, ಹಿರಿಯರು, ಸತ್ಯನ ತಂದೆ ದಯಾರಾಮ, ಊರಿನ ಗಂಡಸರು, ಯುವಕರು, ಚಿಕ್ಕ ಹುಡುಗರು ನಡೆದರು.

ಆನಂತರ ವಧುವಿನಂತೆ ಅಲಂಕರಿಸಲ್ಪಟ್ಟ ಸಾವಿತ್ರಿ, ತಲೆಯ ಮೇಲೆ ಸೆರಗು ಹೊತ್ತು ನಡೆದಳು. ಅವಳ ಎಡಗೈಯನ್ನು ಅವಳ ಮೈದುನ ರಾಜೇಂದರ್ ಹಿಡಿದಿದ್ದ. ಅವಳ ಕಾಲುಗಳು ಕುಸಿಯಲಾರಂಭಿಸಿದವು. ಅವಳ ತಲೆ ಸುತ್ತಲಾರಂಭಿಸಿತು. ಕೆಳಗೆ ಕುಸಿಯಬಾರದೆಂಬ ಒಂದೇ ದೃಢಚಿತ್ತ ಮಾತ್ರ ಅವಳು ಕೆಳಗೆ ಬೀಳದಂತೆ ತಡೆದು, ಅವಳನ್ನು ಯಾಂತ್ರಿಕವಾಗಿ ನಡೆಸಿತು. ''ಓ ಕೃಷ್ಣಾ ಸಾವಿನಲ್ಲೂ, ಬದುಕಿನಲ್ಲೂ ನಾನು ನಿನ್ನವಳು''. ಮೀರಾಬಾಯಿಯ ಹಾಡನ್ನು ಹಾಡುತ್ತಾ ನಡೆದ ಅವಳ ಅತ್ತೆಯ ಹಿಂದೆ ಹೆಂಗಸರ ಗುಂಪೊಂದು ಹಿಂಬಾಲಿಸಿತು.

ಚಟ್ಟ ಹೊತ್ತವರು ಸತ್ಯನ ದೇಹವನ್ನು ಚಿತೆಯ ಮೇಲಿಟ್ಟರು.

''ರಾಮ್ ನಾಮ್ ಸತ್ಯ ಹೈ'' ಪಿಸುಮಾತುಗಳನ್ನು ಸೀಳಿ ಗಂಡಸರ ದನಿ ಏರಿತು.

''ಕೃಷ್ಣ ಸಾವಿನಲ್ಲೂ, ಬದುಕಿನಲ್ಲೂ ನಾನು ನಿನ್ನವಳು.'' ಹೆಂಗಸರ ದನಿಗಳು ಉಚ್ಚರಿಸಿದವು.

ದೇಹವನ್ನು ಚಿತೆಯ ಮೇಲಿಟ್ಟನಂತರ ಸಾವಿತ್ರಿಯನ್ನು ಪೀಠದ ಮೇಲೆ ಕರೆದುಕೊಂಡು ಹೋಗಲಾಯಿತು. ಅವಳು ಕಾಲು ಮಡಿಸಿ ಚಕ್ಕಮಕ್ಕಳ ಹಾಕಿ ಕುಳಿತ ನಂತರ, ಅವಳ ಮಾವ ಸತ್ಯನ ತಲೆಯನ್ನು ಅವಳ ತೊಡೆಯ ಮೇಲಿಟ್ಟರು. ಅವಳು ಸೆರಗನ್ನು ಸರಿಸಿ ಮುಖ ತೋರಿಸಿದಳಾದರೂ ಅವಳ ಕತ್ತು ಮಾತ್ರ ಬಾಗಿಕೊಂಡೇ ಇತ್ತು. ಕಟ್ಟಿಗೆಯ ಮೇಲೆ ಒಂದಿಷ್ಟು ಸೀಮೆಯೆಣ್ಣೆ ಸುರಿಯಲಾಯಿತು. ಅವಳ ಸಣ್ಣ ಮೈದುನನ ಕೈಗೆ ಒಂದು ಕೊಳ್ಳಿಯನ್ನು ಇತ್ತು ಬೆಂಕಿ ಹಚ್ಚಲು ಹೇಳಲಾಯಿತು.

ಹುಡುಗ ತಡವರಿಸಿದ. ಮಾವ ಮುಂದೆ ಬಂದು ಚಿತೆಗೆ ಬೆಂಕಿಯಿಡಲು ಸಹಾಯ ಮಾಡಿದ. ಎಲ್ಲೆಡೆ ಕೂಗು ಕೇಳಿಸಿತು. ''ಸತೀ ಮಾತಾ ಕೀ ಜಯ್.'' ತನ್ನ ಬಟ್ಟೆಗೆ ಬೆಂಕಿ ತಗುಲಿದಾಗ ಸಾವಿತ್ರಿ ಜೋರಾಗಿ ಚೀರಿಕೊಂಡಳು. ಏಳಲೇನೋ ಎಂಬಂತೆ ಅವಳು ಅಲುಗಾಡಿದಳು.

ಮಾವ ಪಲ್ಲಕ್ಕಿ ಹೊತ್ತವರಿಗೆ ಸನ್ನೆ ಮಾಡಿ ಅವಳು ತನ್ನ ಜಾಗದಿಂದ ಕದಲದಂತೆ ಮಾಡಲು ಸೂಚನೆಯಿತ್ತ. ಅವಳು ಏಳದಂತೆ ಅವರು ದಿಂಬಿಯೊಂದನ್ನು ಅವಳತ್ತ ನೂಕಿದರು. ದೊಡ್ಡ ದಿಂಬಿಗಳಿಗಿನ್ನೂ ಬೆಂಕಿ ಹೊತ್ತಿಕೊಂಡಿರಲಿಲ್ಲ. ಸಾವಿತ್ರಿ ಮತ್ತೊಮ್ಮೆ ಚೀರಿದಳು. ಮತ್ತೊಂದು ಚೀರಾಟ. ಈಗ ಬೆಂಕಿ ನಾಲಿಗೆ ಚಾಚಲಾರಂಭಿಸಿತು. ಅವಳ ತಲೆಯ ಸುತ್ತಲೂ ಹೊಗೆ ಕವಿದುಕೊಂಡಿತು. ಅವಳ ಇಕ್ಕೆಲಗಳಲ್ಲೂ ಬೆಂಕಿಯ ಜ್ವಾಲೆ ಏರಿತು. ಮಾವ ಮಗನನ್ನು ಹಿಂದಕ್ಕೆಳೆದುಕೊಂಡರು.

''ಸಾವಿನಲ್ಲೂ, ಬದುಕಿನಲ್ಲೂ ನಾನು ನಿನ್ನವಳು.'' ಹೆಂಗಸರು ಹಾಡಿದರು. ''ಸತೀ ಮಾತಾ ಕೀ ಜಯ್.'' ಜ್ವಾಲೆಯನ್ನೂ ಮೀರಿ ಘೋಷಣೆಗಳು ಆಕಾಶವನ್ನು ಸೀಳಿಕೊಂಡು ಮೇಲೆದ್ದವು.

ಅನುವಾದ : **ಸುಚೇತ ಪೈ**
ಆಂಗ್ಲ ವಿಭಾಗ, ಸಂತ ಜೋಸೆಫರ ಕಾಲೇಜು, ಬೆಂಗಳೂರು – ೫೬೦ ೦೨೭

# ಸುಮ್ಮನಿದ್ದ ಬುದ್ಧ !

ನಾವೂ ಕೇಳಿದೆವು ಕೆಲವು ಮಂದಿ ಸಿದ್ಧಾರ್ಥನ ಪ್ರತಿಮೆಗಳನ್ನು ಒಡೆದು ಚೂರು ಮಾಡಿದ ಕತೆಗಳನ್ನು ! ದುಃಖವಾಯಿತು; ಸಹಿಸಿಕೊಂಡೆವು.

ಇದೇ ಹಿನ್ನೆಲೆಯಲ್ಲಿ....

ಇಂಥದ್ದೇ ಬೇಸಿಗೆಯ ಒಂದು ಸುಂದರ ಸಂಜೆ....

ಪಿನಾಕಿನೀ ನದಿ ತಟದ ಹೊಂಗೇ ಮರದ ನೆರಳಿನಲ್ಲಿ ನನ್ನನ್ನು ಕೂರಿಸಿಕೊಂಡು ನನ್ನ ತಂದೆ ಹೇಳಿದ್ದ ಬುದ್ಧನದೇ ಕತೆಯೊಂದು ಆಕಸ್ಮಿಕವಾಗಿ ನೆನಪಾಯಿತು. ಅದನ್ನು ನಿಮಗೀಗ ಹೇಳುತ್ತೇನೆ. ಬುದ್ಧತೇಜದ ಈ ಹೊಸ ಹೊಂಗಿರಣ ಪ್ರಜ್ಞಾವಂತ ಮನಸ್ಸುಗಳಿಗೆ ಆಪ್ಯಾಯಮಾನ.

ಒಂದು ಹುಣ್ಣಿಮೆಯ ರಾತ್ರಿ, ಬುದ್ಧ ಅವನ ಪಾಡಿಗೆ ಅವನು ಕಣ್ಮುಚ್ಚಿ ಧ್ಯಾನಾಸಕ್ತನಾಗಿದ್ದ. ಬುದ್ಧನಿಗೆ ಮೌನ ಯಾವಾಗಲೂ ಪ್ರಿಯವಾದದ್ದು. ಮೌನದಿಂದ ಮನಸ್ಸು ಬಲಗೊಳ್ಳುತ್ತದೆ ಮತ್ತು ತಮ್ಮಷ್ಟಕ್ಕೆ ಮೌನವಾಗಿರುವವರಿಂದ ಮನಸ್ತಾಪಗಳಿಗೆ ಅವಕಾಶವಿಲ್ಲ. ಇಷ್ಟರಮೇಲೆ ಮಾತೇ ಯಾವಾಗಲೂ ಮೌಲ್ಯವೂ ಅಲ್ಲ. ಮಾತನ್ನು ಮೀರಿದ ಸತ್ಯಗಳು ಅದೆಷ್ಟೋ ! ಇದೆಲ್ಲಾ ಬುದ್ಧನಿಗೆ ಚೆನ್ನಾಗಿ ತಿಳಿದಿತ್ತು. ಹಾಗಾಗಿ ಅವನು ಬಹುಮಟ್ಟಿಗೆ ಏಕಾಂಗಿ ಮತ್ತು ಮೌನಿ.

ಅವತ್ತು ಕೂಡಾ ಹಾಗೆಯೇ. ಆ ನೀರವ ಸುಂದರ ರಾತ್ರಿಯಲ್ಲಿ ಬುದ್ಧ ನಿಶ್ಚಲನಾಗಿ ಧ್ಯಾನ ನಿರತನಾಗಿದ್ದ. ಬೆಳದಿಂಗಳು ತೋಯಿಸಿದ ಆ ಶಾಂತ ಗಂಭೀರ ಮೂರ್ತಿ ಮಾಟವಾದೊಂದು ಅಮೃತಶಿಲೆಯ ವಿಗ್ರಹದಂತೆ ಕಂಗೊಳಿಸುತ್ತಿತ್ತು. ಬೆಳದಿಂಗಳು ಬುದ್ಧನೋ ಬುದ್ಧನೇ ಬೆಳದಿಂಗಳೋ ಎಂದು ಭ್ರಮೆ ಹುಟ್ಟಿಸುತ್ತಿತ್ತು. ಆಗ ಅಲ್ಲಿಗೆ ಒಬ್ಬ ವ್ಯಕ್ತಿ ಬಂದ. ಆತನಿಗೆ ಮೊದಲಿನಿಂದಲೂ ಬುದ್ಧನಲ್ಲಿ, ಆತನ ಉಪದೇಶದಲ್ಲಿ, ಗೌರವವಿಲ್ಲ. ಇದೀಗ ಆತನನ್ನು ನಿಂದಿಸಲು ತಕ್ಕ ಸಮಯ ಅನ್ನಿಸಿತು. ನಿಂದಿಸತೊಡಗಿದ. ''ಕೀರ್ತಿಗಾಗಿ ನೀನು ಹೀಗೆಲ್ಲಾ ಮಾಡುತ್ತಿಯೆ'' ಅಂದ. ''ಜನ ನಿನ್ನನ್ನು ಮಹಾತ್ಮನೆಂದು ನಂಬಿ ಮೋಸಹೋಗಿದ್ದಾರೆ.... ನಿಜವಾಗಿ ನೀನೊಬ್ಬ ದ್ರೋಹಿ'' ಎಂದ.



ತಾಲಿಬಾನ್ ನಾಶಗೊಳಿಸಿದ ಬುದ್ಧಶಿಲ್ಪ

ಮತ್ತೂ ಏನೆಲ್ಲಾ ಹೇಳಿದ. ಕಡೆಗೆ ಅವನಿಗೇ ಸಾಕಾಗಿ ಸುಮ್ಮನಾದ. ಮತ್ತೆ ಅಲ್ಲಿ ನೀರವತೆ ಆವರಿಸಿತು. ಶುಭ್ರ ಶೀತಲ ಚಂದ್ರಕಾಂತಿ ಹಾಲಿನ ಕೆನೆಯಂತೆ ದಟ್ಟವಾಗತೊಡಗಿತು.

ಆಗ ಬುದ್ಧ ಮೆಲ್ಲಗೆ ಕಣ್ಣು ತೆರೆದ. ತನ್ನೆದುರಿಗೆ ಕೌತುಕದಿಂದ ನಿಂತವನನ್ನು ''ಮಗೂ, ನಿನ್ನ ಮನೆಗೆ ನೆಂಟರು ಬರುತ್ತಾರೆಯೇ ?'' ಸ್ನೇಹ ತುಂಬಿದ ಮಧುರ ವಾಣಿಯಲ್ಲಿ ಪ್ರಶ್ನಿಸಿದ.

ತಾನೆಷ್ಟು ಜರೆದರೂ ತನ್ನನ್ನು ಪ್ರೀತಿಯಿಂದಲೇ ಮಾತನಾಡಿಸುವ ಬುದ್ಧನ ರೀತಿ ಆ ಮನುಷ್ಯನನ್ನು ಕರಗಿಸಿತು. ಯಾವುದಕ್ಕೆ ಯಾವ ಮಾತು ಅನ್ನಿಸಿದರೂ ''ಹೌದು. ಆಗಾಗ ನಮ್ಮ ಮನೆಗೆ ಅತಿಥಿಗಳು ಬರುತ್ತಿರುತ್ತಾರೆ'' ಎಂದು ಮಾರ್ನುಡಿದ. ಬುದ್ಧ ಪ್ರಶ್ನಿಸಿದ : ''ನೀನವರಿಗೆ ತಿಂಡಿ-ತೀರ್ಥ, ಕಾಣಿಕೆಗಳನ್ನು ಕೊಡುತ್ತೀಯಾ ?'' ಕೊಡುತ್ತೇನೆಂದ ಆ ವ್ಯಕ್ತಿ. ಗೌತಮ ಮೃದು ಮಧುರವಾಗಿ ನಗುತ್ತಾ ''ಒಂದು ವೇಳೆ ನೀನು ಕೊಟ್ಟದ್ದನ್ನೆಲ್ಲಾ ಅವರು ನಿರಾಕರಿಸಿಬಿಟ್ಟರೆ ಏನು ಮಾಡುತ್ತೀ ?'' ಎಂದು ಕೇಳಿದ. ಸ್ವಲ್ಪ ಯೋಚಿಸಿ ಆ ಮನುಷ್ಯ ಹೇಳಿದ ''ಮಾಡುವುದೇನು ? ಎಲ್ಲವನ್ನೂ ನಾನೇ ವಾಪಾಸು ಇಟ್ಟುಕೊಳ್ಳುತ್ತೇನೆ.''

''ಈಗಲೂ ಹಾಗೆಯೇ ಮಗೂ.... ಆಗಲೆಯಿಂದ ನೀನು ನನಗೆ ಕೊಡಲು ಪ್ರಯತ್ನಿಸಿದ ಭರ್ತ್ಸನೆಯ ಮಾತುಗಳಲ್ಲಿ ಒಂದೇ ಒಂದನ್ನೂ ನಾನು ತೆಗೆದುಕೊಂಡಿಲ್ಲ.'' ಇಷ್ಟು ಹೇಳಿ ಗೌತಮ ಬುದ್ಧ ಮತ್ತೆ ಕಣ್ಮುಚ್ಚಿ ಧ್ಯಾನದಲ್ಲಿ ಲೀನನಾಗಿಬಿಟ್ಟ. ಈ ಪ್ರಶಾಂತ ವರ್ತನೆಯಿಂದ ಆ ಮನುಷ್ಯನೊಳಗಿನ ಸಹೃದಯ ಕೂಡಲೇ ಎಚ್ಚೆತ್ತ. ಅವನಿಗೆ ಜ್ಞಾನೋದಯವಾಯಿತು. ಅಳುವೂ ಬಂದಿತು. ''ನನ್ನನ್ನು ಕ್ಷಮಿಸು ತಂದೆಯೇ'' ಎಂದು ಕಣ್ಣೀರು ಮಿಡಿಯುತ್ತಾ ಹೊರಟುಹೋದ. ಬುದ್ಧ ಸುಮ್ಮನಿದ್ದ. ತಿಳಿ ನಗೆಯೊಂದು ಆತನ ಕೋಮಲ ತುಟಿಯಂಚಿನಲ್ಲಿ ಮಿಂಚಿ ಮರೆಯಾಯಿತು.

ಈ ಸಂದರ್ಭದಲ್ಲಿ ಕೂಡ ಬುದ್ಧ ಹಾಗೆಯೇ ಯೋಚಿಸುತ್ತಿರಬೇಕು. ಈ ಮೂರ್ತಿ ಭಂಜಕರನ್ನು ಕಂಡು ಕರುಣೆಯಿಂದ ''ಬಂಧುಗಳೇ, ನನ್ನ ಹೊರಮೈಯನ್ನು ನೀವು ಮುರಿದುಹಾಕಿದರೇನು ? ನನ್ನ ಹೃದಯದ ಹಾಡುಗಳನ್ನು ಲಕ್ಷಾಂತರ ಜನರಿಗೆ ನಾನು ತಲುಪಿಸಿಬಿಟ್ಟಿದ್ದೇನೆ. ಕಿವಿಗೊಟ್ಟು ಕೇಳಿ ! ನಿಮ್ಮ ಕೊಡಲಿ ಮಸೆತದ ಶಬ್ದವನ್ನು ಮೀರಿ ಆ ಹಾಡುಗಳು ಅಸಂಖ್ಯ ಮನಸ್ಸುಗಳ ಮೂಲಕ ಮತ್ತೆ ಮತ್ತೆ ಅನುರಣಿತವಾಗುತ್ತಿರುವುದನ್ನು ! ನೀವಿದನ್ನು ನಿಲ್ಲಿಸಬಲ್ಲಿರಾ ?'' ಎಂದು ಒಳಗೊಳಗೇ ಮುಗುಳ್ನಗುತ್ತಿರಬೇಕು.

ಮೌನ ತಪಸ್ಸಿನಿಂದ ಮನಸ್ಸನ್ನು ಕುದುರಿಸಿಕೊಂಡಾತನಿಗೆ ಆತ್ಮಗೌರವದ ಪಾಠಗಳನ್ನು ಹೇಳಿಕೊಡಲೂ ಬೇಕೆ ?

ಭಾರತೀ ಕಾಸರಗೋಡು
೮೩, ೫ನೇ ಬಿ ಮುಖ್ಯರಸ್ತೆ, ಆರ್‌ಪಿಸಿ ಲೇ ಔಟ್
ವಿಜಯನಗರ ೨ನೇ ಹಂತ, ಬೆಂಗಳೂರು - ೪೦

**ಲೇಖಕರ ಗಮನಕ್ಕೆ**

ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದುಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.

*- ಸಂಪಾದಕ, 'ಹೊಸತು'*




ಮೂಲ : ಆಸ್ಕರ್ ವೈಲ್ಡ್

ಪ್ರತಿದಿನವೂ ಮಧ್ಯಾಹ್ನ ಸ್ಕೂಲಿನಿಂದ ಬರುವಾಗ ಮಕ್ಕಳು ಆ ರಾಕ್ಷಸನ ತೋಟದೊಳಕ್ಕೆ ಹೋಗಿ ಆಟವಾಡಿಕೊಂಡು ಬರುತ್ತಿದ್ದವು.

ದೊಡ್ಡ, ಸುಂದರ ತೋಟ; ಮೃದುವಾದ ಹಸಿರು ಹುಲ್ಲು. ಅದರ ನಡುವೆ ಅಲ್ಲಲ್ಲಿ ನಕ್ಷತ್ರಗಳಂತೆ ಮಿನುಗುವ ಚೆಲುವಾದ ಹೂವುಗಳು. ತೋಟದೊಳಗಿನ ಹನ್ನೆರಡು ನೇರಿಳೆ ಹಣ್ಣಿನ ಮರಗಳು ವಸಂತಮಾಸದಲ್ಲಿ ಕಡುಗೆಂಪಿನ ಮುತ್ತಿನ ಬಣ್ಣದ ಕೋಮಲ ಪುಷ್ಪಮಂಜರಿಯಿಂದ ತುಂಬಿ ಬಿರಿಯುತ್ತಿದ್ದವು; ಮಾಗಿಯ ಕಾಲದ ಹೊತ್ತಿಗೆ ಮರ ಗಿಡಗಳ ತುಂಬಾ ರಸಭರಿತ ಹಣ್ಣುಗಳು. ಹಕ್ಕಿಗಳು ಮರಗಳ ಮೇಲೆ ಕುಳಿತು ಹಾಡುವುವು, ಎಷ್ಟು ಸೊಗಸಾಗಿ ಹಾಡುವುವೆಂದರೆ ಮಕ್ಕಳು ಆಟವಾಡುವುದನ್ನು ನಿಲ್ಲಿಸಿ ಕಿವಿಗೊಟ್ಟು ಆಲಿಸುವುವು; ''ಆಹಾ, ಎಷ್ಟು ಮಜವಾಗಿದೆ ಅಲ್ವಾ ?'' ಎಂದು ಒಬ್ಬರಿಗೊಬ್ಬರು ಹೇಳಿಕೊಳ್ಳುವುವು.

ಒಂದು ದಿನ ರಾಕ್ಷಸ ಹಿಂತಿರುಗಿ ಬಂದ. ಅವನು ತನ್ನ ಸ್ನೇಹಿತನಾದ ಕರ್ಣವಾಳ ಪ್ರಾಂತದ ನರಭಕ್ಷಕನನ್ನು ನೋಡಲು ಹೋಗಿದ್ದವನು ಅವನ ಜತೆ ಏಳು ವರ್ಷ ಇದ್ದು ಹಿಂತಿರುಗಿದ್ದ. ಏಳು ವರ್ಷದ ಹೊತ್ತಿಗೆ ಅವನು ಸ್ನೇಹಿತನ ಜತೆ ಮಾತನಾಡುವುದೆಲ್ಲವೂ ಮುಗಿದಿತ್ತು. - ಅವನ ಮಾತೇ ಕಮ್ಮಿ ಅನ್ನಿ. ಏಳು ವರ್ಷ ಕಳೆದಾಗ ತನ್ನ ಕೋಟೆ ಮನೆಗೆ ಹಿಂತಿರುಗಲು ನಿಶ್ಚಯಿಸಿದ್ದ. ಅವನು ವಾಪಸು ಬಂದಾಗ ತೋಟದಲ್ಲಿ ಆಟವಾಡುತ್ತಿದ್ದ ಮಕ್ಕಳು ಅವನ ಕಣ್ಣಿಗೆ ಬಿದ್ದವು.

''ಏಯ್, ಅಲ್ಲಿ ಏನ್ಮಾಡ್ತಿದ್ದೀರೋ ?'' ಅಂತ ಕರ್ಕಶ ಧ್ವನಿಯಲ್ಲಿ ಕೂಗಿದಾಗ, ಮಕ್ಕಳು ಹೆದರಿ ಅಲ್ಲಿಂದ ಓಟ ಕಿತ್ತವು.

''ಇದು ನನ್ನ ತೋಟ. ನನ್ನ ಸ್ವಂತದ್ದು. ಸ್ವಂತದ್ದು ಅಂದರೆ ಸ್ವಂತದ್ದೇ. ಗೊತ್ತಾಯಿತಾ ? ಇಲ್ಲಿ ಬೇರೆ ಯಾರೂ ಆಟ ಆಡಕೂಡದು, ನನ್ನ ಒಬ್ಬನನ್ನು ಬಿಟ್ಟು'', ಎಂದು ಕೂಡಲೇ ಅವನು ತೋಟದ ಸುತ್ತಲೂ ಅತಿ ಎತ್ತರದ ಗೋಡೆ ಕಟ್ಟಿದ; ಒಂದು ನೋಟಿಸ್ ಬೋರ್ಡ್ ಹಾಕಿದ. ಅದರಲ್ಲಿ ಹೀಗಿತ್ತು :

**ಇಲ್ಲಿ ಅತಿಕ್ರಮ ಪ್ರವೇಶ ಮಾಡುವವರನ್ನು ಶಿಕ್ಷೆಗೆ ಗುರಿಪಡಿಸಲಾಗುತ್ತೆ.**

ಆ ರಾಕ್ಷಸ ಮಹಾ ಸ್ವಾರ್ಥಿ.

ಪಾಪ, ಮಕ್ಕಳಿಗೆ ಆಟ ಆಡಲು ಬೇರೆ ಎಲ್ಲೂ ಜಾಗವಿರಲಿಲ್ಲ. ಅವು ರಸ್ತೆಯಲ್ಲೇ ಆಡಲು ಪ್ರಾರಂಭಿಸಿದವು. ಆದರೆ ಅಲ್ಲಿ ಬರಿ ಧೂಳು, ಗೋರಿ ಕಲ್ಲುಗಳು ತುಂಬಿದ್ದವು. ಮಕ್ಕಳಿಗೆ ಅದು ಇಷ್ಟವಾಗಲಿಲ್ಲ. ಸ್ಕೂಲು ಮುಗಿದಮೇಲೆ ಹೊರಗೆ ತೋಟದ ಸುತ್ತಲಿನ ಆ ಎತ್ತರದ ಗೋಡೆ ಸುತ್ತಲೂ ಅಲೆದಾಡುತ್ತಿದ್ದವು; ಒಳಗಿರುವ ಸುಂದರವಾದ ತೋಟವನ್ನು ನೆನಪಿಸಿಕೊಂಡು 'ಆಹಾ, ನಾವು ಎಷ್ಟು ಖುಷಿ ಆಗಿದ್ದೆವು' ಎಂದು ಒಬ್ಬರಿಗೊಬ್ಬರು ಹೇಳಿಕೊಂಡವು.

ಆಗ ವಸಂತಮಾಸ ಬಂತು. ಎಲ್ಲ ಕಡೆಯಲ್ಲೂ ಪುಟ್ಟ ಪುಟ್ಟ ಹೂವುಗಳು, ಪುಟಾಣಿ ಹಕ್ಕಿಗಳು. ಆದರೆ ಸ್ವಾರ್ಥಿ ರಾಕ್ಷಸನ ತೋಟದೊಳಗೆ ಮಾತ್ರ ಚಳಿಗಾಲ ಹಾಗೆಯೇ ಉಳಿದಿತ್ತು. ಹಕ್ಕಿಗಳಿಗೆ ಅಲ್ಲಿ ಬಂದು ಹಾಡಲು ಮನಸ್ಸು ಬರಲಿಲ್ಲ, ಯಾಕೆಂದರೆ ಅಲ್ಲಿ ಮಕ್ಕಳು ಬರುವ ಹಾಗಿರಲಿಲ್ಲ. ಗಿಡಗಳು ಚಿಗುರುವುದನ್ನೇ ಮರೆತವು. ಒಂದು ಸಲವಂತೂ ಒಂದು ಪುಟಾಣಿ ಸುಂದರ ಹೂವು ಹುಲ್ಲಿನಿಂದಾಚೆ ತಲೆಹಾಕಿ ಇಣಕಿದಾಗ ಆ ಬೋರ್ಡು ಕಾಣಿಸಿತು. 'ಅಯ್ಯೋ ಪಾಪ' ಅಂತ ಮಕ್ಕಳನ್ನು ನೆನೆಸಿಕೊಂಡು ಆ ಹೂವು ಮತ್ತೆ ನೆಲದೊಳಕ್ಕೆ ಹೋಗಿ ಅಡಗಿಕೊಂಡು ನಿದ್ರೆಹೋಯಿತು. ನಿಜವಾಗಿ ಖುಷಿಪಟ್ಟವರೆಂದರೆ ಹಿಮ ಹಾಗೂ ಮಂಜು. 'ಆಹಾ, ವಸಂತನಿಗೆ ಈ ತೋಟವೇ ಮರೆತುಹೋಗಿದೆ. ಇನ್ನು ಮೇಲೆ ವರ್ಷವಿಡೀ ನಾವಿಬ್ಬರೇ ಇಲ್ಲಿ ಚಳಿ ಚಳಿಯಾಗಿ ಇದ್ದುಬಿಡುವಾ' ಎಂದು ಕುಣಿದಾಡಿದವು. ನೆಲದ ಹುಲ್ಲನ್ನೆಲ್ಲಾ ಮಂಜು ತನ್ನ ಬಿಳಿ ಹೊದಿಕೆಯಿಂದ ಮುಚ್ಚಿಬಿಟ್ಟಿತು. ಗಿಡಗಳೆಲ್ಲವನ್ನೂ ಬೆಳ್ಳಿಯಿಂದ ಹಿಮಪಾತ ಮುಚ್ಚಿ ಮರೆ ಮಾಡಿತು. ಆಮೇಲೆ ಅವು ಉತ್ತರ ಧ್ರುವದ ಗಾಳಿಯನ್ನು ಕರೆದು ತಮ್ಮ ಜತೆ ಅಲ್ಲೇ ಇರುವಂತೆ ಕೇಳಿಕೊಂಡವು. ಅವನೂ ಬಂದ. ಬರುವಾಗಲೇ ಅವನು ದಪ್ಪನಾದ ತುಪ್ಪಳು, ಕೂದಲು ಚರ್ಮ ಹೊದಿದುಕೊಂಡೇ ಇದ್ದ - ದಿನವಿಡೀ ಅವನು ಭೋರಿಡುತ್ತಾ ತೋಟದೊಳಗೆ ಅಲೆದಾಡಿದ; ಮನೆ ಹೆಂಚು, ಹೊಗೆ ಕೊಳವಿಗಳನ್ನು ಹಾರಿಸಿ ಉರಿಳಿಸಿದ. ''ಇದೊಳ್ಳೆ ಮಜವಾದ ಜಾಗ. ಆಲಿಕಲ್ಲು ಬಿರುಗಾಳಿಯನ್ನೂ ಇಲ್ಲಿಗೇ ಕರಿಯೋಣ'' ಎಂದ. ಅವನೂ ಬಂದುದಾಯಿತು. ಅವನು ಬಂದ ದಿನದ ಲಾಗಾಯ್ತು ಪ್ರತಿ ದಿನವೂ ಮೂರುಗಂಟೆ ಕಾಲ ಅವನು ಕೋಟೆಮನೆಯ ಮೇಲ್ಛಾವಣಿಯ ಮೇಲೆ ಲಟಲಟನೆ ಅಂಡಲೆದು ಹುಯಿಲೆಬ್ಬಿಸಿದ. ಛಾವಣಿಯ ಹೆಂಚುಗಳೆಲ್ಲ ನುಚ್ಚು ನೂರಾದವು. ಆಮೇಲೆ ತೋಟದ ಸುತ್ತ ಭೀಕರ ವೇಗದಿಂದ ಪ್ರದಕ್ಷಿಣೆ ಹಾಕಿದ. ಬೂದಿ ಬಣ್ಣದ ವೇಷ ತೊಟ್ಟ ಅವನ ಉಸಿರಾಟ ಹಿಮದ ತಿದಿಯಂತಿತ್ತು.

ಸ್ವಾರ್ಥಿ ರಾಕ್ಷಸ ಕಿಟಕಿ ಬಳಿ ಕುಳಿತು ಘೋರ ಚಳಿಯಲ್ಲಿ

**ರಾಕ್ಷಸನ ತೋಟಕ್ಕೆ ಯಾರು ಕಾಲಿರಿಸಿದರೂ ಅದನ್ನು ಆತ ಸಹಿಸುತ್ತಿರಲಿಲ್ಲ. ಒಮ್ಮೆ ಮಕ್ಕಳ ಗುಂಪೊಂದು ತೋಟ ಹೊಕ್ಕಿತು. ರಾಕ್ಷಸ ಮಹಡಿಯಿಂದ ಇಳಿದ. ಮಕ್ಕಳು ಭಯದಿಂದ ಓಡಿದವು. ಒಂದು ಪುಟ್ಟ ಹುಡುಗ ರಾಕ್ಷಸನ ಕೈಗೆ ಸಿಕ್ಕಿಹಾಕಿಕೊಂಡ. ಆಗ ನಡೆಯಿತು ರಾಕ್ಷಸನನ್ನೇ ಬೆರಗುಗೊಳಿಸಿದ ಆ ಅದ್ಭುತ....**

ಬಿಳಿಚಿಕೊಂಡಿದ್ದ ತನ್ನ ತೋಟದತ್ತ ನೋಡುತ್ತಾ ಗೊಣಗಿದ: 'ಈ ವಸಂತಮಾಸ ಯಾಕೆ ಬರದೆ ತಡ ಮಾಡುತ್ತಾ ಇದೆ. ನನಗೆ ಅರ್ಥವಾಗಲ್ಲ! ಬಹುಶಃ ಇನ್ನು ಸ್ವಲ್ಪ ಕಾಲದಲ್ಲಿ ಈ ಹವ ಬದಲಾಯಿಸಬಹುದು.'

ಆದರೆ ವಸಂತಮಾಸ ಬರಲೇ ಇಲ್ಲ. ಬೇಸಿಗೆ ಇತ್ತಕಡೆ ಸುಳಿಯಲೇ ಇಲ್ಲ. ಹೇಮಂತನ ಪತ್ನಿ ಹಿಮವತಿ ಬೇರೆಡೆಯ ಪ್ರತಿ ತೋಟದ ತುಂಬಾ ಹೊಂಬಣ್ಣದ ಹಣ್ಣುಗಳಿಗೆ ಜನ್ಮವಿತ್ತಳು - ಆದರೆ ರಾಕ್ಷಸನ ತೋಟ ಮಾತ್ರ ಬಂಜೆ ಬರಡಾಗಿ ಉಳಿಯಿತು. ಹಿಮವತಿ ಅಂದಳು : 'ಛಿ, ಅವ್ನು ಬಲೇ ಸ್ವಾರ್ಥಿ !' ಆದ್ದರಿಂದ ಆ ತೋಟದಲ್ಲಿ ಚಳಿಗಾಲ ಖಾಯಂ ಆಗಿ ನಿಂತಿತು. ಉತ್ತರ ಧ್ರುವದ ಥಂಡಿಗಾಳಿ, ಆಲಿಕಲ್ಲು ಬಿರುಮಳೆ, ಹಿಮಪಾತ, ಮಂಜು - ತೋಟದ ಮರಗಳನ್ನು ಭೂತಗಳಂತೆ ಸುತ್ತಿ ಸುತ್ತಿ ನರ್ತನ ಮಾಡಿದವು.

ಒಂದು ದಿನ ಮುಂಜಾನೆ ರಾಕ್ಷಸ ಹಾಸಿಗೆಯಲ್ಲಿ ಬಿದ್ದುಕೊಂಡು ಹೊರಳಾಡುತ್ತಿರುವಾಗ ಅವನಿಗೆ ಎಲ್ಲಿಂದಲೋ ಬಲು ಚೆಂದದ ಸಂಗೀತ ಕೇಳಿಬಂತು. ಅದು ಅವನ ಕಿವಿಗಳಿಗೆ ಎಷ್ಟು ಮಧುರವಾಗಿತ್ತೆಂದರೆ ರಾಜನ ಅರಮನೆಯ ಸಂಗೀತಗಾರರು ಎಲ್ಲೋ ದಾರಿಯಲ್ಲಿ ಇತ್ತಕಡೆ ಬರುತ್ತಿರಬಹುದು ಎಂದುಕೊಂಡ ರಾಕ್ಷಸ. ಆದರೆ ನಿಜವಾಗಿ, ಅವನ ಕಿಟಕಿ ಹೊರಗಡೆ ಒಂದು ಪುಟ್ಟ ಹಕ್ಕಿ - ಕಂದು ಗರಿಗಳ 'ಲಿನಿಟ್' ಪಕ್ಷಿ - ಕುಳಿತು ಹಾಡುತ್ತಿತ್ತು. ಹಾಗೆ ಅವನಿಗೆ ತನ್ನ ತೋಟದೊಳಗೆ ಹಕ್ಕಿ ಕುಳಿತು ಹಾಡುವುದನ್ನು ಕೇಳಿ ಎಷ್ಟೋ ಕಾಲವಾಗಿತ್ತು. ಆದ್ದರಿಂದ ಅದರ ಹಾಡು ಜಗತ್ತಿನಲ್ಲೇ ಅತ್ಯಂತ ಸುಮಧುರ ಸಂಗೀತವೆಂದು ಅವನಿಗೆ ಅನಿಸಿತು. ಆಗ ಅವನ ತಲೆಯ ಮೇಲೆ ಆಲಿಕಲ್ಲು ಬಿರುಮಳೆ ಕುಣಿದಾಡುವುದು ನಿಂತುಹೋಯಿತು. ಉತ್ತರ ಧ್ರುವದ ಥಂಡಿಗಾಳಿಯ ಭೋರಾಟವೂ ನಿಂತಿತು. ತೆರೆದ ಕಿಟಕಿಯ ಮೂಲಕ ಮನೋಹರ ಸುವಾಸನೆ ಒಳಕ್ಕೆ ತೇಲಿ ಬಂತು. ''ಅಬ್ಬಾ, ಕಡೆಗೂ ವಸಂತ ಬಂದ ಹಾಗೆ ಕಾಣುತ್ತೆ'' ಎಂದವನೇ ರಾಕ್ಷಸ ಹಾಸಿಗೆಯಿಂದ ಜಿಗಿದು ಎದ್ದು ಆಚೆ ನೋಡಿದ.

ಅಲ್ಲಿ ಏನು ಕಾಣಿಸಿತು ಅವನಿಗೆ ?

ಅವನಿಗೆ ಅಲ್ಲೊಂದು ಅದ್ಭುತ ರಮ್ಯ ದೃಶ್ಯ ಕಾಣಿಸಿತು. ಗೋಡೆಯೊಳಗಿನ ಸಣ್ಣ ಕಿಂಡಿ ಮೂಲಕ ಮಕ್ಕಳು ಒಳಕ್ಕೆ ನುಸುಳಿ ಬಂದಿದ್ದರು. ಅವರೆಲ್ಲರೂ ಮರಗಳ ಕೊಂಬೆಗಳನ್ನೇರಿ ಕುಳಿತಿದ್ದರು. ಅವನ ಕಣ್ಣಿಗೆ ಕಾಣಸುವ ಪ್ರತಿಯೊಂದು ಮರದಲ್ಲೂ ಒಂದು ಪುಟಾಣಿ ಮಗು ಕುಳಿತಿರುವುದನ್ನು ರಾಕ್ಷಸ ನೋಡಿದ. ಮಕ್ಕಳು ಹಿಂತಿರುಗಿ ಅಲ್ಲಿಗೆ ಬಂದು ತಮ್ಮ ಮೈಮೇಲೇರಿ ಕುಳಿತಿರುವುದರಿಂದ ಆ ಮರಗಳಿಗೆ ತುಂಬಾ ಖುಷಿ ಆಗಿತ್ತು ; ಮರಗಳ ತುಂಬಾ ಪುಷ್ಪರಾಶಿ ಚಿಗುರೊಡೆದು ನಳನಳಿಸುತ್ತಾ ಮಕ್ಕಳ ತಲೆಯ ಮೇಲೆ ಕೊಂಬೆಗಳು ಮೃದುವಾಗಿ ಕೈಬೀಸಿ ನೇವರಿಸಿದವು. ಹಕ್ಕಿಗಳು ತೋಟದ ತುಂಬಾ ಹಾರಾಡುತ್ತಾ ಉಲ್ಲಾಸದಿಂದ ಚಿಲಿಪಿಲಿಗುಟ್ಟಿದವು. ಹೂಗಳು ಹಸಿರು ಹುಲ್ಲಿನಿಂದಾಚೆ ಇಣಿಕಿ ನಕ್ಕು ನಲಿದಾಡಿದವು. ಅದೊಂದು ಸುಂದರ ದೃಶ್ಯ. ಆದರೆ ತೋಟದ ಒಂದು ಮೂಲೆಯಲ್ಲಿ ಮಾತ್ರ ಚಳಿಗಾಲ ಹಾಗೆಯೇ ಉಳಿದಿತ್ತು. ತೋಟದ ಬಹುದೂರದ ಆ ಮೂಲೆಯೊಳಗೆ ಒಬ್ಬ ಚಿಕ್ಕ ಹುಡುಗ ನಿಂತಿದ್ದ. ಅವನು ಎಷ್ಟು ಚಿಕ್ಕವನೆಂದರೆ ಅವನಿಗೆ ಮರದ ಕೊಂಬೆಗಳು ಎಟುಕುತ್ತಿರಲಿಲ್ಲ. ಅವನು ಮರದ ಸುತ್ತಲೂ ಓಡಾಡುತ್ತ 'ಗೋಳೋ' ಎಂದು ಅಳುತ್ತಿದ್ದ. ಪಾಪ, ಆ ಬಡ ಮರ - ಅದರ ತುಂಬಾ ಇನ್ನೂ ಹಿಮಪಾತ, ಮಂಜಿನ ಹರಳುಗಳು ಹಾಗೆಯೇ ಇದ್ದವು - ಅದರ ಮೇಲೆ ಉತ್ತರ ಶೀತವಲಯದ ಗಾಳಿ ಭೋರಿಡುತ್ತಾ ಬೀಸುತ್ತಿತ್ತು. 'ಮೇಲಕ್ಕೆ ಹತ್ತು , ಮಗು' ಎಂದಿತು ಮರ. ಅದು ಅವನಿಗೆಟಕುವಂತೆ ತನ್ನ ಕೊಂಬೆಗಳನ್ನು ಕೆಳಕ್ಕೆ ಬಗ್ಗಿಸಿತು. ಆದರೆ ಆ ಪೋರ ತೀರಾ ಚಿಕ್ಕವನು.

ಕೆಳಗೆ ಬಗ್ಗಿ ಇದನ್ನು ನೋಡುತ್ತಿದ್ದ ರಾಕ್ಷಸನ ಹೃದಯ ಕರಗಿ ನೀರಾಯಿತು. ''ಅಯ್ಯೋ ನಾನೆಂಥ ಪಾಪಿ, ಸ್ವಾರ್ಥಿ ?'' ಎಂದುಕೊಂಡ. 'ತೋಟದೊಳಕ್ಕೆ ಏಕೆ ವಸಂತ ಬರುತ್ತಿಲ್ಲವೆಂಬುದು ಈಗ ನನಗೆ ಅರ್ಥವಾಗುತ್ತಿದೆ; ಆ ಮಗುವನ್ನು ಎತ್ತಿ ಕೊಂಬೆಯ ತುದಿಯಲ್ಲಿ ಕೂರಿಸುತ್ತೇನೆ. ಈ ಕೆಟ್ಟ ಗೋಡೆಯನ್ನು ಕೆಡವಿ ನೆಲಸಮ ಮಾಡುತ್ತೇನೆ. ಇನ್ನು ಮುಂದೆ ಎಂದೆಂದಿಗೂ ನನ್ನ ತೋಟ ಮಕ್ಕಳ ಆಟದ ಮೈದಾನವಾಗಿರುತ್ತದೆ' ಎಂದು ತಾನು ಹಿಂದೆ ಮಾಡಿದ ಅಪಕೃತ್ಯದ ಬಗ್ಗೆ ಅವನಿಗೆ ನಿಜವಾಗಿ ಪಶ್ಚಾತ್ತಾಪವಾಗಿತ್ತು.

ಆದ್ದರಿಂದ ಅವನು ಮೆಲ್ಲನೆ ಮಹಡಿ ಇಳಿದು ಬಂದು ಮೃದುವಾಗಿ ಮುಂದಿನ ಬಾಗಿಲು ತೆರೆದು ತೋಟದೊಳಕ್ಕೆ ಹೋದ. ಆದರೆ ಮಕ್ಕಳಿಗೆ ಅವನನ್ನು ನೋಡಿದ ಕೂಡಲೇ ವಿಪರೀತ ಭಯವಾಗಿ ಅವರು ಅಲ್ಲಿಂದ ಪರಾರಿಯಾದರು. ಮತ್ತೆ ತೋಟಕ್ಕೆ ಚಳಿಗಾಲದ ಪಿಡುಗು ಹತ್ತಿಕೊಂಡಿತು.

ಆದರೆ ಆ ಒಬ್ಬ ಚಿಕ್ಕ ಹುಡುಗ ಮಾತ್ರ ಓಡಿ ಹೋಗಲಿಲ್ಲ - ಯಾಕೆಂದರೆ ಅವನ ಕಣ್ಣುಗಳಲ್ಲಿ ನೀರು ತುಂಬಿ ಹರಿಯುತ್ತಿದ್ದುದರಿಂದ ರಾಕ್ಷಸನು ಬಂದುದನ್ನು ಅವನು ನೋಡಲಿಲ್ಲ. ರಾಕ್ಷಸ ಮೆಲ್ಲನೆ ನುಸುಳಿ ಅವನ ಹಿಂದೆ ಹೋಗಿ ನಿಂತ - ಅವನನ್ನು ಮೃದುವಾಗಿ ಒಂದು ಕೈಯಿಂದ ಎತ್ತಿ ಮರದ ಮೇಲೆ ಕೂರಿಸಿದ. ತಕ್ಷಣವೇ ಮರದಲ್ಲಿ ಕುಸುಮರಾಶಿ ತುಂಬಿ, ಎಲ್ಲೆಲ್ಲೂ ಮೊಗ್ಗು ಚಿಗುರುಗಳು ಒಡೆದವು. ಹಕ್ಕಿಗಳು ಬಂದು ಕುಳಿತು ಕೊರಳೆತ್ತಿ ಹಾಡಿದವು. ಆ ಚಿಕ್ಕ ಹುಡುಗ ತನ್ನ ಎರಡೂ ಕೈಗಳನ್ನು ಚಾಚಿ ರಾಕ್ಷಸನ ಕೊರಳನ್ನು ತಬ್ಬಿಕೊಂಡು ಮುತ್ತುಕೊಟ್ಟನು. 'ರಾಕ್ಷಸನು ದುಷ್ಟನಲ್ಲವೆಂಬುದನ್ನು ಕಂಡ ಉಳಿದ ಮಕ್ಕಳೂ ಸಹ ಹಿಂದಕ್ಕೆ ಓಡಿಬಂದವು. ಅವರ ಜತೆ ವಸಂತನೂ ತೋಟಕ್ಕೆ ಕಾಲಿಕ್ಕಿದ. 'ನೋಡಿ, ಪುಟಾಣಿಗಳೇ ಇನ್ನು ಮೇಲೆ ಈ ತೋಟ ನಿಮ್ಮದು' ಎಂದು ಹೇಳಿ ರಾಕ್ಷಸನು ಒಂದು ಗುದ್ದಲಿ ತಂದು ಗೋಡೆಯನ್ನು ಕೆಡವಿಹಾಕಿದನು. ಅವತ್ತು ಮಧ್ಯಾಹ್ನ ಹನ್ನೆರಡು ಗಂಟೆಯಲ್ಲಿ ಮಾರ್ಕೆಟ್ಟಿಗೆ ಹೋಗುತ್ತಿದ್ದ ಜನರಿಗೆ ರಾಕ್ಷಸನು ಮಕ್ಕಳೊಟ್ಟಿಗೆ ಆ ಅತ್ಯಂತ ಸುಂದರ ತೋಟದಲ್ಲಿ ಆಟವಾಡುತ್ತಿದ್ದುದನ್ನು ಕಂಡು ಆಶ್ಚರ್ಯ.

ದಿನವಿಡಿ ಮಕ್ಕಳು ಆಟವಾಡಿಯೇ ಆಡಿದರು. ಸಂಜೆ 'ಗುಡ್ ಬೈ' ಹೇಳಿ ಹೋಗಲು ರಾಕ್ಷಸನ ಬಳಿ ಬಂದರು.

''ಮಕ್ಕಳೇ ! ಆ ನಿಮ್ಮ ಜತೆಗಾರ ಚಿಕ್ಕಹುಡುಗ ಏನಾದ ? ನಾನೇ ಅವನನ್ನು ಮರದ ಮೇಲೆ ಕೂರಿಸಿದ್ದೆ'' ಎಂದ. ರಾಕ್ಷಸನಿಗೆ ಅವನ ಮೇಲೆ ತುಂಬಾ ಪ್ರೀತಿ ಹುಟ್ಟಿತ್ತು , ಯಾಕೆಂದರೆ ಅವನು ತನಗೆ ಮುತ್ತು ಕೊಟ್ಟಿದ್ದ.



''ಏನಾದನೋ ನಾವು ಕಾಣೆವು. ಅವನು ಹೊರಟುಹೋಗಿರಬಹುದು'' ಎಂದವು ಮಕ್ಕಳು.

''ಅವನು ಖಂಡಿತ ನಾಳೆ ಇಲ್ಲಿ ಬರುವಂತೆ ನೀವು ಅವನಿಗೆ ಹೇಳಬೇಕು'' ಎಂದ ರಾಕ್ಷಸ. ಆದರೆ ಅವನ ಮನೆ ಎಲ್ಲಿದೆಯೋ ತಮಗೆ ಗೊತ್ತಿಲ್ಲ, ಅವನನ್ನು ಆ ಮೊದಲು ತಾವು ನೋಡಿಯೇ ಇರಲಿಲ್ಲ ಎಂದು ಮಕ್ಕಳು ಉತ್ತರ ಕೊಟ್ಟವು. ರಾಕ್ಷಸನಿಗೆ ಬಹು ದುಃಖವಾಯಿತು.

ಪ್ರತಿ ಮಧ್ಯಾಹ್ನ ಸ್ಕೂಲು ಮುಗಿದ ಕೂಡಲೆ ಮಕ್ಕಳು ಅಲ್ಲಿಗೆ ಬಂದು ರಾಕ್ಷಸನ ಜತೆ ಆಟವಾಡುತ್ತಿದ್ದವು. ಆದರೆ ಆ ಚಿಕ್ಕ ಹುಡುಗ - ಆ ರಾಕ್ಷಸನ ಪ್ರೀತಿಯ ಹುಡುಗ - ಮತ್ತೆ ಎಂದೆಂದಿಗೂ ಕಾಣಿಸಿಕೊಳ್ಳಲೇ ಇಲ್ಲ. ರಾಕ್ಷಸ ಎಲ್ಲಾ ಮಕ್ಕಳನ್ನು ಪ್ರೀತಿಯಿಂದ ನೋಡಿಕೊಂಡ - ಆದರೆ ತನ್ನ ಮೊದಲನೆಯ ಆ ಪುಟ್ಟ ಸ್ನೇಹಿತನಿಗಾಗಿ ಹಂಬಲಿಸಿದ - ಆಗಾಗ ಅವನ ಬಗ್ಗೆ ಮಾತನಾಡುತ್ತ ''ಅಯ್ಯೋ, ನನಗೆ ಅವನನ್ನು ನೋಡಬೇಕೆಂದು ತುಂಬಾ ಆಸೆಯಾಗುತ್ತದೆ'' ಎನ್ನುವನು.

ವರ್ಷಗಳು ಉರುಳಿದವು - ರಾಕ್ಷಸ ಹಣ್ಣು ಹಣ್ಣು ಮುದುಕನಾದ. ಅವನಿಗೆ ಈಗ ಬಲು ನಿತ್ರಾಣ. ಮಕ್ಕಳೊಟ್ಟಿಗೆ ಆಡಲು ಅವನ ಕೈಲಾಗುತ್ತಿರಲಿಲ್ಲ. ಒಂದು ದೊಡ್ಡ ಆರಾಮ ಕುರ್ಚಿಯಲ್ಲಿ ಕುಳಿತು ಮಕ್ಕಳು ಆಡುವುದನ್ನು ಎವೆ ಇಕ್ಕದೆ ನೋಡುವನು. ತನ್ನ ತೋಟದ ಬಗ್ಗೆ ಅವನಿಗೆ ತುಂಬಾ ಹೆಮ್ಮೆ. ''ನನ್ನ ಈ ತೋಟದ ತುಂಬಾ ಸುಂದರವಾದ ಹೂವುಗಳಿವೆ. ಆದರೆ ಈ ಮಕ್ಕಳುಗಳೇ ಇಲ್ಲಿನ ಅತ್ಯಂತ ಸುಂದರ ಹೂವುಗಳು'' ಎನ್ನುತ್ತಿದ್ದ.

ಒಂದು ಚಳಿಗಾಲದ ಬೆಳಿಗ್ಗೆ ಅವನು ಬಟ್ಟೆ ಹಾಕಿಕೊಳ್ಳುತ್ತಿದ್ದಾಗ ಕಿಟಕಿಯಿಂದಾಚೆ ನೋಡಿದ. ಅವನಿಗೆ ಈಗ ಚಳಿಗಾಲದ ಮೇಲೆ ದ್ವೇಷವಿಲ್ಲ - ಯಾಕೆಂದರೆ ಚಳಿಗಾಲವು ಮಲಗಿ ನಿದ್ರಿಸುವ ವಸಂತ ಮಾಸವಷ್ಟೇ - ಆಗ ಹೂವುಗಳೆಲ್ಲವೂ ನಿದ್ರೆ ಹೋಗಿರುತ್ತವಲ್ಲವೇ ?

ಒಮ್ಮೆಲೆ ಅವನು ಕಣ್ಣು ಹೊಸಕಿಕೊಂಡು ಮಹದಾಶ್ಚರ್ಯದಿಂದ ನೋಡಿಯೇ ನೋಡಿದ. ಅದೊಂದು ಅತ್ಯದ್ಭುತದ ದೃಶ್ಯ. ತೋಟದ ಅತಿ ದೂರದ ಮೂಲೆಯಲ್ಲಿದ್ದ ಮರದ ತುಂಬಾ ಹೂವು ಹಣ್ಣುಗಳು ತೊನೆದಾಡುತ್ತಿದ್ದವು. ಮರದ ಕೊಂಬೆಗಳೆಲ್ಲಾ ಹೊಂಬಣ್ಣವಾಗಿ, ಬೆಳ್ಳಿಯ ಹಣ್ಣುಗಳು ತೂಗಾಡುತ್ತಿದ್ದವು. ಅದರ ಕೆಳಗೆ ರಾಕ್ಷಸ ಪ್ರೀತಿಸಿದ್ದ ಚಿಕ್ಕ ಹುಡುಗ ನಿಂತಿದ್ದ.

ರಾಕ್ಷಸ ಮಹದಾನಂದದಿಂದ ಮಹಡಿ ಇಳಿದು ಓಡಿ ತೋಟದೊಳಕ್ಕೆ ಬಂದ. ಹುಲ್ಲುಹಾಸನ್ನು ಅವಸರದಲ್ಲಿ ದಾಟಿ ಮಗುವಿನ ಬಳಿ ಬಂದ. ಅವನ ತೀರಾ ಹತ್ತಿರಕ್ಕೆ ಬಂದಾಗ ಕೋಪದಿಂದ ರಾಕ್ಷಸನ ಮುಖ ಕೆಂಪಾಗಿ ''ನಿನ್ನನ್ನು ಗಾಯಗೊಳಿಸಿದವರು ಯಾರು - ಅವನಿಗೆಷ್ಟು ಧೈರ್ಯ'' ಎಂದು ಕಿರಿಚಿದ. ಮಗುವಿನ ಕೈಗಳ ಮೇಲೆ ಎರಡು ಉಗುರುಗಳನ್ನು ಊರಿದ ಗುರುತಿತ್ತು, ಅವನ ಪುಟ್ಟಕಾಲುಗಳ ಮೇಲೆಯೂ ಆ ಉಗುರುಗಳು ಒತ್ತಿದ ಮುದ್ರೆ ಇತ್ತು.

''ನಿನ್ನನ್ನು ಹೀಗೆ ಗಾಯಗೊಳಿಸಿದ ಪಾಪಿ ಯಾರು ಹೇಳು ! ನನ್ನ ದೊಡ್ಡ ಕತ್ತಿಯಿಂದ ಅವನನ್ನು ಕೊಂದುಬಿಡುವೆನು'' ಎಂದು ಅರಚಿದ ರಾಕ್ಷಸ.

'ಛೆ, ಛೆ ! ಇವು ಪ್ರೀತಿಯ ಗಾಯಗಳು,' ಹುಡುಗ ಹೇಳಿದ.

'ಹಾಗಾದರೆ ನೀನು ಯಾರು ?' ಎಂದು ಕೇಳುವಾಗ ರಾಕ್ಷಸನ ಮುಖದಲ್ಲಿ ವಿಚಿತ್ರವಾದ ಭಯಭಕ್ತಿಯ ವಿಸ್ಮಯವಿತ್ತು - ಅವನು ಮಗುವಿನ ಮುಂದೆ ಮಂಡಿಯೂರಿ ನಮಿಸಿದ.

ಮಗು ರಾಕ್ಷಸನ ಕಡೆ ನೋಡಿ ನಗುತ್ತಾ 'ಅವತ್ತು ನೀನು ನನ್ನನ್ನು ನಿನ್ನ ತೋಟದೊಳಕ್ಕೆ ಆಟವಾಡಲು ಬಿಟ್ಟೆ ; ಇವತ್ತು ನೀನು ನಂದನವನವೆಂಬ ನನ್ನ ತೋಟಕ್ಕೆ ನನ್ನ ಜತೆ ಬರಬೇಕು' ಎಂದ.

ಮಕ್ಕಳು ಅಂದು ಮಧ್ಯಾಹ್ನ ಆಟವಾಡಲು ಓಡಿ ಬಂದಾಗ ರಾಕ್ಷಸ ಮರದ ಅಡಿಯಲ್ಲಿ ಸತ್ತುಬಿದ್ದಿರುವುದನ್ನು ಕಂಡವು. ಅವನ ಮೈಮೇಲೆಲ್ಲಾ ಬಿಳಿ ಹೂವುಗಳು ರಾಶಿಯಾಗಿ ಹರಡಿದ್ದವು.

**ಕನ್ನಡಕ್ಕೆ : ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೨೦೯, ೧೦ನೇ 'ಬಿ' ಕ್ರಾಸ್, ೨೯ನೇ ಮೇನ್,
ಜೆ. ಪಿ. ನಗರ, ೧ನೇ ಹಂತ, ಬೆಂಗಳೂರು - ೭೮

'ಗಿಡ್ಡ ಹೆಂಡತಿ ಲೇಸು ಸರ್ವಜ್ಞ' ಅಂತ ಇದೆಯೋ ಅಥವಾ 'ದಡ್ಡ ಹೆಂಡತಿ ಲೇಸು ಸರ್ವಜ್ಞ' ಅಂತ ಇದೆಯೋ ಸರೀ ನೋಡ್ರೀ. ಅಯ್ಯೋ, ನೋಡ್ರಿ, ಅಂದರೆ ನನ್ನ ಮುಖ ನೋಡ್ತೀರಲ್ಲಾ; ನಿಮಗೇ ಹೇಳಿದ್ದು, ಸರ್ವಜ್ಞನ ವಚನವನ್ನು ಸರಿಯಾಗಿ ಓದಿ ನೋಡೀಂತ.

ಏನು ? 'ಗಿಡ್ಡ ಹೆಂಡತಿ' ಅಂತನೇ ಇದ್ಯಾ ? ಹಾಗಾದ್ರೆ, ಖಂಡಿತಾ ಎಲ್ಲೋ ಎಡವಟ್ಟಾಗಿದೆ. ''ಯಾಕೆ ? 'ಗಿಡ್ಡ' ಆದರೆ ನಿಮಗೇನು ತೊಂದರೆ ಅಂತ ಕೇಳ್ತೀರಾ?'' ನಿಜವಾಗಿ ತೊಂದರೇನೆ. ಆ ಸರ್ವಜ್ಞನಿಗೆ ಇದರಿಂದ ಅಪಚಾರ ಮಾಡಿದಂತೆ ಆಗುತ್ತೇಂತಲೇ ನನ್ನ ಹೆದರಿಕೆ. ನನಗೆ ಸರ್ವಜ್ಞನ ಬಗ್ಗೆ ಅಪಾರ ಗೌರವ ಇರುವುದರಿಂದಲೇ ಈ ಪದದ ಬಗ್ಗೆ ನನಗೆ ಇಷ್ಟು ತಲೆ ಬಿಸಿ. (ನನ್ನ ತಲೆ ಬಿಸಿ ಏರಿದ್ದು ತಿಳಿದು ಮಗಳು ಮಹಾದೇವಿ ಹಾಲನ್ನು ನನ್ನ ತಲೆಯ ಮೇಲೇ ಕಾಯಿಸುವ ಯೋಜನೆ ಹಾಕಿದ್ದಾಳೆ !)

ನೋಡಿ, ಗಿಡ್ಡ ಹೆಂಡತಿಗೆ ಉದ್ದ ಗಂಡನ ಕಿವಿ ಎಟುಕದು; ಆದ್ದರಿಂದ ಅದೇ ಸರಿ ಎಂದು ನೀವು ವಾದಿಸಬಹುದು. ಇದು ಸ್ವಲ್ಪಮಟ್ಟಿಗೆ ನಿಜವಾದರೂ ಕೂಡಾ 'ಸಾರ್ವಕಾಲಿಕ' ಅಲ್ಲ. ಗಂಡ ಕುಳಿತಾಗ, ಮಲಗಿದಾಗ ಧಾರಾಳವಾಗಿ ಕರತಲಾಮಲಕವಾಗುವ ಕಿವಿಯ ಬಗ್ಗೆ ನೀವೇನು ತಾನೇ ಸಮಜಾಯಿಷಿ ಕೊಡಬಲ್ಲಿರಿ ? ಏನೂ ಇಲ್ಲ, ಅಲ್ಲವೆ ? ಅದಕ್ಕೇ ಸರಿಯಾಗಿ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿ ನೋಡಿ ಅಂದದ್ದು.

ಸರ್ವಜ್ಞ, ಆತನ ಹೆಸರೇ ಹೇಳುವಂತೆ ಪೂರ್ಣ ಜ್ಞಾನಿಯೇ ಹೊರತು, ನಮ್ಮ ನಿಮ್ಮ ಹಾಗೆ ಅಲ್ಪ ಜ್ಞಾನಿ - ಅರೆ ಜ್ಞಾನಿ ಅಲ್ಲವಲ್ಲಾ ! ಹಾಗಾಗಿ ಆತನ ಎಲ್ಲವನ್ನೂ ತಿಳಿದಂಥ ವಿಶೇಷ ಜ್ಞಾನದಿಂದ ಹೊರಬಿದ್ದ ವಚನಗಳೆಲ್ಲವೂ ತುಂಬಾ ತುಂಬಾ ಅರ್ಥಗಳಿಂದ ತುಂಬಿ ತುಳುಕಾಡುತ್ತಿವೆ. ಹಾಗಿರುವಾಗ 'ಗಿಡ್ಡ' ಎನ್ನುವ ಸಾಮಾನ್ಯ ಮಾನವನ ಪದವನ್ನು ಬಿಟ್ಟು, ಪ್ರಾಸಕ್ಕೆ ಹ್ರಾಸ ತಾರದ, ಅರ್ಥದಲ್ಲಿ ಗೂಢಾರ್ಥವನ್ನೊಳಗೊಂಡ 'ದಡ್ಡ' ಪದವನ್ನೇ ಆತ ಉಪಯೋಗಿಸಿರುವನೆಂದು ನನ್ನ ನಂಬಿಕೆ.

ಅವನು 'ದಡ್ಡ ಹೆಂಡತಿ' ಎಂದು ಮಹಿಳೆಯನ್ನು ಹೀಗಳೆಯುವುದರಿಂದ ನನಗೆ ಸಿಗುವ ಸಂತೋಷವೇನು ಎಂದು ಕೇಳುವಿರಾ ? ಇಲ್ಲೇ ನೀವು ನನ್ನನ್ನು ಅಪಾರ್ಥ ಮಾಡಿಕೊಂಡು ಅನರ್ಥ ಮಾತಾಡುತ್ತಿರುವುದು. 'ದಡ್ಡ ಹೆಂಡತಿ' ಎಂಬುದನ್ನು ಜಾಣಗಂಡನ ವಿಷಯದಲ್ಲೂ, 'ದಡ್ಡ ಗಂಡ' ಎಂಬುದನ್ನು ಜಾಣ ಹೆಂಡತಿಯ ವಿಷಯದಲ್ಲೂ ಬಳಸಿಕೊಳ್ಳಬೇಕೆಂಬುದೇ ಅದರ ಒಳಾರ್ಥ.

ನಾನು ಈ ರೀತಿ ಆರೋಪಿಸುವುದನ್ನು ನೀವು ಅಲ್ಲಗಳೆಯುವಂತಿಲ್ಲ, ಏಕೆಂದರೆ ನಾನು 'ಸಾಧಾರ'ವಾಗಿಯೇ ಈ ವಾದವನ್ನು ನಿಮ್ಮ ಮುಂದಿಡುತ್ತಿದ್ದೇನೆ.




ಹೇಗೆಂದರೆ, ಜಾತಕಾದಿಗಳಲ್ಲಿ 'ಕಳತ್ರಸ್ಥಾನ' ಎಂಬ 'ಸ್ಥಾನಮಾನ'ದ ವಿಷಯ ಬರುತ್ತದಲ್ಲಾ, ಅದು ವಧುವಿಗಾದರೆ ವರನ ಸ್ಥಾನದ ಬಗ್ಗೆ ಮಾಹಿತಿ ನೀಡುವುದೆಂದೂ, ವರನಿಗಾದರೆ ವಧುವಿನ ಬಗ್ಗೆ ತಿಳಿಸಿಕೊಡುವುದೆಂದೂ ಜ್ಯೋತಿಷಿಗಳು ಗತ್ತಿನಲ್ಲಿ ವಿವರಿಸಿದಾಗ, ನೀವು ಮೆತ್ತಗೆ

ಸತ್ಯವತಿ

ಕುಳಿತು ಹೌದೆಂದು ಗೋಣುಹಾಕುತ್ತಾ ಕೇಳಿಸಿಕೊಂಡು ಬರುವುದಿಲ್ಲವೆ ? ಹಾಗೆಯೇ ಇದೂ ಕೂಡಾ. ಆದ್ದರಿಂದ ನೀವೀಗ ವಿಧಿಯಿಲ್ಲದೆ ನಾನು ಹೇಳಿದ್ದನ್ನು ಕೇಳಿ ಒಪ್ಪಿಕೊಳ್ಳಲೇಬೇಕು. ಅನ್ಯಮಾರ್ಗವಿಲ್ಲ.

ಅಲ್ಪಮತಿಗಳಿಗೆ ಹೊಳೆಯದ ತಿಳಿಯದ ಅನೇಕಾನೇಕ ವಿಷಯಗಳನ್ನು ಸರ್ವಜ್ಞನು ತನ್ನ ವಚನಗಳಲ್ಲಿ ತುಂಬಿಸಿಬಿಟ್ಟಿರುವನಾದ್ದರಿಂದ, ಅದರಲ್ಲಿ ಹೊರಾರ್ಥಗಳೂ ಒಳಾರ್ಥಗಳೂ ತುಂಬಿರುವುವು. ಅವೆಲ್ಲವನ್ನೂ ವರ್ಣಿಸಲೂ, ವಿಮರ್ಶಿಸಲೂ ಹೊರಟರೆ ಕಡೆಗೆ ನಾನು ''ಸರ್ವಜ್ಞ ಗ್ರಂಥಮಾಲೆ''ಯೊಂದನ್ನು ಸ್ಥಾಪಿಸಬೇಕಾಗಬಹುದೆಂದೂ, ಅಷ್ಟೊಂದು ತಾಕತ್ತು ನನಗಿಲ್ಲವೆಂದೂ ಬಲ್ಲವಳಾದ್ದರಿಂದ ಕೇವಲ ಗಿಡ್ಡ-ದಡ್ಡ ಪದಗಳನ್ನು ಮಾತ್ರ ಎತ್ತಿಕೊಂಡಿದ್ದೇನೆ. ಬರೀ ಮೇಲ್ನೋಟಕ್ಕೆ ಕಾಣುವ ಅರ್ಥವನ್ನು ಮಾತ್ರ ಗ್ರಹಿಸದೆ, ಅದರ ಒಳಹೊಕ್ಕು ನೋಡಿ, ಮರ್ಮಾರ್ಥಗಳನ್ನು ಗ್ರಹಿಸಿದಾಗ ಮಾತ್ರ ಸರ್ವಜ್ಞನ ವಚನಗಳಿಗೆ ನಾವು ನ್ಯಾಯ ದೊರಕಿಸಿಕೊಟ್ಟಂತೆ ಆಗುತ್ತದೆ. ಈ ತರನ ನ್ಯಾಯಕ್ಕಾಗಿಯೇ ಈಗ ನನ್ನ ಹೋರಾಟ.

ಈಗ ಪುನಃ ನಾನು ವಿಮರ್ಶಿಸ ಹೊರಟ ಪದಗಳ ವಿಷಯಕ್ಕೆ ಬರೋಣ. 'ದಡ್ಡ ಹೆಂಡತಿ' (ಅಂದರೆ 'ದಡ್ಡಿ') ಯಾ 'ದಡ್ಡ ಗಂಡ' ಎನ್ನುವುದರಿಂದ ಸಿಗುವ ಲಾಭವೇನು ಎಂದು ಚಿಂತಿತರಾದಿರಾ ? ಚಿಂತಿಸದಿರಿ. 'ಗಿಡ್ಡ' ಹೆಂಡತಿಗೆ 'ಕಿವಿ' ಎಟುಕುವುದಿಲ್ಲ ಎನ್ನುವ ಒಂದೇ ಕಾರಣಕ್ಕೆ 'ಗಿಡ್ಡ' ದವಳನ್ನು ಆರಿಸಿಬಿಡಬೇಡಿ. 'ದಡ್ಡ' ಹೆಂಡತಿಯ ಗುಣಾವಗುಣಗಳನ್ನೂ ಪರಾಮರ್ಶಿಸಿ ನಿರ್ಧರಿಸಬೇಕು.

ಜಾಣ ಗಂಡನಿಗೆ ದಡ್ಡ ಹೆಂಡತಿ ದೊರಕುವುದು 'ಆಭಾಸ'ವಲ್ಲ; 'ಆಭರಣ' ! ಹುಬ್ಬೇಕೆ ಮೇಲೇರಿತು ? ಆಶ್ಚರ್ಯವಾ ? ನನ್ನ ಹೇಳಿಕೆಗೆ ಕಾರಣ ಕೇಳಿ, ಹೇಳ್ತೀನೆ. ದಡ್ಡಿಗೆ ತನ್ನ ಪತಿಯ ಎಲ್ಲಾ ಗುಣಗಳೂ ವಿಶೇಷವಾಗಿ ಕಂಡು, ಹೆಮ್ಮೆಯುಂಟಾಗುತ್ತದೆ. ಆತನ ವಾದವಿವಾದಗಳನ್ನೆಲ್ಲಾ ಒಪ್ಪಿಕೊಂಡು, ಆತನ ಬುದ್ಧಿಮತ್ತೆಗೆ ತಲೆದೂಗಿ, ಸಂತಸದಿಂದ ಬೀಗುತ್ತಾ ಆತನ ಇಷ್ಟ ಪ್ರಕಾರ ನಡೆದುಕೊಳ್ಳುತ್ತಾಳೆ. ತನಗೆ ತಿಳಿದವರ ಹತ್ತಿರ ಸ್ವಲ್ಪಾ

ಸಂಕೋಚಪಡದೆ ಪತಿಯ ಜಾಣತನವನ್ನು ಬಣ್ಣಿಸುತ್ತಾ ಗುಣಗಾನ ಮಾಡುತ್ತಾಳೆ. ಇದರಿಂದಾಗಿ ನೆರೆಕೆರೆಯಲ್ಲಿ ಆತನ ಗೌರವ ಹೆಚ್ಚುತ್ತದೆ. ಮನೆಯಲ್ಲೂ ಎಲ್ಲರೂ ಆತನನ್ನೇ ಅನುಸರಿಸುವ ಕಾರಣ ಮನಸ್ತಾಪ, ಜಗಳ ಮುಂತಾದವುಗಳಿಗೆ ಎಡೆಯಿಲ್ಲದೆ, ಸದಾ ಪ್ರೀತಿ, ಗೌರವಗಳೇ ಮೆರೆದಾಡುತ್ತವೆ. ಈ 'ಪುರುಷ ಪ್ರಧಾನತೆ' ಆತನಿಗೆ ಅತ್ಯಂತ ಆನಂದವನ್ನು ತರುತ್ತದೆ.

ಇನ್ನು ಇದರ ವಿರುದ್ಧವಾದ 'ದಡ್ಡ ಗಂಡ'ನ ವಿಷಯಕ್ಕೆ ಬರೋಣ. ಗಂಡ ದಡ್ಡನಾದಾಗ, ಆತನಿಗೆ ತನ್ನ 'ಜಾಣ ಹೆಂಡತಿ' ಒಂದು 'ಅದೃಷ್ಟದ ನಿಧಿ'ಯಂತೆ ಗೋಚರಿಸುತ್ತಾಳೆ. ಮನೆಯ ಚಿಂತೆಯನ್ನು ಆಕೆಯೇ ವಹಿಸಿಕೊಳ್ಳುವುದರಿಂದ ಆತ 'ಆರಾಮ ಜೀವಿ' ಅಥವಾ 'ಸೋಮಾರಿ ಜೀವಿ'ಯಾಗಲು ಅಡ್ಡಿ ಆತಂಕಗಳೇ ಇರುವುದಿಲ್ಲ. ಇದಕ್ಕಿಂತ ಭಾಗ್ಯ ಇನ್ನೊಂದುಂಟೆ ? ಹೊರಗೆ ದುಡಿದು, ಮನೆಯೊಳಗೆ ಕಾಲಿಡುತ್ತಿದ್ದಂತೆಯೇ ''ಅದು ಸರಿ ಇಲ್ಲ, ಇದು ಇಲ್ಲವೇ ಇಲ್ಲ, ಇವನ್ನೆಲ್ಲಾ ಏನು ಮಾಡುವುದು ?'' ಇತ್ಯಾದಿಯಾಗಿ ತಲೆತಿನ್ನುತ್ತಾ ಕಾಡುವ ಹೆಂಡತಿ ಅವಳಾಗಿರದೆ, ಎಲ್ಲದಕ್ಕೂ ಪರಿಹಾರವನ್ನು ತಾನೇ ಕಂಡುಹಿಡಿಯುವ ಜಾಣೆ ಅವಳಾದ್ದರಿಂದ, ಆತನ ನೆಮ್ಮದಿಗೆ ಭಂಗವೆಂಬುದೇ ಇಲ್ಲ. ಆತನೂ ನಿರಾತಂಕವಾಗಿ ಅವಳು ಹೇಳಿದ ರೀತಿಯಲ್ಲಿ ನಡೆದುಕೊಂಡು ಸುಖವಾಗಿರಬಹುದು. ಒಬ್ಬರ ಆಧಿಪತ್ಯದಿಂದ ಎಲ್ಲಿಯೂ ತೊಂದರೆ ಬಂದದ್ದಿಲ್ಲ. ಇಬ್ಬರೂ ಆಳಲು ಹೊರಟಾಗ ಮಾತ್ರ ಎಲ್ಲವೂ ಏರುಪೇರು. ಆದ್ದರಿಂದ ಜಾಣೆಯಾದ ಹೆಂಡತಿಯ ಆಳ್ವಿಕೆಯಲ್ಲಿ ದಡ್ಡಗಂಡ ಸುಖ ಮತ್ತು ಆರಾಮಗಳನ್ನು ಸುಲಭವಾಗಿ ಪಡೆಯಬಹುದು. ಸ್ತ್ರೀ ಶಕ್ತಿಯಲ್ಲಿ ನಂಬಿಕೆಯಿಟ್ಟು, ಆಕೆಗೆ ಉನ್ನತ ಪಟ್ಟ ನೀಡುವುದರಿಂದ, 'ಸ್ತ್ರೀ ಪ್ರಧಾನತೆ' ದೊರಕಿ ಆಕೆ ತೃಪ್ತಳಾಗುವಳು.

ಆದ್ದರಿಂದ 'ಗಂಡ' ಯಾ 'ಹೆಂಡತಿ' ಇವರಿಬ್ಬರಲ್ಲಿ ಒಬ್ಬರು ದಡ್ಡರಾಗಿರುವುದೇ ಕುಟುಂಬಕ್ಕೆ ಭೂಷಣ ! ಆಗ ಒಬ್ಬರು ಇನ್ನೊಬ್ಬರ ಜಾಣ್ಮೆಗೆ ತಲೆಬಾಗಿ, ಅವರು ತೋರಿದ ಮಾರ್ಗದಲ್ಲಿ ನಡೆದುಕೊಳ್ಳುತ್ತಾರೆ. ಇದರಿಂದ ಮನೆಗಳು ಕಲಹಾದಿಗಳಿಂದ ದೂರವುಳಿದು 'ಶಾಂತಿಧಾಮ'ಗಳಾಗಿ ಮೆರೆಯುತ್ತವೆ ಮತ್ತು ಈ ಎರಡೂ ಸಂದರ್ಭಗಳಲ್ಲಿಯೂ 'ಸುವರ್ಣದಲ್ಲಿ ಮಾಣಿಕವ ಕೋದಂತೆ' ಸುಂದರವಾದ ಬದುಕು ಇವರದು.

ಇನ್ನು ಸ್ತ್ರೀ ಪುರುಷರಿಬ್ಬರೂ ಜಾಣರಾದರೆ ಏನು ತೊಂದರೆ ಎಂದು ಸ್ವಲ್ಪ ವಿಚಾರ ಮಾಡೋಣ. 'ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯುತ್ತದೆ' ಎಂಬ ನಾಣ್ಣುಡಿಯ ಪರಿಚಯವಿದೆ ತಾನೇ ನಿಮಗೆ ? ಥೇಟ್ ಇದೇ ಪರಿಸ್ಥಿತಿ. ಇಬ್ಬರಿಗೂ ತಮ್ಮ ತಮ್ಮ ಜಾಣತನದಲ್ಲೇ ವಿಶ್ವಾಸ ಹೆಚ್ಚಾಗಿ, ಇನ್ನೊಬ್ಬರ ಮಾತನ್ನು ಕೇಳುವುದು ತನ್ನ ವ್ಯಕ್ತಿತ್ವಕ್ಕೇ ಅವಮಾನವೆಂಬ ಭಾವನೆ ಬೆಳೆದುಬಿಟ್ಟಿರುತ್ತದೆ. ಹಾಗಾಗಿ ಇಬ್ಬರೂ ತಮ್ಮ ಸಂಗಾತಿಯ ಮಾತಿಗೆ ಬೆಲೆಕೊಡದೆ, ತನ್ನ ಮಾತೇ ನಡೆಯಬೇಕೆಂದು ಮೊಂಡು ಹಟ ಮಾಡುತ್ತಾರೆ.

ತಾನು ಯಜಮಾನ, ತನ್ನ ಮಾತೇ ಅಂತಿಮ ನಿರ್ಧಾರ ಎಂಬುದು ಪುರುಷವಾದವಾದರೆ, ತಾನೇ ಯಜಮಾನ್ತಿ, ತನ್ನ ಮಾತೇ ಮಾನಿತವಾಗಬೇಕೆಂಬುದು ಸ್ತ್ರೀವಾದ. ತಾನು ಜಾಣ, ಪೌರುಷದ ಪ್ರತೀಕ, ಊರಿನ ಗೌರವಾನ್ವಿತ ಪ್ರಜೆ, ತನ್ನ ಮಾತು ಕೇಳದಿದ್ದರೆ ಸಜೆ ಎಂದು ಕೂಗಾಡುವ ಪತಿಗೆ, ತಾನೂ ಜಾಣೆ, ಸ್ತ್ರೀಯೇ ಸಕಲಶಕ್ತಿಯ ಮೂಲ, ಕರಾಟೆಯೇ ಮೊದಲಾದ ಪೌರುಷಯುಕ್ತ ಕಾಳಗದಲ್ಲಿ ತಾನೂ ಪ್ರವೀಣೆ, ಸ್ತ್ರೀವಾದ ಪ್ರಕಾರ ಪುರುಷ ಪ್ರಧಾನ ಸಮಾಜಕ್ಕೆ ಧಿಕ್ಕಾರವಿರುವ ಪ್ರಯುಕ್ತ ಮನೆಯ ಮೂಲಾಧಾರವಾದ ತನ್ನ ಮಾತೇ ನಡೆಯಬೇಕೆಂದು ನಯ-ವಿನಯದಿಂದಲೂ, ಕೆಲವೊಮ್ಮೆ ಬೇಕಾದರೆ ಪೌರುಷದಿಂದಲೂ ಪ್ರತಿಕ್ರಿಯಿಸುವಳು ಪತ್ನೀಮಣಿ. ಸೇರಿಗೆ ಸವ್ವಾಸೇರಿನಂಥಾ ಇಂತಹ ಸಂಭಾಷಣೆಗಳು ಪುಂಖಾನುಪುಂಖವಾಗಿ ನಡೆದು, ಇಬ್ಬರೂ ಸೋಲದೆ (!), ಇಬ್ಬರೂ ಸೋತು (!) ಮನೆಯ ಶಿಸ್ತನ್ನು ದಿಕ್ಕಾಪಾಲಾಗಿ ಮಾಡುವ ಜೋಡಿಗಳಿಗೆ ಈಗಿನ ಸಮಾನಯುಗದಲ್ಲಿ ಕೊರತೆಯೇ ಇಲ್ಲ.

ಇಬ್ಬರೂ ಜಾಣರಾದ್ದರಿಂದ ಅವರಿಬ್ಬರೂ ಸಂಸಾರ ರಥದ ಎರಡು ಚಕ್ರಗಳಂತೆ ಒಟ್ಟಾಗಿ ನಡೆದು ಬಾಳಲ್ಲಿ ಸ್ವರ್ಗ ಕಾಣುತ್ತಾರೆ ಎಂದು ನೀವು 'ಕನಸು' ಕಾಣಬಹುದು. ಅಡ್ಡಿಯಿಲ್ಲ. ಆದರೆ ವಾಸ್ತವದಲ್ಲಿ ಆಗುವುದೇ ಬೇರೆ. ನಾಲ್ಕು ಜನ ಜಾಣರಿಂದ ಸ್ಥಾಪಿತವಾದ ಸಂಘ-ಸಂಸ್ಥೆಗಳಲ್ಲಿ, ಕಡೆಗೆ ಸ್ಥಾನಕ್ಕಾಗಿ ಹೋರಾಡುವ ಗಡಿಬಿಡಿಯಲ್ಲಿ, ವಿವೇಕವನ್ನು ಮರೆತ ಜಾಣರು ಅಹಂಕಾರದಿಂದ ಅವಿವೇಕಿಗಳಾಗಿ ಮೆರೆದು, ಗುದ್ದಾಡಿ, ಒಬ್ಬರ ಮೇಲೊಬ್ಬರು ಕಾರಸ್ಥಾನ ಮಾಡಿ ಕಡೆಗೆ ಸ್ಥಾನವೇ ಮಾಯವಾಗುವಂತೆ ಮಾಡಿ, ತಾವೇ ಆ ಸಂಸ್ಥೆಗಳು ಮುರಿದುಬೀಳುವುದಕ್ಕೆ ಕಾರಣವಾಗುವುದನ್ನು ದಿನ ಬೆಳಗೆದ್ದರೆ ನೀವು ಕಾಣುತ್ತಿಲ್ಲವೇ ? ಇಲ್ಲೂ ಅದೇ ಗೋಳು.

ಇಬ್ಬರೂ ಸಮಾನ ವಿದ್ಯಾವಂತರು. ಆರ್ಥಿಕ ಸ್ಥಿತಿ, ಉದ್ಯೋಗ, ಸಂಬಳ, ಸ್ಥಾನಮಾನ, ರೂಪ, ಜಾಣತನ ಎಲ್ಲದರಲ್ಲೂ ಸಮಾನರು. ಅಂತೆಯೇ ತಾವೇ ಮೇಧಾವಿಗಳೆಂಬ ವಿಶೇಷ ಅಹಂಕಾರಕ್ಕೊಳಪಟ್ಟು ಒಬ್ಬರನ್ನೊಬ್ಬರು ಸಹಿಸದ ಅವಿವೇಕತನದಲ್ಲೂ ಸಮಾನರು ! ಆದ್ದರಿಂದಲೇ ಮನೆಯಲ್ಲಿ ತಮ್ಮದೇ ಅಧಿಕಾರ ಸ್ಥಾಪಿಸಲು ಹೋಗಿ, ಅಧಃಪತನ ಸೇರುವ ಹುನ್ನಾರನ್ನು ತಮಗರಿವಿಲ್ಲದೆ ತಾವೇ ಮಾಡಿಕೊಂಡು, ನಿತ್ಯ ರಾದ್ಧಾಂತದಿಂದ ಬೇಸತ್ತು, ಮಾನಸಿಕ ಹಿಂಸೆ ಇತ್ಯಾದಿ ಕಾರಣಗಳನ್ನು ಮುಂದಿಟ್ಟುಕೊಂಡು ಒಂದಾನೊಂದು ದುರ್ದಿನ 'ಅಗ್ನಿ ಸಾಕ್ಷಿ' ಮದುವೆಗೆ ಕೋರ್ಟು ಕೊಟ್ಟ ವಿಚ್ಛೇದನ ಪಡೆದು ದೂರ ದೂರ ಓಡಿಬಿಡುತ್ತಾರೆ. ಇದರರ್ಥ ಏನು ? ಜಾಣ-ದಡ್ಡಿ ಜೋಡಿ ಅಥವಾ ಜಾಣೆ-ದಡ್ಡ ಜೋಡಿ ಸಂತೋಷದಿಂದ ಬಾಳುವಾಗ, ಜಾಣ-ಜಾಣೆಯರು ಕದನ ಕುತೂಹಲಿಗಳಾಗಿ ವಿದಾಯ ಹೇಳುವುದರಲ್ಲೇ ಹೆಚ್ಚಿಗೆ ಉತ್ಸುಕರಾಗಿರುತ್ತಾರೆ. ಅಂದರೆ, ವಿರುದ್ಧ ಗುಣಗಳಲ್ಲಿ ಪರಸ್ಪರ ಆಕರ್ಷಣೆಯನ್ನೂ, ಸಮಾನ ಗುಣಗಳಲ್ಲಿ ಪರಸ್ಪರ ಆಕರ್ಷಣರಾಹಿತ್ಯವನ್ನೂ ನಾವು ಕಾಣುತ್ತೇವೆಂದೇ ಅಲ್ಲವೇ ? ವಿಜ್ಞಾನಿಗಳೂ ಈ ಗುಣಗಳನ್ನು ಒಪ್ಪಿ ಅಯಸ್ಕಾಂತಗಳ ಉದಾಹರಣೆಗಳನ್ನು ಚಿತ್ರಿಸುವುದಿಲ್ಲವೇ ? ಇಷ್ಟು ವಿಷಯ ನಮ್ಮ ಸರ್ವಜ್ಞನಿಗೆ ತಿಳಿದಿಲ್ಲವೇ ? ಈ ಕಾರಣದಿಂದಲೇ ನಾನು ಹೇಳಿದ್ದು, ಸರ್ವಜ್ಞನ ಪದ್ಯವನ್ನು ಸರಿಯಾಗಿ ಓದಿ ಎಂದು. ಈಗ ಅರ್ಥವಾಯಿತೇ ನನ್ನ ಕಳಕಳಿ ?

'ಅರೆಜ್ಞಾನಿಗಳು ಸಂಗಾತಿಗಳಾದರೆ ?' ಎಂಬ ಪ್ರಶ್ನೆ ನಿಮ್ಮಲ್ಲಿ ಮೂಡಬಹುದು. ''ಅರ್ಧ ತುಂಬಿದ ಕೊಡ''ದ ಹಾಗೆ ಅರೆ ಬುದ್ಧಿವಂತರ ಆರ್ಭಟ ಜಾಸ್ತಿ. ಸ್ವಲ್ಪ ತಿಳಿದಿದ್ದರೂ ತಮಗೆ ತುಂಬಾ ತಿಳಿದಿದೆ ಎಂಬ ಅಹಂಭಾವದಿಂದ ಇಬ್ಬರೂ ಯದ್ವಾತದ್ವಾ ಮಾತಾಡಿ, ಸಂಸಾರದಲ್ಲಿ 'ಸಾರ'ವಿಲ್ಲದಂತೆ ಮಾಡಿಕೊಳ್ಳುತ್ತಾರೆ. ಒಬ್ಬರು ಅರೆ ಜಾಣರೂ, ಇನ್ನೊಬ್ಬರು ಅತಿ ಜಾಣರೂ ಆಗಿದ್ದರೂ ಕೂಡಾ, ಅರೆ ಜಾಣರಿಗೆ ತಾವೇ ಅತಿ ಬುದ್ಧಿವಂತರೆಂಬ ಭಾವನೆ ಸದಾ ಇರುವುದರಿಂದ, ತಮ್ಮತನವನ್ನು ಅತಿಯಾಗಿ ಮೆರೆಸಲು ಹೋಗಿ, ಪ್ರತಿಯೊಂದು ವಿಷಯವನ್ನೂ ಜಗಳದಲ್ಲೇ ಮುಗಿಸುತ್ತಾರೆ. ಅರೆ ಜಾಣರ ವಿತಂಡವಾದವನ್ನು ಒಪ್ಪಿಕೊಳ್ಳಲು ಸಾಧ್ಯವಾಗದೆ, ಜಾಣ ಸಂಗಾತಿಯೂ ವಾಗ್ಯುದ್ಧಕ್ಕೆ ಮಣಿಯಲೇಬೇಕಾಗುತ್ತದೆ. ಇದರ ಅಂತ್ಯ, ಇಬ್ಬರ ಮುಖವೂ ಕುಂಬಳಕಾಯಿ ಗಾತ್ರ ಆಗುವುದರಲ್ಲಿ ಪರ್ಯವಸಾನಹೊಂದುತ್ತದೆ. 'ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ' ಎಂಬಂತೆ ಇವರಿಗೆ ಎಂದಿಗೂ ಸುಖವೆಂಬುದಿಲ್ಲ.

ಇಷ್ಟೊಂದು ಕಾರಣಗಳು ನಿತ್ಯವೂ ದೃಗ್ಗೋಚರವಾಗಿರುವಾಗ, ನನಗೆ ಸರ್ವಜ್ಞನ ಈ ವಚನದ ಈ ಒಂದು ಪದದ ಬಗ್ಗೆ ಅನುಮಾನ ಉಂಟಾದದ್ದು ತಪ್ಪೆಂದು ಹೇಳುವಿರಾ ? ನನ್ನ ಹೇಳಿಕೆ ಅರ್ಥವಿಹೀನವೆಂದು ಜರಿಯುವಿರಾ ?

''ಹಲವಾರು 'ಬಾಯಿ'ಗಳೆಂಬ 'ಕೂಪ'ಗಳೊಳಗೆ ಮಂಡೂಕದಂತೆ ನುಗ್ಗಿ ಬಂದು ತನ್ನ ರೂಪವನ್ನೇ ಕಳೆದುಕೊಂಡು ಕುರೂಪಿಯಾಗಿಬಿಟ್ಟಿತೇ ಈ ವಚನ ? 'ದಡ್ಡ' ಹೆಂಡತಿ (ಅಥವಾ 'ದಡ್ಡ' ಗಂಡನ) ಬಗ್ಗೆ ಹೇಳಹೊರಟ ತನ್ನ ವಚನ, ಹಲ ಕೆಲವು ದಡ್ಡ ಶಿಖಾಮಣಿಗಳ ಬಾಯಿಗೆ ಬಿದ್ದು ತನ್ನತನವನ್ನು ಕಳೆದುಕೊಂಡಿತೇ ?'' ಎಂದು ಹಲುಬುತ್ತಿರಬಹುದಾದ ಸರ್ವಜ್ಞನಿಗೆ ನ್ಯಾಯ ದೊರಕಿಸಿಕೊಡಬೇಕೆಂಬ ಆಸೆಯಿಂದ ಇಷ್ಟು ವಾದವನ್ನು ತಮ್ಮೆದುರಿಗೆ ಇರಿಸಿದ್ದೇನೆ. ಇನ್ನು ಇದರ ಬಗ್ಗೆ ನಿಮ್ಮ ಟೀಕೆ-ಟಿಪ್ಪಣಿ, ವಿಚಾರ ವೇದಿಕೆಗಳು ಶುರುವಾಗಲಿ ! ನ್ಯಾಯವೇದಿಕೆಯಲ್ಲಿ ಸರ್ವಜ್ಞನಿಗೂ, ಆತನ ಅರ್ಥಪೂರ್ಣ ವಚನಗಳಿಗೂ ಸರಿಯಾದ ನ್ಯಾಯ ದೊರಕಲಿ ! ಅಜ್ಞಾತ ವ್ಯಕ್ತಿಯೋರ್ವರಿಂದ ಹುಟ್ಟಿದ 'ಆಶೀರ್ವಾದವೇ ಉಡುಗೊರೆ' ಎಂಬ ಪದಗಳ ಪ್ರಯೋಗದ ಬಗ್ಗೆಯೇ ತಲೆಕೆಡಿಸಿಕೊಂಡು ಹೋರಾಡುತ್ತಿರುವ ನಮ್ಮ ಸಹೃದಯರು, ಅಂತೆಯೇ 'ಭಕ್ತಾಭಿಮಾನಿಗಳೇ !' ಎಂಬ ಸಂಬೋಧನೆಯ ಕುರಿತು ಸಂಶೋಧನೆ ಮಾಡುತ್ತಿರುವ ವಿಚಾರವಂತ ಕನ್ನಡಾಭಿಮಾನಿಗಳು ನಮ್ಮ ಸರ್ವಜ್ಞನಿಗೆ ನ್ಯಾಯವನ್ನು ದೊರಕಿಸಿಕೊಡಲಾರರೆ ? ತಿಂಗಳುಗಟ್ಟಳೆ ಕರ್ಣಾಟಕದ 'ಸುಂದರ ದೈನಿಕ'ಗಳಲ್ಲಿ ಇದರ ಬಗ್ಗೆ ಚರ್ಚಾಗೋಷ್ಠಿ ನಡೆಸಿದ, ಕನ್ನಡ ಶಬ್ದಗಳ ಬಗ್ಗೆ ಅತ್ಯಂತ ಕಳಕಳಿಯುಳ್ಳ, ಕನ್ನಡಮ್ಮನ ಮುದ್ದು ಕಂದಮ್ಮಗಳು ಇತ್ತ ಗಮನಹರಿಸುವರೆಂದು ನಂಬಲೇ ?

ಸತ್ಯವತಿ
W/O ಡಾ|| ಎಸ್. ಹರಿಕೃಷ್ಣನ್, ಸರ್ಜನ್ ಡೆಂಟಿಸ್ಟ್
ಸುರತ್ಕಲ್ - ೫೭೪ ೧೫೮

## ಹೈಕುಗಳು

ಕೊಕ್ಕರೆಗಳು ಅದೆಷ್ಟು ಬಿಳಿಪು!
ಡಿಟರ್ಜೆಂಟ್ ಪೌಡರ್‌ನಿಂದ
ಯಾರು ತೊಳೆದರು ?

ಮೌನವಾಗಿ ಆ ಮನೆ
ಗೋಳೋ ಎಂದು ಅಳುತ್ತಿದೆ
ಶಾಲೆಗೆ ಹೋಗಿದ್ದಾರೆ ಮಕ್ಕಳು !

ಒಂದೇ ಸಮನೆ ನೋಡಿದರೆ
ಅಪ್ಸರೆ ಕೂಡಾ
ಆಗುತ್ತಾಳೆ ಶೂರ್ಪಣಖಿ !

ಆ ಮುದುಕ ಚಪ್ಪರಿಸುತ್ತಿದ್ದಾನೆ
ಚಾಕ್ಲೆಟ್‌ಗಳನ್ನು
ಹುಡುಗತನ ಬಿಟ್ಟಿಲ್ಲ ಇನ್ನು

ರಾತ್ರಿಯಾಗಿದೆ
ಕೆರೆಯೊಳಗಿನ ನೆರಳನ್ನು
ಕತ್ತಲು ನುಂಗಿತು.

ಈ ದಿನ ರಾತ್ರಿ ತಾರೆಗಳಿಗೆ
ಹೈ ವೋಲ್ಟೇಜ್ ಕಾಂತಿ
ಚಂದ್ರ ಗೈರು ಹಾಜರ್

ಆರ್ಚಿಗಳ ನಡುವೆ
ಉದಯಾರುಣ ಬಿಂಬದಂತೆ
ಹುಬ್ಬುಗಳ ನಡುವೆ ಕುಂಕುಮ




ತೆಲುಗು ಮೂಲ : **ಅಂಚಿತ ಕೇಶವುಲು**
ಕನ್ನಡಕ್ಕೆ : **ರಾಮಣ್ಣ ಆರ್ಡ್ಜಿ**
ಶಿರಸ್ತೇದಾರ್, ಮುನ್ಸಿಫ್ ಮತ್ತು ಜೆ. ಎಂ. ಎಫ್. ಸಿ. ಕೋರ್ಟ್
ಲಿಂಗಸುಗೂರು
ರಾಯಚೂರು ತಾಲ್ಲೂಕು

## ಪ್ರಗತಿ

ಕಿಚ್ಚು ಹೊಗೆ ಹಾದಿಯಲಿ ನೆತ್ತರಿನ ನದಿಗಳನು
ಹಾದು, ಶಸ್ತ್ರಾಸ್ತ್ರಗಳ ಬೆಟ್ಟಗಳನು
ದಾಟಿ, ದುರ್ಗಂಧಮಯ ಅಂಧಕಾರವನೊದರಿ,
ಬಂದು ನಿಂದಿದೆ ನವಸಹಸ್ರಮಾನ !

ಮುಂದೇನು ! ಮಂದಹಾಸವ ಬೀರುವುದೆ ಇಂದು ?
ಮಲ್ಲಿಗೆಯ ದಂಡೆಗಳೆ ದಾರಿಯಲ್ಲಿ ?
ಕೆನ್ನೀರ ಬದಲು ಪನ್ನೀರ ಹೊಳೆ ಹರಿಯುವುದೆ ?
ಕಣ್ಣೀರು ಬತ್ತಿ, ಎದೆ ತಣ್ಣಗಹುದೆ ?

ಸದ್ಯ ಕಳಚುವುದಿಲ್ಲ ಕೊಂಬುಗಳು, ಬಾಲಗಳು,
ನೆಟ್ಟಗಾಗುವುದಿಲ್ಲ ನಾಯಿಬಾಲ !
ನಂಜು, ಸಂಜೀವಿನಿಯ ಬೆರಕೆ ನಮ್ಮೀ ಬಾಳ
ಬಗೆ; ತೀರದಿದೆ ರಸಾತಲದ ಸಾಲ !



ತಪ್ಪೇನು ಆಸೆಯಲಿ ? ಅಂತರಂಗದ ಅಂತ
ರಿಕ್ಷದಲಿ ಜ್ವಲಿಸಿರಲಿ ನೂರು ತಾರೆ !
ಕ್ಯಾಲೆಂಡರಿನ ಕಾಲಮಾನವಿದು ಬೇರೆ, ಮನು
ಕುಲದ ಉತ್ಸರ್ಪಿಣಿಯ ಕಾಲ ಬೇರೆ !

**ಸಿ.ಪಿ.ಕೆ.**
೨ನೇ ಮುಖ್ಯ ರಸ್ತೆ, ವಿನಾಯಕನಗರ
ಮೈಸೂರು - ೫೭೦ ೦೧೨

## ಶಮನ

*ಈ ಬೆಸುಗೆ ನಮ್ಮಿಬ್ಬರ ನಡುವಿನ ಬಿರುಕು*
*-ಚ. ಸರ್ವಮಂಗಳಾ*



ಯಾಮಿನೀ ಮಡಿಲಲ್ಲಿ
ತೆರೆದ ನಕ್ಷತ್ರಗಳ ಗುಣಿಸಿದ್ದು
ಬೆಚ್ಚನೆಯ ಸದ್ದು ಅನುರಣಿಸಿದ್ದು
ಕಳೆದ ದಿನಗಳ ಮರು ಎಣಿಕೆ ಈಗ

ನಿನಗೋ ಅಂತಸ್ತುಗಳ ಸುಖ ನಿರೀಕ್ಷೆ ನಡುವೆ
ಎತ್ತಲೋ ಸಾಗಿ ಬದುಕು, ಗವ್ವೆನ್ನುವ ಕತ್ತಲು
ಆರಡಿಯ ಕನಸು ಮೂರಡಿಗಿಳಿದು
ದೊಪ್ಪನೆ ಬಿದ್ದ ಸದ್ದು ಎಲ್ಲೋ
(ಇಲ್ಲೇ ಸನಿಹದ್ದು ಎನಿಸುವಂತಿದೆ !)

ಆತ ಉರುಹಚ್ಚಿದ ಉಕ್ತಲೇಖನ
ಬೆಚ್ಚನೆಯ ಮಹಲು ಹಣ, ವಾಹನದ ಭರಾಟೆ...
'ಎಲ್ಲಾ ಮೀರಿಸುವ ಸುಖಸುಪ್ಪತ್ತಿಗೆಗೆ
ಮಾತುಗಳದೇ ಬರ !'

**ಎಂ. ಆರ್. ಭಗವತಿ**
೮ ಸಿ, ೧೫, 'ಗುರುರಕ್ಷಾ', ೫ನೇ ಮೇನ್
೮ನೇ ಕ್ರಾಸ್, ಶ್ರೀನಿಧಿ ಬಡಾವಣೆ, ಕೋಣನಕುಂಟೆ
ಬೆಂಗಳೂರು - ೫೬೦ ೦೬೨

## ಅರೆ ಹುಚ್ಚ

ಪ್ರತಿ ದಿವಸ ಸಂಜೆ ಅವನು
ಬಯಲು ಮಾತಾಡಿಸಲು ಹೋಗುವನು
ಹಾಗೂ ರವಿವಾರ ಮುಂಜಾನೆ
ಕೆರೆಗಳನ್ನು.
ಕಿಸೆಯಲ್ಲಿ ಇದ್ದಾಗ ರೊಕ್ಕ
ಕಬ್ಬು ಕಡಲೆ ನೆಲ್ಲಿ ಪೇರಲ
ಬರುವವು ಓಡೋಡಿ ಅವನ ಮನೆಗೆ
ಅವನು ನಡೆದರೆ ದಂಡೆಗುಂಟ
ತುಂಬಿ ಹರಿಯುವವು ಹೊಳೆ ಹಳ್ಳ ಖುಷಿಯಿಂದ
ಕಂಡಾಗಲೆಲ್ಲ ಅವನ ಮುಖ
ಕೋಗಿಲೆಗೆ ಎದೆ ತುಂಬ ಹಾಡು



ಗಿಳಿ ಗುಬ್ಬಿಗಳಿಗೆ ಬಾನೆತ್ತರ ಹಾರು
ರಸ್ತೆಯ ತಿರುವಿನ ಹುಣಸೆಮರಕಂತೂ
ಅವನು ಬಾರದ ದಿನ
ರಾತ್ರಿಯೆಲ್ಲ ನಿದ್ದೆಯಿಲ್ಲ
ಅವನ ಹೆಜ್ಜೆ ಸಪ್ಪಳ ಕೇಳಿದೊಡನೆ
ಹುಲ್ಲಿಗೆ ಮೈ ಪುಳಕ
ಬೇಸಿಗೆ ಬಂದರೆ ಸಾಕು
ಕಲ್ಲಂಗಡಿ ಕವಳಿ ಮಾವುಗಳಿಗೆ
ಮನೆ ತನಕ ಬಂದು
ಕುಶಲ ಕೇಳುವ ತವಕ
ಕಲಿತವರ ಕಣ್ಣುಗಳಿಗೆ
ಅವನೊಂದು ವಿಚಿತ್ರ

ಮೊದಲು ನಕ್ಕು ನಂತರ
ಮರುಗಬೇಕಾದ ಅರೆಹುಚ್ಚ
ಈ ಅರೆಹುಚ್ಚನ ಕೈಯ ನೀರುಂಡ
ಅಂಗಳದ ಮಲ್ಲಿಗೆಗೆ ಮೈ ತುಂಬ
ಸದಾ ಸಾವಿರ ಹೂ ಧರಿಸಿ
ಕುಣಿಯುತಿರುವ ಹುರುಪು

ಈ ಅವನು
ಆಗಬೇಕು ನಾನು !

**ಸಂಕುಲ ಜೀವ**
ಮಲ್ಲಿಗೆ, ೧೯/೨, ಮಹಿಷಿ ರಸ್ತೆ, ಮಾಳಮಡ್ಡಿ
ಧಾರವಾಡ - ೫೮೦ ೦೦೭

# ಭಾರತೀಯ ತತ್ವಜ್ಞಾನ



## ಡಾ॥ ಗೌರೀಶ ಕಾಯ್ಕಿಣಿಯವರೊಡನೆ ಒಂದು ಸಂದರ್ಶನ

**ಸಂದರ್ಶಕ** : ನಮಸ್ಕಾರ ಸರ್, ತಾವು ೧೯೪೪ರಷ್ಟು ಹಿಂದೆಯೇ ಕನ್ನಡದಲ್ಲಿ ಮಾರ್ಕ್ಸ್‌ವಾದದ ಬಗ್ಗೆ ಬರೆದಿದ್ದೀರಿ. ಆಮೇಲೆ ವಿಚಾರವಾದ, ನಾಸ್ತಿಕ ಮತ್ತು ದೇವರು, ಎಂ.ಎನ್. ರಾಯ್ ವಾದ, ಚಾರ್ವಾಕ ಹೀಗೆ ಕನ್ನಡದ ವೈಚಾರಿಕ ಸಾಹಿತ್ಯದ ಕಣಜಕ್ಕೆ ಗಟ್ಟಿ ತೆನೆಯನ್ನು ತುಂಬುತ್ತಲೇ ಬಂದವರು ನೀವು. ಇದನ್ನು ಗಮನಿಸಿದ 'ಹೊಸತು' ಮಾಸಿಕ ಪತ್ರಿಕೆ ಭಾರತೀಯ ತತ್ವಜ್ಞಾನದ ಕುರಿತಾಗಿ ತಮ್ಮೊಡನೆ ಕೆಲವು ಮಾತುಗಳನ್ನು ಆಡಬೇಕೆಂದು ನನ್ನನ್ನು ಕಳಿಸಿದೆ. ನನ್ನ ಜೊತೆ ಶ್ರೀ. ವಿ. ಎಸ್. ಹೆಗಡೆ ಮತ್ತು ವಿಟ್ಠಲ ಭಂಡಾರಿ ಕೂಡ ಇದ್ದಾರೆ. ದಯಮಾಡಿ ತಾವು ಅನುಮತಿಸುತ್ತೀರಿ ಅಂತ...

**ಡಾ॥ ಗೌರೀಶ ಕಾಯ್ಕಿಣಿ** : ಅನುಮತಿ ಯಾವಾಗಲೂ ಇದೆ. ಕೇಳಿ ನಿಮ್ಮ ಪ್ರಶ್ನೆ...

**ಸಂ** : ಸರ್, ಭಾರತೀಯ ತತ್ವಜ್ಞಾನ ಅಂದರೆ ವೇದ, ಉಪನಿಷತ್ತು, ಭಗವದ್ಗೀತೆ ಹೀಗೆ ವೈದಿಕ ಸಾಹಿತ್ಯ ಅನ್ನುವ ಒಂದು ಕಲ್ಪನೆ ಪ್ರಚಲಿತವಾಗಿದೆ. ಹಾಗಾದರೆ...

**ಗೌ** : ಭಾರತೀಯ ತತ್ವಜ್ಞಾನವೆಂದರೆ ವೈದಿಕ ಸಾಹಿತ್ಯ ಮಾತ್ರವಲ್ಲ. ಭಾರತದಲ್ಲಿ ಎಷ್ಟು ಧರ್ಮಗಳಿವೆಯೋ ಅವಷ್ಟಕ್ಕೂ ಅವುಗಳದ್ದೇ ಆದ ತತ್ವಜ್ಞಾನವಿದೆ. ನೋಡಿ, ಬೌದ್ಧ ಧರ್ಮ. ಅದು ವೈದಿಕಕ್ಕೆ ವಿರುದ್ಧವಾಗಿ ಬಂತು. ಅದು ನಿರೀಶ್ವರವಾದಿ. ಹಾಗೆಯೇ ಜೈನ... ಸಾಂಖ್ಯ ಒಂದು ದರ್ಶನ. ಅದಕ್ಕೂ ಅವರದ್ದೇ ಆದ ಸಿದ್ಧಾಂತ ಇದೆ. ಸಾಂಖ್ಯದಲ್ಲಿ ನಿರೀಶ್ವರ ಮೊದಲು, ನಂತರ ಈಶ್ವರ ಪ್ರವೇಶ. ಬೌದ್ಧದಲ್ಲಿ ದೇವರಿಲ್ಲ. ಆದರೆ ಕಾಲಕ್ರಮೇಣ ಬುದ್ಧನನ್ನೇ ದೇವರನ್ನಾಗಿ ಮಾಡಿಬಿಟ್ರು. ಹಾಗೇ ಲೋಕಾಯತ.

ಸಂದರ್ಶಕರು : **ಡಾ॥ ಆರ್. ವಿ. ಭಂಡಾರಿ**

**ಸಂ** : ಲೋಕಾಯತ ಭೌತವಾದಿ, ಅಲ್ವಾ ?

**ಗೌ** : ಹೌದು. ತತ್ವಶಾಸ್ತ್ರದಲ್ಲೇ ಎರಡು ವಿಧ. ಆಧ್ಯಾತ್ಮಕ ಅಥವಾ ಭಾವನಾವಾದ ಮತ್ತು ಭೌತವಾದ. ಇದರ ಮೂಲದಲ್ಲೇ ಸೈದ್ಧಾಂತಿಕ ವೈಪರೀತ್ಯ ಇದೆ. ಮೊದಲು ಎಕ್ಸಿಸ್ಟೆನ್ಸ್. ಮೊದಲು ಇರುವು, ನಂತರ ಅರಿವು. ವಾತಾವರಣದಿಂದ ವಿಚಾರ ಹುಟ್ಟುತ್ತದೆ. ಸಿದ್ಧಾಂತ ಹುಟ್ಟುತ್ತದೆ. ಇದು ಭೌತವಾದ. ದೈವವಾದ ಹಾಗಲ್ಲ. ಮೊದಲು ಅರಿವು, ಅದರಿಂದ ಇರುವು. ಚೇತನ, ಸ್ಪಿರಿಟ್ ಮೊದಲು, ನಂತರ ಮ್ಯಾಟರ್. ಭೌತವಾದ ಜಡದಿಂದ ಚೇತನ. ಡಾರ್ವಿನ್‌ವಾದ, ಭೌತವಾದ ಸತರ್ಕವಾದುದು. ಅದು ವಿಜ್ಞಾನ; ಭಾವನಾವಾದ ಕಾಲ್ಪನಿಕ, ನಂಬಿಗೆ. ನಂಬಿಗೆ ಮುಖ್ಯ. ಪ್ರಶ್ನೆ ಕೇಳಬೇಡ. ಭಗವದ್ಗೀತೆಯಲ್ಲಿ ಕೃಷ್ಣ ಅರ್ಜುನನಿಗೆ ಹೇಳುತ್ತಾನೆ. ಇಷ್ಟು ನಾನು ಹೇಳಿದ್ದೇನೆ. ನೀನು ವಿಚಾರಿಸಿ ನಿನ್ನ ಮನಸ್ಸಿಗೆ ಕಂಡಂತೆ ಮಾಡು. ಯಥೇಚ್ಛಸಿ ತಥಾ ಕುರು. ಆದರೆ ಅದು ಸುಳ್ಳು. ಮೊದಲು ಬ್ರೈನ್‌ವಾಶ್ ಮಾಡಿ ನಂತರ ನಿನಗೆ ತಿಳಿದಂತೆ ಮಾಡು ಎಂದರೆ ಆಗುವುದಿಲ್ಲ. ಅದು ನೆಪ. ನೋಡಿದಿರಾ, ನಮ್ಮದು ವೈಚಾರಿಕ ಸ್ವಾತಂತ್ರ್ಯ ಎಂದು ಹೇಳಿಕೊಳ್ಳಲು ಮಾತ್ರ. ತನ್ನನ್ನು ಅವತಾರ ಎಂದು ತಿಳಿಯುವವರು ಮೂಢರು ಎನ್ನುತ್ತಾನೆ ಕೃಷ್ಣ. ಆದರೆ ತಾನೇ ಅವತಾರವಾಗಿ ವಿಶ್ವರೂಪ ತೋರುತ್ತಾನೆ.

**ಸಂ** : ಈಗ ನೀವು ಹೇಳಿದ ಪ್ರಕಾರ ಬೌದ್ಧ, ಜೈನ, ಲೋಕಾಯತ ಇತ್ಯಾದಿಗಳು ಇದ್ದಾಗಲೂ ಅವೆಲ್ಲ ಹಿಂದೆ ಬಿದ್ದು ಭಾವನಾವಾದ ಅಥವಾ ವೈದಿಕ ತತ್ವಜ್ಞಾನ ಮಾತ್ರ ಪ್ರಚಲಿತವಾಗಲು ಕಾರಣ ?

**ಗೌ** : ಬೌದ್ಧ, ಲೋಕಾಯತವೆಲ್ಲ ರೆವಲ್ಯುಶನರಿ. ವೈದಿಕದ ವಿರುದ್ಧ ಬಂದುದು. ತತ್ವಶಾಸ್ತ್ರದಲ್ಲಿ ಕ್ರಾಂತಿ. ಕ್ರಾಂತಿ ಆದೊಡನೆ ಪ್ರತಿಕ್ರಾಂತಿ. ಕೌಂಟರ್ ರೆವಲ್ಯೂಶನ್. ಮುಖ್ಯವಾಗಿ ಶಂಕರಾಚಾರ್ಯರಿಂದ ನಡೆಯಿತು. ಆಗಿನ ಕಾಲದಲ್ಲಿ ಮುದ್ರಣ, ಪತ್ರಿಕೆ ಇದ್ದಿರಲಿಲ್ಲ. ಮುಖತಃ ವಾದ. ರಾಜರ ಮುಂದೋ ಬೇರೆ ಸಭೆಯ ಮುಂದೋ ಸೋತವರು ಶರಣಾಗಬೇಕು. ಪರಿವರ್ತನೆ ಮಾಡಲು ಬಂದವರೇ ಪರಿವರ್ತನೆಯಾದರು. ಶಂಕರಾಚಾರ್ಯ ಬೌದ್ಧ ಧರ್ಮದ ಅನೇಕ ಸಂಗತಿಗಳನ್ನು ತಾವೇ ತೆಗೆದುಕೊಂಡಿದ್ದಾರೆ. 'ಮಾಯಾವಾದ' ಅಥವಾ 'ಶೂನ್ಯವಾದ', ಇದನ್ನು ಬೌದ್ಧದಿಂದ ತೆಗೆದುಕೊಂಡರು. ಶಂಕರಾಚಾರ್ಯರಿಗೆ ಪ್ರಚ್ಛನ್ನ ಬುದ್ಧ ಎಂದೂ ಅನ್ನುತ್ತಿದ್ದರು. ಅಹಂ ಬ್ರಹ್ಮಾಸ್ಮಿ. ಆತ್ಮ ಬ್ರಹ್ಮನ ಅಂಶ. ಅಂತಿಮ ಮೋಕ್ಷ; ಬ್ರಹ್ಮನಲ್ಲೇ ಲೀನ. ಇತರೇ ತತ್ವಜ್ಞಾನ ಪ್ರಚಾರಕ್ಕೆ ಬಾರದಿರಲು ಮುಂದೆ ಅವು ತಮ್ಮ ತಮ್ಮಲ್ಲಿಯ ದೋಷಗಳಿಂದ ದುರ್ಬಲತೆಗಳಿಂದ ಅಸ್ತಂಗತವಾದವು. ಬೌದ್ಧಮತವಂತೂ ಭಾರತದ ಹೊರಗೆ ಸಿಲೋನ್, ಜಪಾನ್, ಚೀನಾದೇಶಗಳಲ್ಲಿ ಪ್ರಚಾರವಾಯಿತು. ರೂಪಾಂತರವೂ ಆಯಿತು.

**ಸಂ** : ಅಷ್ಟಿದ್ದರೂ ಶಂಕರರು ಚಾತುರ್ವರ್ಣ್ಯ, ಅಂದ್ರೆ ಜಾತಿಯ ಶ್ರೇಣೀಕರಣವನ್ನು, ಅಲ್ಲಗಳೆಯಲಿಲ್ಲ.

**ಗೌ** : ಇಲ್ಲ, ಅವರು ಕೊನೆಗೂ ವೇದ ಪ್ರಾಮಾಣ್ಯಕ್ಕೇ, ಸ್ಮೃತಿ ಪ್ರಾಮಾಣ್ಯಕ್ಕೇ ಶರಣಾದರು.

**ಸಂ** : ಅದನ್ನು ಅಲ್ಲಗಳೆಯಬಹುದಿತ್ತಲ್ಲ ? ಆಗ ಬೌದ್ಧ ಬಹಳ ಪ್ರಬಲವಾದುದರಿಂದ ಚಾತುರ್ವರ್ಣ್ಯವನ್ನು ಅಲ್ಲಗಳೆದು ಒಗ್ಗಟ್ಟು ಬೆಳೆಯಲು ಪ್ರೇರೇಪಿಸಿದ್ದರೆ ಆಗ ಬ್ರಾಹ್ಮಣರು ಒಪ್ಪಿಕೊಳ್ಳಬಹುದಿತ್ತು. ಹೇಗೆ ಗಾಂಧೀಜಿ ಅಸ್ಪೃಶ್ಯತಾ ನಿವಾರಣೆ ಅಂದಿನ ರಾಷ್ಟ್ರೀಯ ಕಾಂಗ್ರೆಸ್ಸಿನ ಒಂದು ವಿಧಿ ಎಂದರೂ...

**ಗೌ** : ಮಾಡಬಹುದಿತ್ತು. ಆದರೆ ಮಾಡಲಿಲ್ಲ. ಅದಕ್ಕೆ ಅನೇಕ ಕಾರಣ : ಮುಖ್ಯವಾಗಿ ಎರಡು. ಒಂದು ವರ್ಗ ಸ್ವಭಾವ; ತಾನೇ ಸ್ವತಃ ಬ್ರಾಹ್ಮಣನಾಗಿ ಆ ವರ್ಣದ ಹಿತಾಸಕ್ತಿ ಕಾಯುವುದು. ಎರಡನೆಯದಾಗಿ ವರ್ಣ - ಈಗಿನಷ್ಟು ಜಾತಿ ಇದ್ದಿರಲಿಲ್ಲ. ಅಲ್ಲದೆ ಇಟ್ ವಾಸ್ ಟೇಕನ್ ಫಾರ್ ಗ್ರ್ಯಾಂಟೆಡ್, ಸ್ವೀಕೃತ ಪರಿಕಲ್ಪನೆ. ವಾಡಿಕೆಯಿಂದ ಅನುಕರಣೆ. ಕರ್ಮ : ನೋಡಿ ಕಲಿಯುವುದು ಸಂಸ್ಕಾರ. ತಂದೆಯನ್ನು ನೋಡಿ ಮಗ ಕಲಿತ. ಇದು ಕಾಲಕ್ರಮದಲ್ಲಿ ಡಿವಿಜನ್ ಆಫ್ ಲೇಬರ್ ಆಯಿತು. ಶ್ರಮ ವಿಭಜನೆ. ಅದೇ ವರ್ಣ. ವರ್ಣವೆಂದರೆ ವರಿಸುವುದು. ಚಾಯ್ಸ್. ತಂದೆಯೇ ಮಗನಿಗೆ ಗುರು. ಬೇರೆ ಚಾಯ್ಸ್ ಇಲ್ಲ. ಕಸುಬಿಗೆ ಕುಲ. ಅದೇ ಜಾತಿ.

ಜನ್ಮದಿಂದ ಜಾತಿ. ಜನ್ಮನಾ ಜಾಯತೇ ಶೂದ್ರಃ.

*ಡಾ॥ ಗೌರೀಶ ಕಾಯ್ಕಿಣಿಯವರು ಉತ್ತಮ ಕವಿಗಳು, ನಾಡಿನ ಮುಖ್ಯ ಗೀತ ನಾಟಕಕಾರರಲ್ಲಿ ಅವರೊಬ್ಬರು. ನಾಟಕಕಾರರು, ಮೇಲಾಗಿ ವಿಮರ್ಶಕರು. ಆದರೂ ನಾಡಿನಲ್ಲಿ ವಿಚಾರವಾದಿಗಳೆಂದೇ ಖ್ಯಾತಿ ಪಡೆದವರು. ಮಾರ್ಕ್ಸ್‌ವಾದ, ನವಮಾನವತಾವಾದ, ವಿಚಾರವಾದ, ನಾಸ್ತಿಕ ಮತ್ತು ದೇವರು, ಚಾರ್ವಾಕ ದರ್ಶನವೇ ಮೊದಲಾದ ಗಟ್ಟಿಜನಗಳನ್ನು ಕನ್ನಡದ ವಿಚಾರವಾದಿ ಸಾಹಿತ್ಯದ ಕಣಜಕ್ಕೆ ತುಂಬುತ್ತಲೇ ಬಂದವರು. ಅವರಿಗೀಗ ೯೦ರ ಹರೆಯ. ಆದರೂ ವೈಚಾರಿಕ ಬದ್ಧತೆಯಿಂದ ಹಿಮ್ಮುಖವಿಲ್ಲ.*

ಸಂಸ್ಕಾರಾತ್ ದ್ವಿಜ ಉಚ್ಯತೇ. ಅದು ಜಾತಿಗೆ ಪ್ರೇರಕವಾಯಿತು. ಇದು ಧರ್ಮದಲ್ಲೇ ಸೇರಿಕೊಂಡಿತು. ಲಿಂಗಭೇದ ಕೂಡ ಧರ್ಮದ ಅಂಗವೇ ಆಯಿತು. ಜನ್ಮ ಒಂದೇ ಮುಖ್ಯವಾಗಿ ಕಾಸ್ಟ್ ಆಯಿತು.

ತತ್ವಜ್ಞಾನ ಬೇರೆ, ಧರ್ಮ ಬೇರೆ. ತತ್ವಜ್ಞಾನ, ವೈಚಾರಿಕತೆ, ಚಿಂತನೆಯ ಅಂತಿಮ ಫಲ. ಆದರೆ ಧರ್ಮ, ನಡವಳಿಕೆ, ಪೀನಲ್ ಕೋಡ್ ಇದ್ದಹಾಗೆ. ಆದರೂ ಈ ಪೀನಲ್ ಕೋಡಿಗೂ ಅಂದರೆ ಧರ್ಮಕ್ಕೂ ಅದೇ ಆವರಣದಲ್ಲಿ ಹುಟ್ಟಿಕೊಂಡ ತತ್ವಜ್ಞಾನಕ್ಕೂ ಗಂಟುಹಾಕಲಾಗಿದೆ. ಧರ್ಮ ಹಾಗೂ ತತ್ವಜ್ಞಾನ ಹಾಗೆ ಹೊಂದಿಕೊಂಡೇ ಬಂದಿರಬಹುದು. ಜ್ಞಾನವು ಮಾನವನ ಚಿಂತನೆಯ ಕೂಸು. ಅದು ಧಾರ್ಮಿಕ ಚಿಂತನೆಯಾಗೂ ಕವಲೊಡೆಯಿತು. ಎಲ್ಲ ಧರ್ಮಗಳಲ್ಲೂ ತತ್ವಜ್ಞಾನವಿದೆ. ಬೈಬಲ್, ಕುರಾನ್, ಇತ್ಯಾದಿ. ಅವೇ ಧರ್ಮವಾಗಿದೆ. ಅದರಲ್ಲೇ ಧಾರ್ಮಿಕ ನಡವಳಿಕೆಗಳು, ನಂಬಿಕೆ ಇತ್ಯಾದಿ. ಧರ್ಮವನ್ನು ರಕ್ಷಿಸಬೇಕು. ಅಂದರೆ ಅದು ನಮ್ಮನ್ನು ರಕ್ಷಿಸುತ್ತದೆ. ಧರ್ಮೋ ರಕ್ಷತಿ ರಕ್ಷಿತಃ ಎನ್ನುತ್ತಾರೆ. ಧರ್ಮ ಎಂದರೆ ಧಾರಣ, ಸಮಾಜವನ್ನು ನಡೆಸುವ ಧಾರಣ ಶಕ್ತಿ. ಹೀಗೆ ವ್ಯಾಖ್ಯಾನ.

ನಿಸರ್ಗದ ನಡುವೆ ಬದುಕುವ ಮಾನವ ಅಲ್ಲಿಯ ವೈಚಿತ್ರ್ಯಗಳಿಗೆ ಬೆರಗಾದ. ಆ ರಹಸ್ಯಕ್ಕೆ ಭಯಭೀತನಾದ. ಆ ಭಯದಿಂದ ಅಂತರ್ಮುಖಿತೆ. ಅರ ಚಿಂತನೆಯ ಕೊನೆಗೆ ಹುಟ್ಟಿದ್ದು ದೇವರು. ಆ ಸಂಶೋಧನೆಯಲ್ಲಿ ತತ್ವಜ್ಞಾನ ಹುಟ್ಟಿದ್ದು. ಫಿಯರ್ ಆಫ್ ದ ಲಾರ್ಡ್ ವಾಸ್ ದ ಬಿಗಿನಿಂಗ್ ಆಫ್ ವಿಸ್ಡಂ. ತತ್ವ = ತತ್ವಜ್ಞಾನ, ಮೂರ್ತದಿಂದ ಅಮೂರ್ತ, ವಾಸ್ತವದಿಂದ ಅಬ್‌ಸ್ಟ್ರಾಕ್ಟ್.

**ಸಂ :** ಹಾಗಾದ್ರೆ ಭಾವನಾವಾದವೇ ಹೆಚ್ಚು ಪ್ರಚಲಿತವಾಗಲು ಮತ್ತೆ ಬೇರೆ ಕಾರಣ ?

**ಗೌ :** ಭಕ್ತಿ ಪಂಥ. ಲೋಕಾಯತಕ್ಕೆ ಪ್ರತಿರೋಧವಾಗಿ, ಕೌಂಟರ್ ಆಗಿ, ಭಕ್ತಿವಾದ ಹುಟ್ಟಿಕೊಂಡಿತು. ಲೋಕಾಯತದ ತರ್ಕ - ವಿಜ್ಞಾನ ಸಾಮಾನ್ಯರಿಗೆ ಸಾಧ್ಯವಾಗಲಿಲ್ಲವೇನೋ. ಭಗವದ್ಗೀತೆಯಲ್ಲಿ ಭಕ್ತಿವಾದದ ಮಂಡನೆಯಿದೆ. ಬಹಳ ಆತ್ಮೀಯವಾದ ವರ್ಣನೆ. ಗೀತೆಯೆಂಬ ಗೋವನ್ನು ಕೃಷ್ಣನೇ ಕರೆದು (ಅವನು ಗೋವಳಿಗ ಬೇರೆ) ಭಕ್ತಿಯ ಹಾಲನ್ನು ಕೊಡುತ್ತಾನೆ. ಹಾಗೆಯೇ ಅವತಾರ. ಈ ಅವತಾರದ ಕಲ್ಪನೆ ಮೊದಲು ಇದ್ದಿರಲಿಲ್ಲ. ವೇದದಲ್ಲಿ ಮೂರ್ತಿ ಪೂಜೆ ಇಲ್ಲ. ಆದರೆ ಸ್ಥೂಲವಾಗಿ ಒಂದು ಪ್ರತಿಮಾ ಕಲ್ಪನೆ, ಇಮೇಜ್ ಇತ್ತು. ಪುರುಷ ಸೂಕ್ತದಲ್ಲಿ ಸಮಾಜ ಪುರುಷನ ಇಮೇಜ್ ಬರ್‍ತದೆ. ಮುಂದೆ ಶಂಕರಾಚಾರ್ಯರು ಬೌದ್ಧರಿಂದಲೇ ಮಠದ ಕಲ್ಪನೆಯನ್ನು ತೆಗೆದುಕೊಂಡದ್ದು. ವೇದೋಪನಿಷತ್ ಕಾಲದಲ್ಲಿ ಮಠದ ಕಲ್ಪನೆಯಿಲ್ಲ. ಸನ್ಯಾಸಾಶ್ರಮದ ಕಲ್ಪನೆಯೂ ಇಲ್ಲ. ಅದನ್ನು ಬೌದ್ಧರಿಂದ ತೆಗೆದುಕೊಂಡರು. ಈಗ ಎಲ್ಲೆಲ್ಲೂ ಮಠ. ಕಿಲೋಮೀಟರಿಗೆ ಒಂದೊಂದು ಜಗದ್ಗುರು. ಎಂಥಾ ಜಗತ್ತು ಅದು! ಹಾಗೆಯೇ, ಕರ್ಮ ಮತ್ತು ಪುನರ್ಜನ್ಮದ ಕಲ್ಪನೆ. ಇದು ಜೈನ ಧರ್ಮದ್ದು. ಜೈನರಿಗೆ ದೇವರಿಲ್ಲ. ಆದರೆ ಕರ್ಮದಲ್ಲಿ ನಂಬಿಗೆ. ಆದ್ದರಿಂದ ಪುನರ್ಜನ್ಮದಲ್ಲೂ. ಬೌದ್ಧರಲ್ಲೂ ಕರ್ಮ. ಇವೆಲ್ಲದರ ಪರಿಣಾಮ ಸಾಮಾನ್ಯ ಜನರ ಮೇಲೂ ಆಯಿತು. ಕರ್ಮ ಹೆಚ್ಚು ಪ್ರಚಲಿತವಾದದ್ದು ಪುರಾಣಗಳಿಂದ. ಆದ್ದರಿಂದ ವಿಜ್ಞಾನವಾದದ, ಅಂದ್ರೆ ಭೌತವಾದದ, ಸತರ್ಕತೆಗಿಂತ ದೊಡ್ಡವರು ಹೇಳಿದ್ದರಲ್ಲಿ ನಂಬಿಗೆ ಸುಲಭವಾಯ್ತು. ದೇವರು ಸುಲಭವಾದ, ಆಡಂಬರ ರಹಿತವಾದ ಸಂಸ್ಕೃತದಿಂದಲೂ ಬಿಡಿಸಿಕೊಂಡ.

**ಸಂ :** ಭಕ್ತಿವಾದ ಕೂಡ ಒಂದು ಪ್ರತಿಭಟನೆ ಎನ್ನುತ್ತಾರಲ್ಲ ?

**ಗೌ :** ಹೌದು. ಅದು ಪುರೋಹಿತಶಾಹಿಗೆ ವಿರುದ್ಧವಾಗಿ ಬಂದಾಗ ಕ್ರಾಂತಿಕಾರಕವಾಯ್ತು. ಭಕ್ತರು ದೇವರನ್ನು ನಿರಾಕರಿಸದಿದ್ದರೂ ಅವನನ್ನು ಸುಧಾರಿಸಿದರು. ಅಂದರೆ ದೇವರನ್ನು ಆಧಾರದ ಅನುಗೋಲನ್ನಾಗಿ ಮಾಡಿಕೊಂಡೇ ಜಾತಿಯನ್ನು, ಅಸ್ಪೃಶ್ಯತೆಯನ್ನು ತಿರಸ್ಕರಿಸಿದರು, ಎದುರಿಸಿದರು. ಅದು ಕೂಡ ವಿಶಿಷ್ಟವಾದ ಹಿತಾಸಕ್ತರ ಕೈಗೆ ಹೋಯಿತು. ಅದು ಕ್ರಾಂತಿಕಾರಕ ಆಗುವ ಬದಲು ಮೌಢ್ಯವಾಯ್ತು.

**ಸಂ :** ಭಾರತೀಯ ತತ್ವಜ್ಞಾನವನ್ನು ಅಭ್ಯಸಿಸುವ ಶಿಸ್ತು ಯಾವ್ದು ?

**ಗೌ :** ಹಾಗೆ ಒಂದು ಶಾಸ್ತ್ರ ಪುಸ್ತಕ ಅದಕ್ಕಿಲ್ಲ. ಭಾರತೀಯ ತತ್ವಜ್ಞಾನ ಅಭ್ಯಾಸವಾಗುವುದು ಪ್ರಸ್ಥಾನ ತ್ರಯಿಯಿಂದ. ತ್ರಯೀ ಎಂದರೆ ಮೂರು; ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ. ಈ ಮೂರಕ್ಕೆ ಎಲ್ಲರೂ ಭಾಷ್ಯ ಬರೆದರು. ಶಂಕರ, ಮಧ್ವ, ರಾಮಾನುಜ, ಶ್ರೀಕರ, ಇತ್ಯಾದಿ. ಹೀಗೆ ಎಲ್ಲರೂ ಇದರ ಅಭ್ಯಾಸ ಮಾಡಿ ವ್ಯಾಖ್ಯಾನ ಬರೆದು ಬೇರೆ ಬೇರೆ ಸಿದ್ಧಾಂತವನ್ನು ಸಾರಿದ್ರು.

**ಸಂ :** ಆದರೆ ವಾದ ವಿವಾದ ನಡೆಯುತ್ತಿತ್ತಲ್ಲ !

**ಗೌ :** ಹೌದು. ಎರಡು ಸಿದ್ಧಾಂತಗಳ ಮಧ್ಯೆ ವಾದ. ಹಾಗೆ ವಾದ ಮಾಡುವಾಗ ತಾನು ಏನನ್ನು ಖಂಡಿಸಬೇಕು ಎನ್ನುವುದನ್ನು ಮೊದಲೇ ಗ್ರಹಿಸಿ ಆ ಅಂಶವನ್ನು ಮೊದಲು ನಿರೂಪಿಸ್ತಾರೆ. ಅದಕ್ಕೆ ಪೂರ್ವಪಕ್ಷ ಎಂದು ಹೆಸರು. ನಂತರ ಅದನ್ನು ಖಂಡಿಸುವುದು ಉತ್ತರ ಪಕ್ಷ. ಇದಾದ ಮೇಲೆ ಸಿದ್ಧಾಂತ. ಹೀಗೆ ಒಂದು ತರ್ಕ ಪದ್ಧತಿ ಇದು.

**ಸಂ :** ಉಪನಿಷತ್ತಿನ ಸಂದರ್ಭದಲ್ಲಿ ಅವರು ಜಾತಿ ಅಥವಾ ವರ್ಣದ ಬಗ್ಗೆ ಗ್ರಹಿಸಲಿಲ್ವಾ ?

**ಗೌ :** ಇಲ್ಲ, ಅವಶ್ಯ ಬೀಳಲಿಲ್ಲ. ಅವರು ಕೇವಲ ಬ್ರಹ್ಮದ ತರ್ಕದಲ್ಲಿ ಉಳಿದರು. ಅವರಿಗೆ ಇತರ ವರ್ಣದವರೊಡನೆ ಸಂಬಂಧ ಯಾವುದು ? ರಾಜರು (ಕ್ಷತ್ರಿಯರು) ಒಂದು ವರ್ಣ. ಅವರು ಬ್ರಾಹ್ಮಣರಿಗೇ ಆಶ್ರಯದಾತರಾಗಿದ್ರು. ಅಲ್ಲದೆ ಅವರು ರಾಜ್ಯಾಧಿಕಾರ ತೊರೆದ ಮೇಲೆ ಬ್ರಹ್ಮಜಿಜ್ಞಾಸೆಯಲ್ಲಿ ತೊಡಗಿರುತ್ತಿದ್ರು. ವೈಶ್ಯರು ವಾಣಿಜ್ಯಕ್ಕೆ ಜವಾಬ್ದಾರ್‍ರು. ಹಣ ಇದೆ ಅಂದ್ಮೇಲೆ ಅವರನ್ನು ದೂರ ಇರಿಸುವ ಪ್ರಶ್ನೆಯೇ ಇಲ್ಲ. ಇನ್ನು ಶೂದ್ರರು. ಶೂದ್ರರೆಂದರೆ ಕಾರ್ಮಿಕ ವರ್ಗ. ಇಂದಿನ ಕಾರ್ಮಿಕ ವರ್ಗದ ಪರಿಕಲ್ಪನೆಗೆ ಹೊಂದುವಂತಹದು. ಅವರಿಗೆ ಅಕ್ಷರವಿದ್ದಿರಲಿಲ್ಲ. ಮೇಲಾಗಿ ದುಡಿಯುವವರು. ಇದನ್ನೇನೂ ಅವರು ಪ್ರಶ್ನಿಸುವ ಸ್ಥಿತಿಯಲ್ಲಿರಲಿಲ್ಲ. ಆದ್ದರಿಂದ ನಾನು ಮೊದಲೇ ಹೇಳಿದ ಹಾಗೆ ಟೇಕನ್ ಫಾರ್ ಗ್ರ್ಯಾಂಟೆಡ್, ಒಪ್ಪಿತ ಕಲ್ಪನೆ. ವೇದಾಂತಿಗಳಿಗೇನೂ ಅನ್ನದ ಕೊರತೆ ಇದ್ದಿರಲಿಲ್ಲ. ಆದ್ದರಿಂದ ವರ್ಣ-ಜಾತಿಯ ಪದ್ಧತಿ ಅವರಿಗೆ ಅನುಕೂಲವೇ ಆಗಿದ್ದುದರಿಂದ ಅವರು ಪೂರ್ಣವಾಗಿ ಬ್ರಹ್ಮಜಿಜ್ಞಾಸೆಯಲ್ಲೇ ಉಳಿದರು. ಮತ್ತು ಜಾತಿ ಅಷ್ಟೊಂದು - ರಿಜಿಡ್ ಆಗಿರಲಿಲ್ಲ. ಅನುಲೋಮ ವಿವಾಹ ನಡೆಯುತ್ತಿತ್ತು. ಪ್ರತಿಲೋಮ ಆಗುತ್ತಿರಲಿಲ್ಲ. ಹಾಗೆ ಆದರೆ ಸಿರ್ಸಿ ಮಾರಿಕಾಂಬ ಕಥೆಯೊಂದು ಹುಟ್ಟಿಬರುತ್ತಿತ್ತು ಅಷ್ಟೆ. ಅದಕ್ಕೆ ಚರಿತ್ರೆಯೇ ಕಾರಣ. ಆಗ ಅದಕ್ಕೂ ಹಿಂದಿಗಿಂತ ಉತ್ಪತ್ತಿಯ ಸಮೃದ್ಧಿ ಹೆಚ್ಚಾಗಿತ್ತು.

**ಸಂ :** ಉಪನಿಷತ್ತಿನಲ್ಲಿ ಕೇವಲ ಭಾವನಾವಾದದ ಕಲ್ಪನೆ ಮಾತ್ರ ಉಂಟೋ...

**ಗೌ :** ಉಪನಿಷತ್ತು ಒಬ್ಬರ ರಚನೆ ಅಲ್ಲ. ಅಲ್ಲಿ ಭೌತವಾದದ ಎಳೆಯನ್ನು ಕೂಡ ಗುರುತಿಸಬಹುದು. ಆದರೆ, ಅದರ ಮುಖ್ಯವಸ್ತು ಅಧ್ಯಾತ್ಮವಾದ.

**ಸಂ :** ಕಳೆದ ತಿಂಗಳ ೨೯ರಂದು ಕಾರವಾರದಲ್ಲಿ ಕರ್ನಾಟಕ ರಾಜ್ಯ ಅಕಾಡೆಮಿಯವರು ಏರ್ಪಡಿಸಿದ ಪ್ರಶಸ್ತಿ ಪ್ರದಾನ ಸಮಾರಂಭದ ಮುಖ್ಯ ಅತಿಥಿಗಳಾಗಿ ಖ್ಯಾತ ಕಾದಂಬರಿಕಾರ ಎಸ್. ಎಲ್. ಭೈರಪ್ಪನವರು ಮಾತನಾಡುತ್ತಾ ಭಗವದ್ಗೀತೆಯನ್ನು ಸಮಾಜಶಾಸ್ತ್ರೀಯ ದೃಷ್ಟಿಯಿಂದ ನೋಡುವುದು ಬೇಡ, ಚಾತುರ್ವರ್ಣ್ಯ ಇತ್ಯಾದಿಗಳನ್ನು ಆಗಲೇ ವಿವೇಕಾನಂದನಂಥವರು ಖಂಡಿಸಿಯಾಗಿದೆ. ಈಗ ಜಾತಿಯನ್ನು ಯಾರು ಗಮನಿಸುತ್ತಾರೆ ? ಅದನ್ನುಳಿದು ನೋಡಿದರೆ ಜಗತ್ತಿನಲ್ಲೇ ಗೀತೆ ಶ್ರೇಷ್ಠ ತತ್ವಜ್ಞಾನ, ಎಂದರು. ನನ್ನಂಥವನಿಗೆ ಕಾಡುವ ಪ್ರಶ್ನೆಯೆಂದರೆ, ಹಾಗೆ ಮಾಡಲಾದೀತೆ ಎಂಬುದು. ಹಾಗೆ ನೋಡುವುದು ಭೈರಪ್ಪನವರ ವರ್ಗ ಸ್ವಭಾವವನ್ನು ಹೇಳಿದಂತಾಗುವುದಿಲ್ಲವೇ ?

**ಗೌ :** ಸರಿ. ಹಾಗೆ ಗೀತೆಯಲ್ಲಿ ನಮಗೆ ಬೇಕಾದುದನ್ನೇ ಆರಿಸಿಕೊಂಡು ಕಸಿಮಾಡಬಹುದು. ಆದರೆ ಅದು ಗೀತೆಯ ಪೂರ್ಣಪಾಠ ಆಗುವುದಿಲ್ಲ. ಅದರಲ್ಲಿಯ ಕೆಲವು ಸಂಗತಿಗಳನ್ನು ತೆಗೆದುಕೊಂಡು ಕಸಿಮಾಡುವುದು ಬೇರೆ, ಗೀತೆಯನ್ನೇ ಸಮಾಜಶಾಸ್ತ್ರೀಯ ದೃಷ್ಟಿಯಿಂದ ನೋಡುವುದು ಬೇರೆ. ಎಲ್ಲಿ ಹೋಗಿದೆ ಜಾತಿ ? ಯಾರೇ ಎಷ್ಟೇ ವರ್ಷದ ಹಿಂದೆ ಖಂಡಿಸಿರಲಿ ! ಅಲ್ಲಲ್ಲಿ ಕೆಲ ಪ್ರಬಲವಾದ ಪ್ರತಿಭಟನೆ ನಡೆದಿದ್ದೇನೋ ಹೌದು. ಆದರೆ ನಮ್ಮೆದುರೇ ಇದೆಯಲ್ಲ. ಗೀತೆ ಕ್ರಾಂತಿಕಾರಿಯಲ್ಲ. ಅಲ್ಲಿ ಹೆಂಗಸರ ಮತ್ತು ಶೂದ್ರರ



ಶ್ರೀಮತಿ ಶಾಂತಾ ಗೌರೀಶ್ ಕಾಯ್ಕಿಣಿ ಜೊತೆ ಗೌರೀಶರು

ಉದ್ಧಾರದ ಬಗ್ಗೆ ಒತ್ತುಕೊಟ್ಟಿಲ್ಲ. ಆದರೆ ಅದನ್ನು ಕೃಷ್ಣನೇ ಸಾರಿದ್ದಲ್ಲ. ಆಗಿನ ಸಮಾಜದ ರೂಢಿಯನ್ನೇ ಹಿ ಟುಕ್ ಇಟ್ ಫಾರ್ ಗ್ರ್ಯಾಂಟೆಡ್. ಅದಕ್ಕೇ ಅವನು ವೈದಿಕಭಾವನೆಗೆ ವಿರುದ್ಧವಾಗಿ ಭಕ್ತಿಮಾರ್ಗಕ್ಕೆ ಮಹತ್ವ ನೀಡಿದ, ಹೊಸ ದೃಷ್ಟಿಕೋನ ತೋರಿದ ಪಂಡಿತ : ಸಮದರ್ಶಿನಿ.

ಅಷ್ಟಾಗಿಯೂ, ಭೈರಪ್ಪನವರು ಮೂಲಭೂತವಾದವನ್ನು ಎತ್ತಿಹಿಡಿಯುವುದಿಲ್ಲ. ಅದಕ್ಕೆ 'ದಾಟು' ಕಾದಂಬರಿ ಸ್ಪಷ್ಟವಿದೆ.

**ಸಂ** : ತತ್ವಜ್ಞಾನದೊಡನೆ ಧರ್ಮದ ಹೊಂದಾಣಿಕೆ ಇರಬೇಕಾಗಿಲ್ಲವೆಂದರೂ ಇದ್ದುದಂತೂ ನಮ್ಮ ಮುಂದಿದೆ. ಆದ್ದರಿಂದ ಈಗಿರುವ ಮೂಲಭೂತವಾದಿತ್ವದ ಬಗ್ಗೆ ಯಾವ ಬಗೆಯ ತತ್ವಜ್ಞಾನ ?

**ಗೌ** : ಮತಾಂಧತೆಯೇ ಮೂಲಭೂತವಾದ. ತತ್ವಜ್ಞಾನಕ್ಕೂ ಮೂಲಭೂತವಾದಕ್ಕೂ ಗಂಟು ಇರಬೇಕಾದುದಿಲ್ಲ, ಇರಬಾರದು. ಇರುವುದೂ ಇಲ್ಲ. ತತ್ವಜ್ಞಾನ ಜೀವನದ ಸಮರಸವನ್ನು ಅಲ್ಲಗಳೆಯಬೇಕಾದುದಿಲ್ಲ. ಅವರು ಜಗತ್ತನ್ನೇ ಮಾಯೆ - ಶೂನ್ಯ - ಎಂದರೂ ಸಹ ವ್ಯಾವಹಾರಿಕ ಸತ್ಯ ಎಂದಾದರೂ ಒಪ್ಪಿಕೊಳ್ಳುತ್ತಾರೆ. ಒಪ್ಪಿಕೊಳ್ಳುತ್ತಾರೆ ಎಂದರೆ ಒಪ್ಪಿಕೊಳ್ಳ ಬೇಕಾದ ಅವಶ್ಯಕತೆಯಿದೆ ! ಎಲ್ಲವೂ ಅಸತ್ಯ - ಶೂನ್ಯ - ಎಂದುಕೊಳ್ಳುತ್ತಾ ಹಸಿವಾಗುವುದನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ. ಎಲ್ಲ ತತ್ವಜ್ಞಾನಕ್ಕೂ ಭೌತವೇ ಮೂಲ : ಹೂವಿಗೆ ಬೇರು ಇದ್ದಂತೆ. ಆದ್ದರಿಂದ ಮತ ಸೌಹಾರ್ದತೆ ಉತ್ತಮ ಸಮಾಜಕ್ಕೆ ಅವಶ್ಯಕ. ನಾನು ನನ್ನ ಮತವನ್ನು, ತತ್ವವನ್ನು ಗೌರವಿಸುವಂತೆ ಉಳಿದವರಿಗೂ ಅವರವರ ನಂಬಿಕೆಯ ಗೌರವ ಸಲ್ಲಬೇಕು. ಅದು ನಿಜವಾದ ಧಾರ್ಮಿಕತೆ. ಮೊದಲೇ ನಾನು ಹೇಳಿದ್ದೆನಲ್ಲ, ಧಾರಣ ಮಾಡುವುದು ಧರ್ಮ. ಏನನ್ನು ಧಾರಣ ಮಾಡುವುದು ? ಸಮಾಜ ಜೀವನದ ಸೌಹಾರ್ದತೆಯ ಧಾರಣ. ಆದ್ದರಿಂದ ಧರ್ಮ ಕುರುಡಾಗಿ, ಮತ ಮೌಢ್ಯವಾಗಿ ಮತಾಂಧತೆ ಆಗಕೂಡದು. ಜನಾಂಗೀಯವಾಗಲೀ ಪಂಥೀಯವಾಗಲಿ, ಅದು ಮತಾಂಧತೆ ಆಗಬಾರದು. ಅದನ್ನು ನಿಜವಾದ ಧಾರ್ಮಿಕ ವ್ಯಕ್ತಿ ಒಪ್ಪುವುದಿಲ್ಲ. ಆದ್ದರಿಂದ ಧರ್ಮದಲ್ಲಿ ನಂಬಿಕೆ ಉಳ್ಳವರು ಧರ್ಮಾಂಧರಾಗಬೇಕಾದ ಅಂದರೆ ಮೂಲಭೂತವಾದಿಗಳಾಗಬೇಕಾದ ಅವಶ್ಯಕತೆಯಿಲ್ಲ. ಆಗಲೇಬಾರದು. ಯಾಕೆಂದರೆ ಧರ್ಮಕ್ಕೆ ದಯೆ, ಸಜ್ಜನಿಕೆ, ಸುಸಂಸ್ಕೃತತೆ ಇತ್ಯಾದಿ ಅರ್ಥವೂ ಇದೆ.

**ಸಂ** : ಅಫಗಾನಿಸ್ತಾನದಲ್ಲಿ ಬುದ್ಧಮೂರ್ತಿ ಭಂಜನೆ...

**ಗೌ** : ಅದು ಬರ್ಬರತ್ವ, ಅಸಂಸ್ಕೃತಿ. ಅದು ಕೂಡದು. ನಮ್ಮಲ್ಲಿ ಬಾಬ್ರಿ ಮಸೀದಿ ಧ್ವಂಸ ನಡೆದಿತ್ತಲ್ಲ, ಅದೇ ಲೆವಲ್ ಮೇಲೆ ನಡೆದದ್ದು ಅದು. ಎರಡೂ ಅಷ್ಟೇ ಖಂಡನೀಯ.

**ಸಂ** : ಹಾಗಾದರೆ ನಮ್ಮ ಮುಂದಿನ ತತ್ವಜ್ಞಾನ ಹೇಗಿರಬೇಕು ಎನ್ನುತ್ತೀರಿ ?

**ಗೌ** : ಮುಂದಿನ ತತ್ವಜ್ಞಾನವೇ ವಿಜ್ಞಾನ. ಇದೇನೂ ಹೊಸದಲ್ಲ. ನಮ್ಮ ದರ್ಶನಗಳಲ್ಲೂ ಇದ್ದದ್ದು. ಲೋಕಾಯತ ಆಗಿನ ಕಾಲದ ಜ್ಞಾನವೇ. ಬೌದ್ಧಧರ್ಮ ವಿಜ್ಞಾನವೇ. ಮುಂದೆ ಅದು ಅವತಾರ, ಪುನರ್ಜನ್ಮ ಇತ್ಯಾದಿ ಆಗಿರಬಹುದು. ಸಾಂಖ್ಯದಲ್ಲೂ ಅದು ಇದೆ. ವಿಜ್ಞಾನ ಎನ್ನುವುದು ಭೌತಿಕರಷ್ಟೇ ಹಳೆಯದು, ಅದು ಕಾಲಕಾಲಕ್ಕೆ ಬೆಳವಣಿಗೆ ಹೊಂದುತ್ತಾ ಬಂದಿದೆ. ಆದ್ದರಿಂದ ಇಂಡಿಯಾಕ್ಕೆ ಮುಂದಿನ ತತ್ವಜ್ಞಾನವೆಂದರೆ ವಿಜ್ಞಾನ.

**ಸಂ** : ಕೇಳಿ ಸರ್, ಇಂದು ವಿಜ್ಞಾನ ಎಂಥ ಗಂಡಾಂತರ ತಂದಿದೆ. ಪರಿಸರ ನಾಶ, ಪರಮಾಣು ಬಾಂಬು. ಮನುಷ್ಯ ಸಾವಿರಾರು ವರ್ಷಗಳಿಂದ ಸಾಧಿಸಿದ ಎಲ್ಲ ಪ್ರಗತಿಯನ್ನು ನಿಮಿಷದಲ್ಲಿ ನಾಶಮಾಡಬಲ್ಲದ್ದು ಅದು.

**ಗೌ** : ಅದು ವಿಜ್ಞಾನದ ತಪ್ಪಲ್ಲ, ಮನುಷ್ಯನ ಪ್ರಜ್ಞೆಗೆ ಬಿಟ್ಟ ವಿಷಯ. ನನ್ನ 'ವಿಚಾರವಾದ - ನಿರಾಶಾವಾದ' ಪುಸ್ತಕದಲ್ಲಿ ಇದನ್ನು ಹೆಚ್ಚು ವಿವರಿಸಿದ್ದೇನೆ. ವಿಜ್ಞಾನದಿಂದ ಬಂದಿರುವ ಗಂಡಾಂತರದ ಅರಿವು ಬಂದಿರುವುದೂ ಸಹ ವಿಜ್ಞಾನದ ಪ್ರಕ್ರಿಯೆಯೇ. ಅದಕ್ಕೆ ಪರ್ಯಾಯ ಯಾವುದೆಂದು ಕಂಡುಹಿಡಿಯಲು ವಿಜ್ಞಾನವೇ ಹೇಳಿಕೊಡುತ್ತದೆ. ಅದು ಪ್ರಯೋಗಶೀಲ, ತರ್ಕಬದ್ಧ. ಆದ್ದರಿಂದ ನಿಜವಾದ ಅರ್ಥದಲ್ಲಿ ಅದು ತತ್ವಶಾಸ್ತ್ರ, ಪ್ರಯೋಗಶಾಸ್ತ್ರ. ಲೋಕಾಯತದ ಅಭಿಪ್ರಾಯ ಕೂಡ ತರ್ಕ.

**ಸಂ** : ನೀವು ಮತ್ತೆ ಲೋಕಾಯತದ ಮಾತೆತ್ತಿದ್ದೀರಿ. ಆದರೆ ಲೋಕಾಯತ ಸಾಲ ಮಾಡಿ ತುಪ್ಪ ತಿನ್ನು ಎನ್ನುತ್ತದೆಂದು ನಮ್ಮ ಧಾರ್ಮಿಕ ತತ್ವಜ್ಞಾನಿಗಳು ವ್ಯಂಗ್ಯ ಮಾಡ್ತಾರಲ್ಲ !

**ಗೌ** : ಹೌದು. ಸಾಲ ಮಾಡಿ ತುಪ್ಪ ತಿನ್ನು ಎಂದ್ರು. ಹೆಂಡ ಕುಡಿ ಎನ್ನಲಿಲ್ಲವಲ್ಲ ?

**ಸಂ** : ಅದನ್ನು ನೀವು ನಿಮ್ಮ 'ಚಾರ್ವಾಕ'ದಲ್ಲಿ....

**ಗೌ** : ಹೌದು. ಅಲ್ಲಿ ವಿವರಿಸಿದ್ದೇನೆ. ಚಾರ್ವಾಕರು ಪ್ರಚ್ಛನ್ನರಲ್ಲ, ಭೋಗಿಗಳಲ್ಲ. ಅವರು ತ್ರಿದಂಡಿಗಳು, ಋಷಿಗಳಾಗಿದ್ದರು. ಅವರ ಮಾತಿನಲ್ಲಿ ಭೌತಿಕದ ಒತ್ತನ್ನಷ್ಟೇ ಗ್ರಹಿಸಬೇಕು ಅಷ್ಟೆ. ಈಗ ತುಪ್ಪ ಸುರಿಯುತ್ತಿರುವವರು ಯಾರು ? ಜನಸಾಮಾನ್ಯರಲ್ಲ. ಆವಾಗ ಯಾರು ತುಪ್ಪ ಸುರಿಯುತ್ತಿದ್ದರೋ ಅವರೇ ಇಂದೂ ತುಪ್ಪ ಸುರಿಯುತ್ತಿದ್ದಾರೆ. ವಿಜ್ಞಾನದ ಬೆಳವಣಿಗೆಯನ್ನು ಹತೋಟಿಯಲ್ಲಿಟ್ಟುಕೊಂಡವರು.

**ಸಂ** : ಅಂದರೆ ವಿಜ್ಞಾನದ ಬೆಳವಣಿಗೆ ತನ್ನಿಂದ ತಾನೇ ಸಮಾಜವನ್ನು ಪರಿವರ್ತಿಸದು ಎನ್ನುತ್ತೀರಾ ?

**ಗೌ** : ವಿಜ್ಞಾನ ಕೇವಲ ಉತ್ಪತ್ತಿಯನ್ನು ಮಾತ್ರ ಗ್ರಹಿಸಿದರೆ ಸಾಲದು. ಆ ವಿಜ್ಞಾನ ಯಾರ ಕೈಯಲ್ಲಿದೆ ಎನ್ನುವುದು ಮುಖ್ಯ. ಉತ್ಪತ್ತಿಯಾದರೆ ಸಾಲದು, ಉತ್ಪತ್ತಿಯ ಸ್ವರೂಪ ಎಂಥದು, ಮೋಡ್ ಆಫ್ ಪ್ರೊಡಕ್ಷನ್ ಬಗ್ಗೆ ನೋಡಬೇಕು. ಸಮಾಜ ವ್ಯವಸ್ಥೆಯ ಬಗ್ಗೆ ; ಸ್ಟ್ರಕ್ಚರ್ ಆಫ್ ಸೊಸೈಟಿ ಬದಲಾಗಬೇಕು. ಅದು ಸಮಾಜ ವಿಜ್ಞಾನ.

**ಸಂ** : ಅಂದರೆ ಮಾರ್ಕ್ಸಿಸ್ಟ್ ವ್ಯೂ. ಸಮಾಜವಾದಿ ದೃಷ್ಟಿ. ಹಾಗೆ ಜನಸಾಮಾನ್ಯರ ಪರವಾದವರ ಕೈಯಲ್ಲಿ ವಿಜ್ಞಾನ ಇರಬೇಕಾಗುತ್ತದೆ. ಅದೇ ಮುಂದಿನ ತತ್ವಜ್ಞಾನವೆ ?

**ಗೌ** : ಹೌದು. ಮಾರ್ಕ್ಸವಾದಿ, ಸಾಮ್ಯವಾದಿ, ತತ್ವಜ್ಞಾನ ಸಮಾಜವನ್ನು ಸಮಾನತೆಯ ಆಧಾರದ ಮೇಲೆ ನಿಲ್ಲಿಸುವ ತತ್ವಜ್ಞಾನ.

**ವಿ.ಎನ್. ಹೆಗಡೆ** : ಅಂದರೆ ಇಲ್ಲಿಯವರೆಗಿನ ತತ್ವಜ್ಞಾನ ನಿಂತುಬಿಡಬೇಕು. ಅದಕ್ಕೆ ಭವಿಷ್ಯವಿಲ್ಲ ?

**ಗೌ** : ಅದು ನಿಲ್ಲಲಿ, ಬಿಡಲಿ, ಅದಕ್ಕೆ ಪ್ರತಿಯಾಗಿ ಬರಬೇಕಾದ ತತ್ವಜ್ಞಾನ ಇದು.

**ವಿಟ್ಠಲ ಭಂಡಾರಿ** : ಸರಿ, ಸಂಪೂರ್ಣವಾಗಿ ಹಿಂದಿನ ಅಂದರೆ ಭಾವನಾವಾದಿ ತತ್ವಜ್ಞಾನವನ್ನು ನಿರಾಕರಿಸುವುದೋ ಅಥವಾ ಅದನ್ನು ಮಾರ್ಕ್ಸವಾದಿ ದೃಷ್ಟಿಕೋನದಿಂದ ನೋಡಿ ಅಗತ್ಯವಾದುದನ್ನು ತೆಗೆದುಕೊಳ್ಳುವುದೋ ?

**ಗೌ** : ಮಾರ್ಕ್ಸವಾದಿ ದೃಷ್ಟಿಕೋನದಿಂದ ನೋಡಬೇಕು. ಸಾಮಾಜಿಕ ಸನ್ನಿವೇಶವನ್ನು ನೋಡಬೇಕು. ಇದು ಪರಿವರ್ತನೆಯ ಅವಧಿ.

**ವಿ.ಎನ್. ಹೆಗಡೆ** : ಅದು ಹೇಗೆ ? ಅಲ್ಲಿಂದ ತುಸು ತೆಗೆದುಕೊಳ್ಳುವುದು, ಇಲ್ಲಿಂದ ತುಸು ತೆಗೆದುಕೊಳ್ಳುವುದು, ಅದು ಹೇಗೆ ? ಮೂಲಭೂತವಾಗೇ ಅವು ಭಿನ್ನವಲ್ಲವೆ ?

**ಗೌ** : ಅದು ಆಗುವುದಿಲ್ಲ. ಆದರೆ ಇದು ಪರಿವರ್ತನೆ ಪರ್ಯಾಯ ಕಾಲ. ಚರಿತ್ರೆಯ ಬಗ್ಗೆ ದೃಷ್ಟಿ ಬೇಕು.

**ವಿಟ್ಠಲ ಭಂಡಾರಿ** : ಅಂದರೆ ನಮ್ಮ ಹಿಂದಿನ ತತ್ವಜ್ಞಾನದಲ್ಲಿ ಅಡಕವಾಗಿರುವ ಭೌತವಾದಿ ಸ್ಥಿತಿಯನ್ನು ಗುರುತಿಸಿ ಅದನ್ನು ಜನಕ್ಕೆ ಹೇಳಬೇಕು ಎನ್ನುವುದು.

**ಗೌ** : ಹೌದು, ಶಿಕ್ಷಣ ಕೊಡಬೇಕು. ಎಜ್ಯುಕೇಶನ್, ನಾಟ್ ಎಜಿಟೇಶನ್.

**ವಿ.ಎನ್. ಹೆಗಡೆ** : ಯಾರು ಮಾಡಬೇಕು ? ನೋಡಿ ಈ ಸಾಹಿತ್ಯ ಸಂಸ್ಕೃತಿ ವಿಚಾರದಲ್ಲಿ ಶಿಕ್ಷಕರು ಹೆಚ್ಚಿನ ಪಾತ್ರ ವಹಿಸುತ್ತ ಬರುತ್ತಿದ್ದರು. ಈಗ ಅದು ಸಾಧ್ಯವಾಗದಾಗಿದೆ. ಪತ್ರಿಕೆಗೆ ರಿಪೋರ್ಟ್ ಮಾಡುವಾಗಲೂ, ಒಂದು ಲೇಖನ ಬರೆಯುವಾಗಲೂ ಸರ್ಕಾರದ ಅನುಮತಿ ಪಡೆಯಬೇಕು. ಇದಕ್ಕೆ ಪ್ರಜಾಪ್ರಭುತ್ವ ಅನ್ನುತ್ತೀರಾ ? ಸೃಜನಶೀಲ ಬರಹಕ್ಕೆ ಅನುಮತಿ ಅಗತ್ಯವಿಲ್ಲವಂತೆ. ಸೃಜನಶೀಲ ಎಂದು ಗುರುತಿಸುವವರು ಯಾರು ? ಸರಕಾರ ಅಲ್ಲವೇ ?

**ಶಾಂತಾ ಕಾಯ್ಕಿಣಿ** : ಹೌದು ? ಹಾಗಾದರೆ ನೀವು ಪ್ರತಿಭಟನೆ ಮಾಡಬೇಕು. ಇದೆಂತಹ ಪರಿಸ್ಥಿತಿ ?

**ಗೌ** : ಪ್ರಜಾಪ್ರಭುತ್ವದ ಹೆಸರಲ್ಲೇ ಇದು ನಡೆಯುವುದು. ಆದರೆ ಪ್ರಜಾಪ್ರಭುತ್ವ ಇರಬೇಕು. ನಾಟ್ ಡಿಕ್ಟೇಟರ್‌ಶಿಪ್.

**ವಿಟ್ಠಲ ಭಂಡಾರಿ** : ಇದೂ ಪ್ರಜಾಪ್ರಭುತ್ವವೇ. ಆದರೆ ನಿಜವಾದ ಪ್ರಜಾಪ್ರಭುತ್ವವಲ್ಲ. ಬೂರ್ಜ್ವಾ ಪ್ರಜಾಪ್ರಭುತ್ವ. ನಿಜವಾದ ಪ್ರಜಾಪ್ರಭುತ್ವ ಬರಬೇಕು.

**ಸಂ** : ನೋಡಿ, ಸರಕಾರದೊಡನೆ ಎಂಥಾ ದೊಡ್ಡ ಸೈನ್ಯ ಇದೆ. ಅಸ್ತ್ರಗಳಿವೆ. ಹಾಗಿರುವಾಗ ಪರಿವರ್ತನೆ, ಸಾಮಾಜಿಕ ಕ್ರಾಂತಿ, ಸಾಧ್ಯವೇ ?

**ಗೌ** : ಕಷ್ಟ, ಸದ್ಯಕ್ಕಂತೂ ಕ್ರಾಂತಿ ಕಷ್ಟ. ಆದರೆ ಅದು ಚರಿತ್ರೆಯ ನಡೆಯನ್ನು ಅವಲಂಬಿಸಿದೆ. ನಮ್ಮ ತತ್ವಜ್ಞಾನ ಆ ದಿಸೆಯಲ್ಲೇ ಮುಂದರಿಯಬೇಕು. ಎಜಿಟೇಶನ್ ಕೂಡ ಎಜ್ಯುಕೇಶನ್ ಆಗಬೇಕು. ಅದರ ಹೊರತು ನಮಗೆ ಬೇರೆ ದಾರಿ ಇಲ್ಲ.

**ಸಂ** : ತುಂಬಾ ಉಪಕಾರವಾಯಿತು, ಸರ್. ತಮ್ಮ ಆರೋಗ್ಯವನ್ನು ಗಮನಿಸದೆ ತಾಸು ಗಟ್ಟಲೆ ಮಾತಾಡಿದಿರಿ. ನಿಮಗೆ ನಮಸ್ಕಾರ.

*(ಚಿತ್ರಗಳು : ಆರ್. ವಿ. ಭಂಡಾರಿ)*

**ಡಾ|| ಆರ್. ವಿ. ಭಂಡಾರಿ.**
ಆರೆಅಂಗಡಿ- ೫೮೧ ೪೫೦, ಹೊನ್ನಾವರ - ಉ. ಕ.

# ಪ್ರಪಂಚದ ಪ್ರಥಮರು

ಎಚ್ ಎಮ್ ಟಿ
ಬಹುಮಾನಿತ ಲೇಖನ




**ಹೌ**ದು, ನನಗೆ ಸಂಪೂರ್ಣ ನೆನಪಿದೆ. ನಾನು ಎಂದಿಗೂ ಈ ರೀತಿಯಾಗಿ ತಲೆ ಕೆಡಿಸಿಕೊಂಡವನೇ ಅಲ್ಲ. ಯಾವ ವಿಷಯಕ್ಕೂ ಹೆಚ್ಚಾಗಿ ಚಿಂತಿಸಿದವನೇ ಅಲ್ಲ. ಆದರೆ ಇಂದು ತಲೆ ಕಿತ್ತು ಹೋಗುವುದೇನೋ ಎನ್ನುವಷ್ಟು ಹೊಡೆದುಕೊಳ್ಳಲಾರಂಭಿಸಿತು. ಬಹುಶಃ ಅದು ಟೀ, ಕಾಫಿ, ತಲೆನೋವಿನ ಮಾತ್ರೆಗೆ ಬಗ್ಗುವಂತಹದ್ದು ಅಲ್ಲ. ನಡೆದಿದ್ದಾದರೂ ಇದು:

ಯಥಾರೀತಿಯಾಗಿ ಆಫೀಸ್ ಕೆಲಸ ಮುಗಿಸಿ ಮನೆಗೆ ಬಂದೆ. ಒಂದಷ್ಟು ವಿಶ್ರಾಂತಿ ತೆಗೆದುಕೊಳ್ಳೋಣವೆಂದು ಆರಾಮ ಕುರ್ಚಿಯಲ್ಲಿ ಕುಳಿತೆ. ಹೆಂಡತಿ ಪ್ರೇಮಿ ನಿತ್ಯದ ರೂಢಿಯಂತೆ ಒಂದು ಕಪ್ ಟೀ ತಂದುಕೊಟ್ಟಳು. ಟೀ ಕುಡಿಯುತ್ತಲೇ ಪಕ್ಕದಲ್ಲಿ ಮಗಳು ಪುಟ್ಟಿ ತನ್ನ ಮುಂದೆ ನಾಲ್ಕೈದು ಪುಸ್ತಕಗಳನ್ನು ಹರವಿಕೊಂಡು ಏನೋ ಆಸಕ್ತಿಯಿಂದ ನಮ್ಮತ್ತ ಯಾವ ಲಕ್ಷ್ಯವೂ ಇಲ್ಲದಂತೆ ಕುಳಿತಿರುವುದನ್ನು ಕಂಡೆ. ಟೀ ಕುಡಿದು ಮುಗಿಸಿದಾಗಲೂ ಅವಳು ಬೇರೆ ಕಡೆ ಗಮನ ಹರಿಸಿದಂತೆ ಕಾಣಲಿಲ್ಲ. ನನಗೆ ಸಹಜವಾಗಿಯೇ ಕುತೂಹಲ ಮೂಡಿತು. ಅದೇನೆಂದು ತಿಳಿದುಕೊಳ್ಳಬೇಕೆನಿಸಿತು. ಅದೇ ನಾನು ಮಾಡಿದ ತಪ್ಪು. ಅದು ತಪ್ಪೆಂದು ನನಗೆ ಮೊದಲೇ ಗೊತ್ತಾಗಿದ್ದರೆ ಬಹುಶಃ ಅದನ್ನು ತಿಳಿಯುವ ಪ್ರಯತ್ನವನ್ನೇ ಮಾಡುತ್ತಿರಲಿಲ್ಲ.

''ಏನಮ್ಮಾ ಪುಟ್ಟಿ, ಏನೋ ಹುಡುಕುತ್ತಿದ್ದೀಯಲ್ಲ ?'' ಎಂದು ಕೇಳಿದೆ.

''ಅದೇ ಪಪ್ಪಾ, ವಿಮಾನದಲ್ಲಿ ಮೊದಲು ಯಾರು ಹಾರಿದರು ಅಂತ ಹುಡುಕುತ್ತಿದ್ದೀನಿ.'' ನನ್ನತ್ತ ನೋಡದೇ ಹುಡುಕುವುದನ್ನು ಮುಂದುವರೆಸುತ್ತಲೇ ಹೇಳಿದಳು. ಇಂತಹ ವಿಷಯಗಳನ್ನು ಪುಸ್ತಕದಲ್ಲಿ ಹುಡುಕುವುದು ಸರಿ ಕಾಣಲಿಲ್ಲ.

''ಇಲ್ಲಿ ಬಾ ಪುಟ್ಟಾ ನಾನು ಹೇಳ್ತೀನಿ'' ಎಂದು ಕರೆದೆ. ಪುಟ್ಟಿ ಬಂದು ಪಕ್ಕದಲ್ಲಿಯೇ ಕುಳಿತುಕೊಂಡಳು. ನಾನು ವಿವರಿಸತೊಡಗಿದೆ.

''೧೯೦೩ರ ಡಿಸೆಂಬರ್ ೧೭. ಅಮೆರಿಕಾದ ಅಟ್ಲಾಂಟಿಕ್ ಮಹಾಸಾಗರದ ನಾರ್ತ್ ಕರೋಲಿನಾದ ಕಿಟ್ಟಿಟಾನ್ ಎಂಬ ಮರಳು ಪ್ರದೇಶದ ಪ್ರಾಂತ್ಯ. ಅಲ್ಲಿ ರೈಟ್ ಸಹೋದರರೆಂದೇ ಪ್ರಸಿದ್ಧರಾಗಿರುವ ವಿಲ್ಬರ್ ರೈಟ್ ಹಾಗೂ ಆರ್ವಿಲ್ ರೈಟ್ ಎಂಬ ಸಹೋದರರು ಗಾಳಿಯಲ್ಲಿ ಹಾರುವ ಯಂತ್ರದ ಮೂಲಕ ಹಾರುತ್ತಾ ಈ ಲೋಕಕ್ಕೆ ವಿಮಾನವನ್ನು ಒದಗಿಸಿಕೊಟ್ಟರು.'' ತುಂಬಾ ಶ್ರದ್ಧೆಯಿಂದ ಹೇಳತೊಡಗಿದ್ದೆ.

''ಓ ! ಅದೆಲ್ಲಾ ನನಗೆ ಗೊತ್ತಿದೆ ಪಪ್ಪಾ.'' ಮಗಳು ನೀರಸವಾಗಿ ಹೇಳಿದಾಗ ಒಮ್ಮೆಲೇ ನನಗೆ ತಣ್ಣೀರೆರೆಚಿದಂತಾಯಿತು. ''ಅವರು ಅದನ್ನು ಕಂಡುಹಿಡಿದವರಾಯ್ತು. ಅದಲ್ಲ ನನಗೆ ಬೇಕಾಗಿರುವುದು. ಯಂತ್ರದ ಮೂಲಕ ಗಾಳಿಯಲ್ಲಿ ಹಾರಬಹುದಾದ ಆ ವಿಮಾನದ ಮೂಲಕ ಪ್ರಯಾಣ ಮಾಡಿದ ಮೊದಲ ಪ್ರಯಾಣಿಕನಾರು ?'' ಇದು ಅವಳ ಪ್ರಶ್ನೆ.

''ಇದೊಂದು ತಲೆಹರಟೆಯ ಪ್ರಶ್ನೆ. ನೋಡಮ್ಮ, ನಾವು ಸಾಮಾನ್ಯವಾಗಿ ವಿಮಾನ, ರೈಲ್ವೇ, ಬಸ್ ಮುಂತಾದವುಗಳನ್ನು ಯಾರು ಕಂಡುಹಿಡಿದಿದ್ದಾರೆ ಎಂದು ಹೆಸರಿಸುತ್ತೇವೆಯೇ ಹೊರತು ಅವುಗಳಲ್ಲಿ ಮೊದಲು ಯಾರು ಪ್ರಯಾಣಿಸಿದರೆಂದು ಹೆಸರಿಸುವುದಿಲ್ಲ.'' ನಾನು ಸಮಜಾಯಿಷಿ ಕೊಡಲು ಪ್ರಯತ್ನಿಸಿದೆ.

''ಹಾಗಿದ್ದರೆ ಪಪ್ಪಾ, ಗೌರಿಶಂಕರವನ್ನು ಮೊದಲು ಏರಿದವರ ಹೆಸರು, ಚಂದ್ರನ ಮೇಲೆ ಪ್ರಥಮವಾಗಿ ಕಾಲಿಟ್ಟವರು, ಕ್ರಿಕೆಟ್‌ನಲ್ಲಿ ಮೊದಲ ಹತ್ತು ಸಾವಿರ ರನ್‌ಗಳನ್ನು ಗಳಿಸಿದವರ ಹೆಸರುಗಳನ್ನು ನಮೂದಿಸುವುದಿಲ್ಲವೇ ? ಹಾಗೆಯೇ ಇದು ಕೂಡಾ. ಅಲ್ಲಿ ಪ್ರಯಾಣಿಸಿದ ಮೊದಲ ವ್ಯಕ್ತಿ ಯಾರು ? ಅವರ ಹೆಸರನ್ನೇಕೆ ಹೇಳುವುದಿಲ್ಲ ?''

ನಾನು ಏನೆಂದು ಉತ್ತರಿಸಬೇಕು ಎನ್ನುವ ಗೊಂದಲದಲ್ಲಿರುವಾಗಲೇ ''ಏನು ಪುಟ್ಟಾ ಯಾರ ಹೆಸರು ಬೇಕಾಗಿತ್ತು ?'' ಅಡುಗೆ ಮನೆಯಿಂದ ಹೊರಬರುತ್ತಾ ಪ್ರೇಮಿ ಕೇಳಿದಳು. ಮಗಳು ಎಲ್ಲಾ ವಿವರಿಸಿದಳು.

ನಿಧಾನವಾಗಿ ಕೇಳಿದ ಹೆಂಡತಿ :

''ಹೌದು, ನೀನು ಹೇಳುತ್ತಿರುವುದು ನಿಜ. ಯಾರಾದರೂ ಇರಲೇಬೇಕು.'' ಪುಟ್ಟಿಯ ಪರವಾಗಿ ವಾದಿಸಿದಳು.

''ಸುಳ್ಳು, ಅವನ್ನೆಲ್ಲಾ ದಾಖಲಾಗಿಸುವುದಿಲ್ಲ,'' ನಾನೆಂದೆ.

ಹೆಂಡತಿಗೆ ಒಮ್ಮೆಲೇ ಆವೇಶ ಬಂದಿತು. ''ಯಾವುದು ಸುಳ್ಳು ? ಯಾವ ಮಹಾಶಯ

**ಭೋಜರಾಜ ಸೊಪ್ಪಿಮಠ**

ಈ ಪ್ರಪಂಚದಲ್ಲಿ ಮೊಟ್ಟ ಮೊದಲ ಬಾರಿಗೆ ಸುಳ್ಳನ್ನು ಹೇಳಿದರು ? ಸುಳ್ಳನ್ನು ಹೇಳುವುದರಿಂದ ಆಗಿನ ಸಂದರ್ಭದ ಪರಿಣಾಮದಿಂದ ಬಚಾವಾಗಬಹುದೆಂದು ಆತನಿಗೆ ಗೊತ್ತಾದದ್ದಾದರೂ ಹೇಗೆ ? ಸತ್ಯವನ್ನೇ ತನ್ನ ಪ್ರಾಣವನ್ನಾಗಿ ಮುಡಿಪಾಗಿಟ್ಟುಕೊಂಡ ಹರಿಶ್ಚಂದ್ರನಿಗೆ ಜನರಲ್ ನಾಲೆಡ್ಜ್ ಪುಸ್ತಕದಲ್ಲಿ ಒಂದು ಸ್ಥಾನವನ್ನು ಕಲ್ಪಿಸಿರುವಂತೆಯೇ ಸುಳ್ಳು ಹೇಳಿದವರ ಹೆಸರನ್ನು ಏಕೆ ಬರೆದಿಲ್ಲ? ಸುಳ್ಳು ಇರುವುದರಿಂದಲೇ ಸತ್ಯದ ಬೆಲೆ ಅರಿವಿಗೆ ಬರುವುದು.'' ಹೆಂಡತಿಯ ಮಾತುಗಳಿಗೆ ತಲೆದೂಗಿದೆ. ಅವಳಿಗೆ ತಿಳಿ ಹೇಳುವಂತೆ ನಾನೊಂದು ಉದಾಹರಣೆ ನೀಡಿದೆ:

''ನೋಡು, ನೀನು ಹೇಳುತ್ತಿರುವುದೇನೋ ಸರಿ ಇದೆ. ಇಂತಹ ಅನೇಕ ಪ್ರಶ್ನೆಗಳಿಗೆ ನಮ್ಮಲ್ಲಿ ಉತ್ತರ ಸಿಗುವುದಿಲ್ಲ. ಸಿನಿಮಾ ಯಾರು ಕಂಡುಹಿಡಿದರೆಂದು ನಮಗೆ ಗೊತ್ತಿದೆ. ಅದು ಸಾಮಾನ್ಯಜ್ಞಾನ ಪುಸ್ತಕದಲ್ಲಿ ಸಿಗುತ್ತದೆ. ಆದರೆ ಚಿತ್ರ ರಶ್ ಇದ್ದಾಗ ಬ್ಲಾಕ್‌ನಲ್ಲಿ ಟಿಕೆಟ್ ಮಾರಬೇಕೆಂದು ಯೋಚನೆ ಬಂದಿದ್ದು ಯಾರಿಗೆ ? ಹಾಗೆಯೇ ಬ್ಲಾಕ್‌ನಲ್ಲಿ ಟಿಕೆಟ್ ತೆಗೆದುಕೊಂಡು ಚಿತ್ರವನ್ನು ನೋಡಿದ ಪ್ರಥಮ ವ್ಯಕ್ತಿ ಯಾರು, ಎಂಬುದು ಯಾವ ಪುಸ್ತಕದಲ್ಲಿಯೂ ಸಿಕ್ಕುವುದಿಲ್ಲ.''

''ಅಯ್ಯೋ ಹಾಗೆ ನೋಡಿದರೆ ಇನ್ನೂ ವಿಚಿತ್ರಗಳನ್ನು ಹೇಳಬಹುದು. ಕಲಬೆರಕೆಯ ವಿಷಯವೊಂದಿಷ್ಟು ನೋಡಿ. ಅಕ್ಕಿಗೆ ಕಲ್ಲನ್ನು, ಸಾಸುವೆಗೆ ರಾಗಿ, ಜೀರಿಗೆಗೆ ತಿನ್ನುವ ಸೋಪು, ಕಡಲೆ ಹಿಟ್ಟಿಗೆ ಮೆಕ್ಕೆ ಜೋಳದ ಹಿಟ್ಟು, ಟೀ ಪುಡಿಗೆ ಪತ್ರಾವಳಿ ಎಲೆಯ ಹಿಟ್ಟನ್ನು ಸೇರಿಸಬೇಕೆಂದು, ಹಾಲಿಗೆ ನೀರು, ಬೆಣ್ಣೆಗೆ ಮೈದಾಹಿಟ್ಟನ್ನು ಬೆರೆಸಿ ಮಾರಬೇಕೆಂದೂ ಯಾವ ವ್ಯಾಪಾರಿಗೆ ಮೊದಲು ಹೊಳೆಯಿತು ? ಪ್ರತಿಯೊಂದಕ್ಕೂ ಹೆಸರು ಬರೆದು ಇಡುವಂತಿದ್ದರೆ ಪ್ರತಿಯೊಂದರ ಕಲಬೆರಕೆಯ ಮೂಲ ಪುರುಷರು ಪ್ರಸಿದ್ಧರಾಗಿರುತ್ತಿದ್ದರು.'' ನನ್ನವಳ ಮಾತು.

''ಇಲ್ಲಿ ಕೇಳು ಕಣೇ, ಸರ್ಕಾರಿ ಆಫೀಸುಗಳಲ್ಲಿ ಲಂಚ ಕೊಟ್ಟು ಕೆಲಸ ಮಾಡಿಸಿಕೊಳ್ಳಬೇಕೆಂದು ಮೊದಲು ಯೋಚನೆ ಬಂದಿದ್ದು ಯಾರಿಗೆ ? ಕೊಟ್ಟ ಲಂಚದ ಮೌಲ್ಯ ಎಷ್ಟು ? ವಿದ್ಯಾರ್ಥಿಗಳಿಂದ ವಿದ್ಯಾ ಸಂಸ್ಥೆಗಳಿಗೆ ಡೊನೇಷನ್ ತೆಗೆದುಕೊಳ್ಳಬೇಕೆಂದು ಯೋಚನೆ ಬಂದದ್ದು ಯಾವ ಸಂಸ್ಥೆಗೆ ? ಅವರು ತೆಗೆದುಕೊಂಡ ಡೊನೇಷನ್ ಮೊತ್ತ ಎಷ್ಟು ?'' ನಾ ಕೇಳಿದೆ.

''ಅಲ್ಲರಿ, ಮದುವೆ, ನಾಮಕರಣ, ಸೀಮಂತ ಮುಂತಾದ ಮಂಗಲಮಯ ಕಾರ್ಯಕ್ರಮಗಳಲ್ಲಿ ಉಡುಗೊರೆಗಳನ್ನು ನೀಡಿ ಬಡಬಗ್ಗರಿಗೆ ಮುಜುಗರ ಉಂಟುಮಾಡಿದ ಮಹಾಶಯನಾರು ಇದ್ದಾನು ? ದಿನಾಲೂ ಧರಿಸುವ ಬಟ್ಟೆಗಳಾದ ಪ್ಯಾಂಟ್, ಧೋತಿ, ಲುಂಗಿ, ಸೀರೆ, ಲಂಗ, ಸಲ್ವಾರ್ ಕಮೀಜ್, ಚೂಡಿದಾರ ಮುಂತಾದವುಗಳ ವಿನ್ಯಾಸ ಇದೇ, ರೀತಿಯಾಗಿ ಇರಬೇಕೆಂದು ತಿಳಿದದ್ದು ಯಾರಿಗೆ ?'' ಪ್ರೇಮಿಯ ಪ್ರಶ್ನೆ.

''ಪಪ್ಪಾ, ಪ್ರತಿ ಭಾನುವಾರವೂ ಶಾಲೆಗಳಿಗೆ, ಸರ್ಕಾರಿ ಕಛೇರಿಗಳಿಗೆ ರಜಾ. ಆದರೆ ರಜಾದಿನವಾಗಿ ಮೊದಲ ಭಾನುವಾರ ಎಂದಾಯಿತು. ಮೊದಲ ಭಾನುವಾರ ಯಾವ ತಾರೀಖಿನಿಂದಾಯಿತು ?'' ಸದಾ ರಜೆಯನ್ನೇ ಬಯಸುತ್ತಿದ್ದ ಪುಟ್ಟಿಯ ಪುಟ್ಟದಾದ, ಅಷ್ಟೇ ಘೋರವಾದ ಪ್ರಶ್ನೆ. ಹೀಗೆಯೇ ಪಟ್ಟಿ ಬೆಳೆಯುತ್ತಲೇ ಹೋಯಿತು.

ಪತ್ನಿ ಪ್ರೇಮಿ ಒಮ್ಮೆಲೇ ಉತ್ಸಾಹಭರಿತಳಾಗಿ ''ಅಂಚೆಯ ಸೀಲುಗಳನ್ನು ತಪ್ಪಿಸಿಕೊಂಡು ಬಂದ ಅಂಚೆ ಚೀಟಿಗಳನ್ನು ಮರುಬಳಕೆಗೆ ತೆಗೆದುಕೊಂಡ ವ್ಯಕ್ತಿ ಯಾರು ?'' ನಗುತ್ತಲೇ ಕೇಳಿದಳು. ಒಂದೊಮ್ಮೆ ಅಂಚೆಯ ಸೀಲು ಬಿದ್ದಿರದ ಅಂಚೆ ಚೀಟಿಯೊಂದನ್ನು ನಾನು ಬಳಸಿದ್ದು ನನ್ನವಳು ನೋಡಿದ್ದಳು. ನನ್ನನ್ನು ಕೆಣಕಲೆಂದೇ ಕೇಳಿದ್ದಳು. ನಾನು ಒಡನೆಯೇ ಪ್ರಶ್ನಿಸಿದೆ : ''ನಂಬಿಕೆಯಿಂದ ಸಾಲ ಕೊಟ್ಟು ಪ್ರಥಮವಾಗಿ ಪಂಗನಾಮ ಹಾಕಿಸಿಕೊಂಡವರು ಯಾರು ?'' ಅವಳಲ್ಲಿನ ಅಣಕ ಅಡಗಿತು.

''ಬಸ್‌ನ ಸಂಶೋಧಕ ಯಾರೆಂದು ತಿಳಿದುಕೊಳ್ಳಬಹುದು. ಆದರೆ ವಿಶ್ವದ ಪ್ರಥಮ ಟಿಕೆಟ್‌ಲೆಸ್ ಪ್ರಯಾಣಿಕನಾರು ? ಖಂಡಿತ ಅವನು ಭಾರತೀಯನೇ ಇರಬೇಕು.'' ಹೀಗೆಂದು ಹೇಳಿದಾಗ ಪುಟ್ಟಿ ಅಳಲು ಪ್ರಾರಂಭಿಸಿದರೆ, ''ಅತ್ತರೆ ಕೆಲಸವಾಗುತ್ತದೆಯೆಂದು ಯಾವ ಪುಣ್ಯಾತ್ಮ ಕಂಡುಹಿಡಿದರೋ'' ಹೆಂಡತಿ ಶಾಪ ಹಾಕಿದಳು.

''ದೇವರ ಗುಡಿಯಲ್ಲಿ ಮಂಗಳಾರತಿ ತಟ್ಟೆ ಎದುರಿಗೆ ಬಂದಾಗ ಅದಕ್ಕೆ ದುಡ್ಡು ಹಾಕಬೇಕೆಂದು ಹೊಳೆದದ್ದು ಯಾರಿಗೆ ? ಆ ರೀತಿ ದುಡ್ಡು ಹಾಕಿ ಇತರ ದೈವ ಭಕ್ತರನ್ನು ಸಂಕಟಕ್ಕೆ ಸಿಲುಕಿಸಿದವನು ಯಾರೋ'' ನಾ ಹೇಳಿದೆ.

''ವಿಮಾನದಲ್ಲಿ ಪ್ರಯಾಣಿಸಿದ ಮೊದಲ ವ್ಯಕ್ತಿಯನ್ನು ಕಂಡುಹಿಡಿಯಬೇಕೆಂಬ ಮನಸ್ಸಾದರೂ ನನ್ನಲ್ಲಿ ಏಕೆ ಮೂಡಿತೋ'' ಎಂದು ತನ್ನನ್ನೇ ಗದರಿಕೊಳ್ಳುವಂತೆ ಮಾತನಾಡಿದಳು ಮಗಳು. ನಮ್ಮಿಬ್ಬರ ಜೋರಾದ ಮಾತುಗಳು ಅವಳ ಇನ್ನುಳಿದ ಕೆಲವು ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವುದಕ್ಕೆ ಕಷ್ಟಕರವಾಗುತ್ತಿತ್ತು. ಮಗಳ ಮಾತು ಕೇಳಿ ಏನೋ ಹೇಳಬೇಕೆಂದುಕೊಂಡಿದ್ದ ಹೆಂಡತಿ ಹಾಗೆಯೇ ಸುಮ್ಮನಾದಳು. ಅಷ್ಟು ಹೊತ್ತಿಗಾಗಲೇ ನನ್ನ ತಲೆ ಹೊಡೆದುಕೊಳ್ಳಲಾರಂಭಿಸಿತ್ತು.

**ಭೋಜರಾಜ ಸೊಪ್ಪಿಮಠ**
ಕಿರಿಯ ತರಬೇತಿ ಅಧಿಕಾರಿ, ಐ.ಟಿ.ಐ., ಮಂಡಲಗಿರಿ - ೫೮೩ ೨೩೧
ಯಲಬುರ್ಗಾ, ಕೊಪ್ಪಳ ಜಿಲ್ಲೆ

## ವಿನೋದ ಗಣಿತ

**ಏಪ್ರಿಲ್ ತಿಂಗಳ ಪ್ರಶ್ನೆಗೆ ಉತ್ತರ**

ಚದುರಂಗದ ಮಣೆಯ ಒಂದು ಮೂಲೆಯಲ್ಲಿರುವ ಮನೆಯ ಬಣ್ಣ ಬಿಳಿಯಾಗಿದ್ದಲ್ಲಿ ಅದಕ್ಕೆ ವಿರುದ್ಧ ದಿಕ್ಕಿನಲ್ಲಿರುವ ಮೂಲೆಯ ಮನೆಯ ಬಣ್ಣವೂ ಬಿಳಿಯಾಗಿರುತ್ತದೆ. ಇದೇ ರೀತಿ ಕಪ್ಪು ಬಣ್ಣದ ಮೂಲೆಗೆ ವಿರುದ್ಧ ದಿಕ್ಕಿನ ಮೂಲೆಯು ಕಪ್ಪಾಗೇ ಇರುತ್ತದೆ. ಈಗ ಕುದುರೆಯನ್ನು ಆರಂಭದಲ್ಲಿ ಬಿಳಿ ಬಣ್ಣದ ಮೂಲೆಯಲ್ಲಿ ಇರಿಸಲಾಗಿದೆಯೆಂದು ತಿಳಿಯೋಣ. ಚದುರಂಗದ ಆಟದ ನಿಯಮಕ್ಕನುಸಾರವಾಗಿ ಕುದುರೆಯನ್ನು ನಡೆಸಿ ಉಳಿದ ಎಲ್ಲ ೬೩ ಮನೆಗಳನ್ನೂ ಒಂದು ಬಾರಿ ಮಾತ್ರ ಮುಟ್ಟಿ ಕೊನೆಗೊಮ್ಮೆ ಆರಂಭಿಸಿದ ಮೂಲೆಗೆ ವಿರುದ್ಧ ದಿಕ್ಕಿನಲ್ಲಿರುವ ಬಿಳಿಯ ಬಣ್ಣದ ಮೂಲೆಗೆ ಕುದುರೆಯು ಸೇರಿಕೊಳ್ಳುವಂತೆ ಮಾಡಬಹುದೆ ಎಂಬುದು ನಮ್ಮ ಪ್ರಶ್ನೆ. ಇದು ಸಾಧ್ಯವಿದ್ದಲ್ಲಿ ಕುದುರೆಯನ್ನು ಒಂದಾದ ಮೇಲೊಂದರಂತೆ ೬೩ ನಡೆಗಳಿಗೆ ಒಳಪಡಿಸಿದಂತಾಗುತ್ತದೆ. ನಡೆಗಳ ಈ ಸಂಖ್ಯೆ ಒಂದು ಬೆಸಸಂಖ್ಯೆ ಎಂಬುದನ್ನು ಗಮನಿಸಿ.

ಚದುರಂಗದ ನಿಯಮಕ್ಕನುಸಾರವಾಗಿ ಕುದುರೆಯನ್ನು ನಡೆಸಿದಾಗ ಪ್ರತಿ ನಡೆ ಮುಗಿದಾಗಲೂ ಆ ನಡೆಯ ಆರಂಭದಲ್ಲಿ ಕುದುರೆಯು ಯಾವ ಬಣ್ಣದ ಮನೆಯಲ್ಲಿತ್ತೋ ಅದಕ್ಕೆ ವಿರುದ್ಧ ಬಣ್ಣದ ಮನೆಯಲ್ಲಿ ಕುದುರೆಯು ಪ್ರತಿಷ್ಠಿತವಾಗುತ್ತದೆಂಬುದನ್ನೂ ಗಮನಿಸಿ.

ಈಗ, ಮೇಲಿನ ಉದಾಹರಣೆಯಲ್ಲಿ ಕುದುರೆಯು ಬಿಳಿ ಬಣ್ಣದ ಮೂಲೆಯಲ್ಲಿತ್ತು. ಹೀಗಾಗಿ ಒಂದು ನಡೆಯ ನಂತರ ಅದು ಕಪ್ಪು ಮನೆಯನ್ನು ಸೇರುತ್ತದೆ. ಅದರ ನಂತರದ ನಡೆಯಲ್ಲಿ ಮತ್ತೆ ಬಿಳಿ ಬಣ್ಣದ ಮನೆಯನ್ನು ಸೇರುತ್ತದೆ. ಮೂರನೆಯ ನಡೆಯ ನಂತರ ಕಪ್ಪು ಮನೆಯನ್ನು ಸೇರುತ್ತದೆ. ಇದೇ ರೀತಿ ಯಾವುದೇ ಬೆಸ ಸಂಖ್ಯೆಯ ನಡೆಯ ನಂತರ ಕುದುರೆಯು ಕಪ್ಪು ಮನೆಯನ್ನೇ ಸೇರುತ್ತದೆ. ಅಂದರೆ ೬೩ ನಡೆಗಳ ನಂತರ ಕುದುರೆಯು ಬಿಳಿ ಬಣ್ಣದ ಇನ್ನೊಂದು ಮೂಲೆಯನ್ನು ಸೇರುವ ಅವಕಾಶವೇ ಇಲ್ಲ!

ಕುದುರೆಯು ಆರಂಭದಲ್ಲಿ ಕಪ್ಪು ಬಣ್ಣದ ಮೂಲೆಯೊಂದರಿಂದ ನಡೆಯನ್ನು ಆರಂಭಿಸುವ ಪ್ರಶ್ನೆಯ ಇನ್ನೊಂದು ಉದಾಹರಣೆಯಲ್ಲೂ ಉತ್ತರವನ್ನು ಹೀಗೆಯೇ ಕಂಡುಕೊಳ್ಳಬಹುದು.

'ಸರಿ', 'ಬೆಸ' ಗಳ ಲಕ್ಷಣಗಳನ್ನು ಉಪಯೋಗಿಸಿ ಮುಂದಿನ ಪ್ರಶ್ನೆಗೆ ಒದುಗರೇ ಉತ್ತರ ಕಂಡುಕೊಳ್ಳುವರೆಂದು ಆಶಿಸುತ್ತೇವೆ.

ಪ್ರಶ್ನೆ: ಒಂದು ಬೆಸ ಸಂಖ್ಯೆಯಷ್ಟು ಅಂಕಿ (ಡಿಜಿಟ್)ಗಳನ್ನುಳ್ಳ ಯಾವುದಾದರೊಂದು ಸಂಖ್ಯೆಯನ್ನು ಆರಿಸಿಕೊಳ್ಳಿ. ಆರಿಸಿದ ಈ ಸಂಖ್ಯೆಯಲ್ಲಿ ಬರುವ ಅಂಕಿಗಳನ್ನು 'ಹಿಂದೆ-ಮುಂದೆ' ಮಾಡಿ ಬರೆದಾಗ ಲಭಿಸುವ ಸಂಖ್ಯೆಯನ್ನು ಮೊದಲು ಆರಿಸಿದ ಸಂಖ್ಯೆಯೊಡನೆ ಕೂಡಿಸಿ. ಹೀಗೆ ಕೂಡಿಸಿದಾಗ ಬರುವ ಸಂಖ್ಯೆಯಲ್ಲಿ ತೋರುವ ಅಂಕಿಗಳಲ್ಲಿ ಒಂದಾದರೂ ಸಮ ಸಂಖ್ಯೆ ಆಗಿರಬೇಕು. ಇದು ಹೇಗೆ ?

**ಈ ತಿಂಗಳ ಪ್ರಶ್ನೆಗಳು**

೧. ೩೦ ಜನರಿರುವ ಯಾವುದೇ ಗುಂಪಿನಲ್ಲಿ ಕಡೆಯ ಪಕ್ಷ ೫ ಮಂದಿ ಹುಟ್ಟಿದ ವಾರದ ದಿನವು (ಸೋಮ, ಮಂಗಳ ಇತ್ಯಾದಿ) ಪರಸ್ಪರ ಒಂದೇ ಆಗಿರುತ್ತದೆ. ಇದು ಹೇಗೆ ?

ಪ್ರಶ್ನೆ ೨. ೧೦೦ ಕಿ.ಮೀ. X ೧೦೦ ಕಿ. ಮೀ. ಚದರದ ಒಂದು ಅಭಯಾರಣ್ಯದಲ್ಲಿ ೫೧ ಹುಲಿಗಳು ಇಷ್ಟ ಬಂದಂತೆ ಅಲೆದಾಡುತ್ತಿರುತ್ತವೆ. ಹೀಗಿದ್ದರೂ ಪ್ರತಿ ಕ್ಷಣದಲ್ಲಿಯೂ ಕಡೆಯ ಪಕ್ಷ ಯಾವುದಾದರೂ ೨ ಹುಲಿಗಳಾದರೂ ೨೦ ಕಿ. ಮೀ. X ೨೦ ಕಿ. ಮೀ. ಚದರ ಅರಣ್ಯ ಪ್ರದೇಶವನ್ನು ಪರಸ್ಪರ ಹಂಚಿಕೊಳ್ಳಬೇಕಾಗುತ್ತದೆ ಎಂದು ತೋರಿಸಿ.




ನಾನು, ನೀವು, ಅವರು, ಇವರು, ಪ್ರತಿಯೊಬ್ಬರಲ್ಲೂ ಇರುವ ಒಂದು ಮಾನವ ಸಹಜ ದೌರ್ಬಲ್ಯದ ಕುರಿತಾಗಿ ನಾನೀಗ ಹೇಳಹೊರಟಿದ್ದೇನೆ. ಲೇಖನ ಓದಿದ ನಂತರ, 'ನಾನು ಅಂಥವನಲ್ಲ' ಎಂದು ಕೆಲವರು ಇದನ್ನು ತಳ್ಳಿಹಾಕುವ ಸಾಧ್ಯತೆ ಇದೆಯಾದರೂ ನಮ್ಮ ನಡವಳಿಕೆಗಳನ್ನು ಕೊಂಚ ಶಾಂತಚಿತ್ತದಿಂದ ವಿವೇಚಿಸಿ ನೋಡಿದಲ್ಲಿ ಸತ್ಯ ತನ್ನಷ್ಟಕ್ಕೆ ಗೋಚರವಾಗುತ್ತದೆ. ಕೆಲವರಲ್ಲಿ ಈ ಸ್ವಭಾವ ಹೆಚ್ಚಿರಬಹುದು. ಇನ್ನು ಕೆಲವು ಸಾಧು ಸಜ್ಜನರಲ್ಲಿ ಗಮನಕ್ಕೆ ಬರದಷ್ಟು ಅಲ್ಪ ಪ್ರಮಾಣದಲ್ಲಿರಬಹುದು. ಅಂತೂ ಹೀಗೊಂದು ದೌರ್ಬಲ್ಯ ಮನುಷ್ಯ ಎಂದ ಮೇಲೆ ಇದ್ದೇ ಇರುತ್ತದೆ ಎನ್ನುವುದು ನನ್ನದೊಂದು ತಿಳಿವಳಿಕೆ. ಕೆಲವೊಂದು ಉದಾಹರಣೆಗಳ ಸಮೇತ ಇದನ್ನು ತಮ್ಮೆಲ್ಲರಿಗೂ ಮನದಟ್ಟು ಮಾಡುವುದು ನನ್ನ ಉದ್ದೇಶ. ಹೀಗೆ ಮನದಟ್ಟು ಮಾಡಿಕೊಡಬೇಕೆಂಬ ಉತ್ಸುಕತೆ ಕೂಡಾ 'ಛಿದ್ರಾನ್ವೇಷಣೆ'ಯ ಕುಪ್ರವೃತ್ತಿಯಿಂದಲೇ ಪ್ರೇರಿತವಾಗಿರುವುದೆಂದು ತಾವು ಅಂದುಕೊಂಡಲ್ಲಿ ಅದಕ್ಕೆ ನನ್ನ ಆಕ್ಷೇಪಣೆ ಇಲ್ಲ. 'ಛಿದ್ರಾನ್ವೇಷಕರು' ಅನ್ನುವ ಪದ ವಾಡಿಕೆಯಲ್ಲಿಲ್ಲದ್ದಾಗಿ ಇರುವುದರಿಂದ ಕಿವಿಗೆ ಅಹಿತವಾಗುತ್ತಿದೆ ಅನಿಸಿದರೆ ಸರಳವಾಗಿ 'ಹುಳುಕು ಹುಡುಕುವವರು' ಎಂದು ತಿದ್ದಿಕೊಳ್ಳಬಹುದು. ಇನ್ನು ವಿಷಯಕ್ಕೆ ಬರೋಣ.

ನೀವು ಒಂದು ಸೊಗಸಾದ ಮನೆ ಕಟ್ಟಿಸಿದ್ದೀರಿ ಅಂದುಕೊಳ್ಳಿ. ಲಕ್ಷಗಟ್ಟಲೆ ಹಣ ಸುರಿದು ಮನೆ ಕಟ್ಟಿಸಿದ ಮೇಲೆ ಅದನ್ನು ಬಂಧುಬಾಂಧವರು, ಇಷ್ಟ ಮಿತ್ರರು, ಮುಂತಾದವರೆಲ್ಲಾ ಬಂದು ನೋಡಿಹೋಗದಿದ್ದರೆ ಮನಸ್ಸಿಗೆ ಹಿತವಾದೀತೇ ? ಅದ್ದೂರಿಯಾಗಿ ಗೃಹಪ್ರವೇಶ ಸಮಾರಂಭ ಏರ್ಪಡಿಸಿ ಎಲ್ಲರನ್ನೂ ಆಹ್ವಾನಿಸುತ್ತೀರಿ. ಬಂದವರಿಗೆಲ್ಲಾ ಉತ್ಸಾಹದಿಂದ ಮನೆ ತೋರಿಸುತ್ತೀರಿ. ಸಹಜವಾಗಿ ಎರಡು ಹೊಗಳಿಕೆಯ ಮಾತುಗಳಿಗಾಗಿ ನಿಮ್ಮ ಕಿವಿಗಳು ಹಾತೊರೆಯುತ್ತಿರುತ್ತವೆ. ಹೆಚ್ಚಿನವರು ''ಚೆನ್ನಾಗಿದೆ, ಚೆನ್ನಾಗಿ ಕಟ್ಟಿಸಿದ್ದೀರಿ..'' ಎಂದು ಮುಖಸ್ತುತಿ ಮಾಡಿಯೂ ಮಾಡುತ್ತಾರೆ ಅನ್ನಿ. ಆದರೆ ಇದೇ ಅಭಿಪ್ರಾಯವನ್ನು ನಿಮ್ಮ ಬೆನ್ನ ಹಿಂದೆಯೂ ವ್ಯಕ್ತಪಡಿಸುತ್ತಾರೆಂದು ನೀವು ನಂಬಿದ್ದರೆ ನಿಮಗೆ ಜನರ ಸ್ವಭಾವವೇ ಗೊತ್ತಿಲ್ಲ ಎಂದು ವಿಧಿಯಿಲ್ಲದೆ ಹೇಳಬೇಕಾಗುತ್ತದೆ. ನಿಮ್ಮ ಮನೆಯಿಂದ ನಾಲ್ಕು ಹೆಜ್ಜೆ ಹೋಗುವುದರೊಳಗೆ ನಿಮ್ಮ ಹೊಸಮನೆಯ ಕಟ್ಟೋಣದಲ್ಲಿ ತಾವು ಕಂಡುಕೊಂಡ ಐಬುಗಳ ಬಗ್ಗೆ ಅವರು ಟೀಕಾಸ್ತ್ರಗಳನ್ನು ಉದುರಿಸುತ್ತಾರೆ. ಹಾಗೆ ಏನಾದರೊಂದು ಹುಳುಕು ಹುಡುಕಲೇಬೇಕೆಂಬ ಪ್ರವೃತ್ತಿಯ ಹಿಂದೆ ಒಳಗಿನ ಮತ್ಸರ ಕೆಲಸ ಮಾಡುತ್ತಿರುತ್ತದೆ ಎನ್ನುವುದು ನಿಜವಾದ ವಿಚಾರ. 'ಅದು ಹಾಗಿರಬೇಕಿತ್ತು, ಇದು ಹೀಗಿರಬೇಕಿತ್ತು' ಎಂದು ಮುಖದೆದುರೇ ಮುಲಾಜಿಲ್ಲದೆ ಹೇಳಿ ನಿಮ್ಮ ಉತ್ಸಾಹಭಂಗ ಮಾಡುವವರೂ ಇರುತ್ತಾರೆ. ಇಂಥವರಲ್ಲಿ ವಾಸ್ತುಶಾಸ್ತ್ರ ನಿಪುಣರೆಂದು ತಮ್ಮನ್ನು ತಾವೇ ಗುರ್ತಿಸಿಕೊಂಡವರು ಇದ್ದರಂತೂ ನಿಮ್ಮ ಪಾಡು ದೇವರಿಗೇ ಪ್ರೀತಿ. ಒಂದೊಮ್ಮೆ ನೀವು ಈಗಿನ ಸಮೂಹಸನ್ನಿಯಾಗಿರುವ ವಾಸ್ತುಶಾಸ್ತ್ರದ ಪ್ರಕಾರವೇ ಮನೆ ಕಟ್ಟಿಸಿರುತ್ತೀರಿ ಅಂತಿಟ್ಟುಕೊಳ್ಳಿ. ಆದರೂ ಹುಳುಕು ಹುಡುಕಬೇಕೆನ್ನುವವರಿಗೆ ಯಾವುದೋ ಒಂದು ಶಾಸ್ತ್ರ ಸಮ್ಮತವಲ್ಲದ ವಿಚಾರ ಕಣ್ಣಿಗೆ ಬೀಳುತ್ತದೆ. ಅವರು ಆ ಬಗ್ಗೆ ನಿಮಗೆ ಹೇಳಿಯೂ ಹೇಳುತ್ತಾರೆ. ಹೊರಗಿನ ಕಾಂಪೌಂಡಿನಲ್ಲಿ ಗೇಟು ಇಡಬೇಕಾದಲ್ಲಿಂದ ಹಿಡಿದು ಹಿಂಭಾಗದ ಕಕ್ಕಸು ಮನೆಯವರೆಗೆ ಎಲ್ಲಾ ಇಂಥಲ್ಲೇ ಇರಬೇಕೆಂಬ, ಹಾಗೆ ಇರದಿದ್ದಲ್ಲಿ ಆ ಮನೆಯ ನಿವಾಸಿಗಳು ಏನೇನು ಕಷ್ಟ, ನಷ್ಟ, ನಿಷ್ಠುರಗಳನ್ನು ಅನುಭವಿಸಬೇಕಾಗುತ್ತದೆಂಬ ಬಗ್ಗೆ ಖಚಿತವಾಣಿಯಿಂದ ಮಾತಾಡಬಲ್ಲ ನಿಪುಣರ ಸಂಪರ್ಕಕ್ಕೆ ಬಂದರೆ ಅಳ್ಳೆದೆಯವರು ಮನೋರೋಗಿಗಳಾಗುವ ಬಗ್ಗೆ ಸಂಶಯವೇನಿಲ್ಲ. ಹೀಗಾಗದಂತಾಗಬೇಕಾದರೆ ಕಟ್ಟಿದ್ದನ್ನು ಮತ್ತೆ ಒಡೆದು ಹೊಸದಾಗಿ ಶಾಸ್ತ್ರ ಪ್ರಕಾರ ನಿರ್ಮಿಸಬೇಕಾದ್ದು ಅನಿವಾರ್ಯ. ಆರ್ಥಿಕ ನಷ್ಟವನ್ನು ಪರಿಗಣಿಸದೆ ಕಟ್ಟಿದ್ದನ್ನು ಒಡೆದು, ಒಡೆದದ್ದನ್ನು ಕಟ್ಟಿ, ಯಾರದೋ ಕೈಯಿನ ತಾಳಕ್ಕೆ ತಕ್ಕಂತೆ ಕುಣಿಯುವವರ ಸಂಖ್ಯೆ ನಮ್ಮ ನಡುವೆ ಬಹಳಷ್ಟಿದೆ ಅಂದರೆ ಉತ್ಪ್ರೇಕ್ಷೆಯ ಮಾತಲ್ಲ. ಈ ವಿಷಯ ಕೈಬಿಟ್ಟು ಮುಂದೆ ಹೋಗೋಣ. ರಾಜಕೀಯ ವಲಯದಲ್ಲಿ ಸ್ವಲ್ಪ ಕಣ್ಣು ಹಾಯಿಸೋಣ. ಸ್ವಂತಕ್ಕೆ ಅನುಕೂಲವಾಗುವ ಸವಲತ್ತುಗಳ ಹೊರತಾಗಿ ಬೇರೆ ಯಾವುದೇ ವಿಚಾರ ಚರ್ಚೆಗೆ ಬರಲಿ, ಆಳುವ ಪಕ್ಷದೊಂದಿಗೆ ವಿರೋಧ ಪಕ್ಷದವರ ವಿರೋಧ ಇದ್ದೇ ಇರುತ್ತದೆ. ಆಳುವ ಪಕ್ಷದ ಪ್ರತಿಯೊಂದು ತೀರ್ಮಾನದಲ್ಲೂ ಅವರು ಹುಳುಕು ಹುಡುಕುತ್ತಾರೆ. ಗದ್ದಲ ಎಬ್ಬಿಸುತ್ತಾರೆ. ಹೀಗೆ ಹುಳುಕು ಹುಡುಕುವುದಕ್ಕೇ ತಾವು ವಿರೋಧ ಪಕ್ಷದಲ್ಲಿರುವುದು ಎನ್ನುವ ಜಾಯಮಾನ ಆರೋಗ್ಯಪೂರ್ಣವಲ್ಲದಿದ್ದರೂ ಅನಿವಾರ್ಯವೆಂಬಂತಾಗಿರುವುದು ವ್ಯವಸ್ಥೆಯ ವ್ಯಂಗ್ಯ. ದೇಶವನ್ನು ಆಳುವವರ ವಿಚಾರ ಒತ್ತಟ್ಟಿಗಿಟ್ಟು ಕುಟುಂಬದ ವಿಚಾರಕ್ಕೆ ಬಂದರೆ ಒಂದು ಮನೆಯ ಸದಸ್ಯರಲ್ಲಿ ಅಭಿಪ್ರಾಯಭೇದ ಇರುವುದು ವಿಶೇಷವಾದ ಸಂಗತಿಯೇನಲ್ಲ. ತಪ್ಪೂ ಅಲ್ಲ. ಆದರೆ ಯಾವಾಗ ಹುಳುಕು ಹುಡುಕಬೇಕೆಂಬ ಕಾರಣಕ್ಕೋಸ್ಕರವಾಗಿಯೇ ಹುಳುಕು ಹುಡುಕುವುದು ಅಭ್ಯಾಸವಾಗಿಬಿಡುತ್ತದೆಯೋ ಆಗ ಆ ಮನೆ ಅಗ್ನಿಕುಂಡವಾಗುವುದರಲ್ಲಿ ಸಂಶಯವಿಲ್ಲ. ಅತ್ತೆ, ಸೊಸೆಯರ ಉದಾಹರಣೆ ತೆಗೆದುಕೊಂಡರೆ ಅತ್ತೆಗೆ ಹೇಳಿದ್ದು ಸೊಸೆಗೆ ಪಥ್ಯವಾಗುವುದಿಲ್ಲ. ಸೊಸೆಯ ಕೆಲಸ

**ವಸುಮತಿ ಉಡುಪ**

ಅತ್ತೆಗೆ ಒಪ್ಪಿತವಾಗುವುದಿಲ್ಲ. ಇಬ್ಬರಲ್ಲೂ ಭಿದ್ರಾನ್ವೇಷಣೆಯ ಪ್ರವೃತ್ತಿ ವಿಜೃಂಭಿಸುತ್ತಿದ್ದರಂತೂ ಆ ಮನೆ ನರಕ. ಪುಣ್ಯಕ್ಕೆ ಎಲ್ಲಾ ಸಂಸಾರಗಳೂ ಹೀಗಿರದೆ ಪರಸ್ಪರ ಅರಿವು, ಪರಸ್ಪರ ಗೌರವದಿಂದ ಸುಖವಾಗಿರುವ ಸಂಸಾರಗಳೂ ಬಹಳಷ್ಟಿರುತ್ತವೆಂಬುದು ನೆಮ್ಮದಿಯ ವಿಷಯ. ಹೆತ್ತವರು ಬೆಳೆದ ಮಗನ ರೀತಿನೀತಿಗಳಲ್ಲಿ ದೋಷ ಕಾಣುವುದು, ಅವನು ಮದುವೆಯಾದ ನಂತರ ಅದು ಪ್ರಕೋಪಕ್ಕೆ ಹೋಗುವುದು, ಒಂದಾದ ಮನೆ ಒಡೆಯುವ ಮಟ್ಟಕ್ಕೆ ತಲುಪುವುದು ಅಪರೂಪದ ಸಂಗತಿಯಲ್ಲ. 'ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು' ಬಂದಂತೆ ಗಂಡ, ಹೆಂಡತಿಯರೊಳಗೇ ಸಾಮರಸ್ಯವಿಲ್ಲದೆ ಒಬ್ಬರ ಚರ್ಯೆಗಳಲ್ಲಿ ಮತ್ತೊಬ್ಬರು ತಪ್ಪು ಹುಡುಕುತ್ತಾ ವಿಚ್ಛೇದನದಲ್ಲಿ ಈ ವಿರಸ ಪರಿಸಮಾಪ್ತಿಯಾಗುವುದು ಇಂದು ಮಾಮೂಲಿನ ಸಂಗತಿ ಎಂಬಂತಾಗಿದೆ. ಸಣ್ಣ ಪರಿವಾರದಲ್ಲಿ ಹೆತ್ತವರ ಗಮನದ ಕೇಂದ್ರಬಿಂದುಗಳಾಗಿ ಬೆಳೆದ ಮಕ್ಕಳು ಹೊಂದಾಣಿಕೆಯ ಮನೋಭಾವನೆಯನ್ನೇ ರೂಪಿಸಿಕೊಳ್ಳದೆ ತಮ್ಮದೇ ಸ್ವಕೇಂದ್ರಿತ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವುದೂ ಕೂಡಾ ಈ ಥರದ ಭಿನ್ನಾಭಿಪ್ರಾಯಗಳಿಗೆ ಒಂದು ಕಾರಣವಾಗಿರಬಹುದೆಂದು ನನ್ನ ಊಹೆ. ಪ್ರತಿ ವ್ಯಕ್ತಿಯೂ ಪ್ರತ್ಯೇಕ ಅಸ್ತಿತ್ವವಿರುವ ಒಂದು ಜೀವಿಯಾಗಿದ್ದು ಅಭಿಪ್ರಾಯಭೇದ ಎನ್ನುವುದು ಹಳೆಕಾಲದ ದಂಪತಿಗಳಲ್ಲೂ ಇರುತ್ತಿದ್ದದ್ದು ಸಹಜವಾದರೂ ಅದನ್ನು ಮೀರಿ ಹೊಂದಾಣಿಕೆಯಿಂದ ಬದುಕು ಮಾಡುವುದು ಅವರಿಗೆ ಸಾಧ್ಯವಾಗಿತ್ತು. ಸಹಜವಾಗಿತ್ತು. ಈ ರೀತಿ ಸಹ್ಯವಾಗಿಸಿಕೊಳ್ಳುವುದರ ಹಿಂದೆ ನಾನಾ ರೀತಿಯ ಅಂಜಿಕೆ ಕೂಡಾ ಇರುತ್ತಿತ್ತು. ಹೊಂದಿಕೆಯಾಗುವುದಿಲ್ಲ ಎಂದಾದ ಮೇಲೆ ಕಾನೂನುರೀತ್ಯಾ ಬೇರೆ ಬೇರೆಯಾಗಿ ನೆಮ್ಮದಿ ಪಡೆಯುವುದೇ ಸೂಕ್ತ ಎನ್ನುವ ಅಭಿಪ್ರಾಯದಲ್ಲಿ ನನ್ನದೇನೂ ವಿರೋಧವಿಲ್ಲ. ಅಂದಿಗೂ, ಇಂದಿಗೂ ಆಗಿರುವ ಬದಲಾವಣೆಯ ಕುರಿತು ಸೂಕ್ಷ್ಮವಾಗಿ ಹೇಳುತ್ತಿದ್ದೇನೆ ಅಷ್ಟೇ. ವಿವಾಹೋತ್ಸುಕನಾದ ಯುವಕನೊಬ್ಬ ತನ್ನ ಕನಸಿನ ಕನ್ಯೆಯ ಹುಡುಕಾಟದಲ್ಲಿ ಹಲವಾರು ಹೆಣ್ಣು ಮಕ್ಕಳನ್ನು ನೋಡಿ ಒಪ್ಪಿಗೆಯಾಗದೆ ಪ್ರತಿಯೊಬ್ಬರಲ್ಲೂ ಒಂದಲ್ಲಾ ಒಂದು ಕುಂದನ್ನು ಬೊಟ್ಟುಮಾಡುವುದು ಎಲ್ಲರೂ ಬಲ್ಲ ವಿಷಯ. ಹುಡುಗಿಯರೂ ಈ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಪರಿಪೂರ್ಣವಾದ ವ್ಯಕ್ತಿಯೊಂದು ಈ ಜಗತ್ತಿನಲ್ಲಿ ಹುಟ್ಟಿಯೇ ಇಲ್ಲ. ಹುಟ್ಟುವುದೂ ಇಲ್ಲ ಎನ್ನುವ ಸತ್ಯ ಪ್ರಾಯದ ಹುಮ್ಮಸ್ಸಿನಲ್ಲಿ ಅವರು ಅರ್ಥಮಾಡಿಕೊಳ್ಳುವುದಿಲ್ಲ. ಕೊನೆಗೂ ಈ ಹುಡುಕಾಟ ಅಲ್ಪ ಸ್ವಲ್ಪ ಹೊಂದಾಣಿಕೆಯೊಂದಿಗೇ ಅಂತ್ಯವಾಗಬೇಕಾಗುತ್ತದೆ, ಆಗುತ್ತದೆ ಕೂಡಾ.

ಲೇಖನದ ಆರಂಭದಲ್ಲಿ ಹೇಳಿದ ಗೃಹಪ್ರವೇಶ ಸಮಾರಂಭಕ್ಕೆ ಹೋದವರಂತೆಯೇ ಒಂದು ಮದುವೆ ಮನೆಗೆ ಆಹ್ವಾನಿತರಾಗಿ ಹೋದವರೂ ಸುಮ್ಮನೆ ಉಂಡು ಎದ್ದು ಬರುವುದಿಲ್ಲ. ಸ್ವಲ್ಪ ಪುರುಸೊತ್ತಾಗಿದ್ದರೆ ಹಸೆಮಣೆಯ ಮೇಲಿರುವ ನವದಂಪತಿಗಳ ಈಡು ಜೋಡಿನ ಬಗ್ಗೆ ವ್ಯಾಖ್ಯಾನ ನಡೆಯುತ್ತದೆ. ಒಂದಲ್ಲಾ ಒಂದು ಹುಳುಕು ನಾಲಿಗೆಯಿಂದ ಜಾರುತ್ತದೆ. ಅಷ್ಟೆಲ್ಲಾ ಪುರುಸೊತ್ತಿನ ಜನ ಅಲ್ಲದೆ, ಹಸೆಮಣೆಯ ಕಡೆ ಕಣ್ಣು ಹಾಯಿಸುವುದಕ್ಕೂ ವೇಳೆ ಇಲ್ಲದೆ, ಬರಿದೇ ಹಾಜರಿ ಹಾಕಿ ಉಂಡು ಬರಲೆಂದೇ ನೀವು ಹೋದವರಾಗಿದ್ದರೂ ಊಟ ಮಾಡುವಾಗಲಾಗಲೀ, ಉಂಡು ಬಂದ ಮೇಲಾಗಲೀ, ತಯಾರಿಸಿದ ವ್ಯಂಜನಗಳ ಕುರಿತೋ, ಬಡಿಸಿದ ಕ್ರಮದ ಬಗ್ಗೆಯೋ, ಟೀಕೆಯೊಂದು ನಿಮ್ಮಿಂದ ಉದುರಿಬಿದ್ದರೆ ಆಶ್ಚರ್ಯಪಡಬೇಕಾದ್ದಿಲ್ಲ. ಅದು ಮಾನವ ಸಹಜ ಸ್ವಭಾವ. ಕೆಲವು ವ್ಯಕ್ತಿಗಳು ವಿನಾಕಾರಣ ಮೊದಲ ಭೇಟಿಯಲ್ಲೇ ನಮಗೆ ಅಪ್ರಿಯವಾಗುವುದು ತಮ್ಮ ಅನುಭವಕ್ಕೂ ಬಂದಿರಬಹುದು ಅಂದುಕೊಳ್ಳುತ್ತೇನೆ. ಜನ್ಮಾಂತರಗಳ ಬಗ್ಗೆ ನಂಬಿಕೆ ಇರುವವರು ಈ ಥರದ ಅಸಹನೆಗೆ ಪೂರ್ವಜನ್ಮದ ಯಾವುದೋ ಕಾರಣವಿರಬಹುದೆಂದು ಕೊಂಡಿ ಜೋಡಿಸಬಹುದು. ಆ ವ್ಯಕ್ತಿ ನಮ್ಮೊಂದಿಗೆ ಯಾವ ರೀತಿಯಲ್ಲಿಯೂ ವಿಪರೀತವಾಗಿ ನಡೆದುಕೊಳ್ಳದಿದ್ದರೂ ಆತನ ನಡೆನುಡಿ ನಮಗೆ ಹಿಡಿಸದೆ ಅವನಿಂದ ತಪ್ಪಿಸಿಕೊಳ್ಳುತ್ತೇವೆ. ಅವನ ಬಗ್ಗೆ ಜಿಗುಪ್ಸೆಯ ಭಾವನೆ ಬೆಳೆಸಿಕೊಳ್ಳುತ್ತೇವೆ.

ಮೇಲಧಿಕಾರಿಗಳ ಸ್ವಭಾವದಲ್ಲಿ ಕೆಳಗಿನವರು ಭಿದ್ರಾನ್ವೇಷಣೆ ಮಾಡುವುದು ಒಂದು ಮಾಮೂಲಿನ ಸಂಗತಿ. ಹಾಗೆಯೇ ಮೇಲಧಿಕಾರಿಯಾಗಿರುವವನು ತನ್ನ ಕೈಕೆಳಗಿನವರ ಸಣ್ಣಪುಟ್ಟ ಹುಳುಕುಗಳನ್ನು ಭೂತಗನ್ನಡಿಯಿಂದ ನೋಡುವುದು ತನ್ನ ಅಧಿಕಾರ ತನಗೆ ಕೊಡಮಾಡಿರುವ ವರದಾನ ಎಂದೇ ಭಾವಿಸಿ ಸಂದರ್ಭ ಸಿಕ್ಕಿದಾಗಲೆಲ್ಲಾ, ಅಥವಾ ಸಂದರ್ಭ ಸೃಷ್ಟಿ ಮಾಡಿಕೊಂಡೂ ಕೂಡಾ, ಆ ವರದಾನವನ್ನು ಸಾರ್ಥಕವಾಗಿಸಿಕೊಳ್ಳುವುದುಂಟು.

ಯಾವುದಾದರೂ ಪ್ರಶಸ್ತಿ, ಪುರಸ್ಕಾರಗಳು ಪ್ರಕಟವಾದಾಗ ಈ ಭಿದ್ರಾನ್ವೇಷಣೆ ಎನ್ನುವುದು ತನ್ನೆಲ್ಲಾ ಶಕ್ತಿ, ಸಾಮರ್ಥ್ಯವನ್ನು ಒಗ್ಗೂಡಿಸಿಕೊಂಡು ಮಿಂಚತೊಡಗುವುದು ಒಂದು ಮೋಜಿನ ಹಾಗೂ ದುರ್ದೈವದ ಸಂಗತಿ. ಇತ್ತೀಚೆಗಂತೂ ಯಾವ ಪ್ರಶಸ್ತಿಯೂ ವಿವಾದಕ್ಕೆ ಹೊರತಾಗಿಲ್ಲದಿರುವುದನ್ನು ಎಲ್ಲರೂ ಗಮನಿಸಿಯೇ ಇರುತ್ತೀರಿ. ಸಂಬಂಧಿಸಿದ ಎಲ್ಲರೂ ತಮ್ಮನ್ನು ಬಿಟ್ಟು ಬೇರ್‍ಯಾರೂ ಆ ಪ್ರಶಸ್ತಿಗೆ ಅರ್ಹರಲ್ಲ ಎಂದು ಭಾವಿಸುವುದೂ, ಹಾಗೆ ಪ್ರಶಸ್ತಿ ಪಡೆದವರು ಅಡ್ಡದಾರಿಯಿಂದಲೇ ಅದನ್ನು ಬಗಲಿಗೆ ಹಾಕಿಕೊಂಡಿದ್ದಾರೆಂದು ಕುಪ್ರಚಾರ ಮಾಡಿ ತಮ್ಮನ್ನು ತಾವು ಸಂತೈಸಿಕೊಳ್ಳುವುದೂ, ಈ ಕುರಿತಾಗಿ ಪತ್ರಿಕೆಗಳ ವಾಚಕರ ವಾಣಿಯಲ್ಲಿ ಪರ, ವಿರೋಧಗಳ ಬಾಣಗಳು ಅತ್ತಿತ್ತ ಹಾರಾಡುವುದೂ, ಮನೋರಂಜಕವಾಗಿರುತ್ತದೆ. ನಿಜಕ್ಕೂ ಅರ್ಹರಾದಂತಹ ಯೋಗ್ಯವ್ಯಕ್ತಿಗಳನ್ನೂ ಸಹ ಇಂತಹ ಟೀಕೆಗಳು ಸಣ್ಣ ಪ್ರಮಾಣದಲ್ಲಾದರೂ ಚುಚ್ಚದೆ ಬಿಡುವುದಿಲ್ಲ. ಇನ್ನು ಪುಸ್ತಕ ವಿಮರ್ಶೆಯ ವಿಚಾರಕ್ಕೆ ಬಂದರೆ ವಿಮರ್ಶೆ ಅಂದರೆ 'ಭಿದ್ರಾನ್ವೇಷಣೆ' ಅನ್ನುವಷ್ಟಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಂಡ ವಿಮರ್ಶಕ ಮಹಾಶಯರು ಅಪರೂಪವೇನಲ್ಲ. ವಿಷಯ ಸತ್ಯವಾಗಿರಲಿ, ಸುಳ್ಳಾಗಿರಲಿ, ಬೇರೊಬ್ಬರ ವಿಚಾರವಾಗಿ ಸಣ್ಣತನದ ಮಾತು ಕೇಳುವುದೆಂದರೆ ಕೆಲವರ ಕಿವಿಗಳಿಗೆ ಹಬ್ಬದಂತಾಗುವುದು. ಜನಸಾಮಾನ್ಯರ ದೌರ್ಬಲ್ಯವೇ ಪೀತ ಪತ್ರಿಕೆಗಳ ಬಂಡವಾಳ. ಪ್ರಸಿದ್ಧರ ಹುಳುಕುಗಳನ್ನು ಬಯಲಿಗೆಳೆಯುವ ನೆಪದಲ್ಲಿ ಉಪ್ಪು, ಖಾರ ಹಚ್ಚಿ ರುಚಿಕಟ್ಟಾಗಿಸಿ ಈ ದೌರ್ಬಲ್ಯವನ್ನು ಅಂತಹ ಪತ್ರಿಕೆಗಳು ಝುಣಝುಣ ಎನ್ನುವಂತೆ ಹಣವನ್ನಾಗಿಸಿಕೊಳ್ಳುತ್ತವೆ. ಭಿದ್ರಾನ್ವೇಷಣೆಯ ಪ್ರವೃತ್ತಿಯ ಹಿಂದೆ ನಾನಾ ರೀತಿಯ ಕಾರಣಗಳು ಕೆಲಸಮಾಡುತ್ತಿರುತ್ತವೆ ಎನ್ನುವುದರ ಬಗ್ಗೆ ಎರಡು ಮಾತಿಲ್ಲ. ತನಗಿಂತಾ ಇನ್ನೊಬ್ಬ ಶ್ರೇಷ್ಠ ಎಂದು ಒಪ್ಪಿಕೊಳ್ಳಲಾಗದ ಪೊಳ್ಳುಪ್ರತಿಷ್ಠೆ ಕೆಲವರದಾದರೆ, ಕೆಲವರಲ್ಲಿ ಇದು ಕೀಳರಿಮೆಯ ಸಂಕೇತ. ಕೆಲವರಿಗೆ ವಿಕೃತ ಸಂತೋಷ ಕೊಡುವ ಕಾಯಕವಾದರೆ, ಮತ್ತೆ ಕೆಲವರಿಗೆ ದುಡಿಮೆಗೆ ಆಧಾರ. ತನ್ನಲ್ಲಿ ಈ ಗುಣ ಇಲ್ಲವೇ ಇಲ್ಲವೆಂದು ಸಾಧಿಸುವವರೂ ಕೂಡಾ ಬೇರೆಯವರ ಸುದ್ದಿಗೆ ಕಿವಿ ಕೊಡುವುದರಲ್ಲಿ ಸುಖ ಅನುಭವಿಸಿರುತ್ತಾರೆ ಎನ್ನುವುದು ನನ್ನ ಅಭಿಪ್ರಾಯ. ನೆರೆಮನೆಯಲ್ಲಾಗುವ ಜಗಳ ಕದ್ದು ಆಲೈಸುವುದರ ರೋಚಕತೆ ಯಾರಿಗೆ ಬೇಡ ? ಒಬ್ಬೊಬ್ಬರ ಹುಳುಕುಗಳೂ ಜಗಜ್ಜಾಹೀರವಾಗುವುದು ಇಂತಹ ಜಗಳಗಳಲ್ಲೇ ತಾನೇ ? ಹುಳುಕು ಇಲ್ಲದಿರುವಲ್ಲೂ ಕೆದಕಿ ನೋಡುವ ಮಂದಿ ನಾವು. ಹುಳುಕು ಪ್ರತಿಯೊಬ್ಬರಲ್ಲೂ ಇದ್ದೇ ಇರುತ್ತದೆ ಎನ್ನುವುದು ನಮ್ಮ ಅಚಲ ನಂಬಿಕೆ. ಸಣ್ಣದೊಂದು ಉದಾಹರಣೆಯೊಂದಿಗೆ ಲೇಖನ ಮುಗಿಸುತ್ತೇನೆ. ಮದುವೆಯಾಗಿ ಪತಿಗೃಹಕ್ಕೆ ಹೋದ ಮಗಳು ಮೊದಲಬಾರಿಗೆ ತೌರಿಗೆ ಬಂದಾಗ ತಾಯಿ ಏಕಾಂತ ಕಲ್ಪಿಸಿಕೊಂಡು ಎಷ್ಟು ಉತ್ಕಂಠತೆಯಿಂದ ಅವಳ ಗಂಡನ ಮನೆಯವರ ಬಗ್ಗೆ ವಿಚಾರಿಸಿಕೊಳ್ಳುತ್ತಾಳೆ ಎಂಬುದರ ಬಗ್ಗೆ ನಿಮಗೆ ಅರಿವಿದೆಯೇ ? ಆ ಮಗುವಿನ ಅದೃಷ್ಟದಿಂದ ಎಲ್ಲವೂ ಒಳಿತಾಗಿದ್ದರೂ ಆ ತಾಯಿಗೆ ಸಂದೇಹ. ಮಗಳು ಏನನ್ನೋ ಮುಚ್ಚಿಟ್ಟು ಮಾತಾಡುತ್ತಿರಬಹುದೇ ಎನ್ನುವ ಸಂಶಯ. ಇಲ್ಲಿ ಭಿದ್ರಾನ್ವೇಷಣೆಯ ಹಿಂದೆ ಕೆಲಸ ಮಾಡುತ್ತಿರುವುದು ಒಬ್ಬ ತಾಯಿಯ ಪ್ರೀತಿ, ಆತಂಕ ತುಂಬಿದ ಹೃದಯ. ಆದ್ದರಿಂದ ಇದನ್ನು ಆಕ್ಷೇಪಾರ್ಹ ಅನ್ನುವಂತಿಲ್ಲ, ಅಲ್ಲವೇ ?

**ಮಧುಮತಿ ಉಡುಪ**

'ಗೌರಿ', ೪ನೇ ಕ್ರಾಸ್, 'ಎ', ಗಾಂಧಿನಗರ ಬಡಾವಣೆ

ಶಿವಮೊಗ್ಗ - ೫೭೭ ೨೦೧

### ವಿಪರ್ಯಾಸ

ಅದೆಷ್ಟೋ ಮೋಡಗಳು
ಹನಿಯಾಗುವುದೇ ಇಲ್ಲ;
ಆದರೂ,
ಅದೆಷ್ಟೋ ಬೀಜಗಳು
ಮೊಳಕೆಯೊಡೆಯುವುದೇ ಇಲ್ಲ
ಒಡೆದರೂ
ಅದೆಷ್ಟೋ ಕನಸುಗಳು
ಇದ್ದರೂ
ಸತ್ತಂತಿರುತ್ತವಲ್ಲ

- ರವಿಕುಮಾರ್ ಅಜ್ಜೀಪುರ



# ಸಂಭಾಷಣೆಯ ಅಗತ್ಯ ಮತ್ತು ಲಕ್ಷಣಗಳು : ಒಂದು ತಾತ್ವಿಕ ಚಿಂತನೆ

**ಜಿ. ಶ್ರೀನಿವಾಸನ್**

ಸಂಭಾಷಣೆಯೇ ಇಲ್ಲದ ಸಾಮಾಜಿಕ ಜೀವನವನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧಗಳನ್ನು ರೂಪಿಸುವುದು ಸಂಭಾಷಣೆಯೇ. ಸಂಭಾಷಣೆಯೇ ಇಲ್ಲದಿದ್ದ ಪಕ್ಷಕ್ಕೆ ಯಾವುದೇ ವ್ಯಕ್ತಿಯು ಇತರ ವ್ಯಕ್ತಿಗಳೊಡನೆ ಹಾಗೂ ವಸ್ತುಗಳೊಡನೆ ಪಡೆಯಬಹುದಾದ ಸಂಬಂಧಗಳಿಗೆ ವ್ಯತ್ಯಾಸವೇ ಇರುತ್ತಿರಲಿಲ್ಲ. ಸಾಮಾಜಿಕ ಜೀವನದಲ್ಲಿ ಸಂಭಾಷಣೆಯ ಮಹತ್ವ ಇಷ್ಟಾಗಿದ್ದರೂ, ಅದರ ತಾತ್ವಿಕ ಪರಿಶೀಲನೆ ನಡೆದಿರುವುದು ಅತ್ಯಲ್ಪ ಪ್ರಮಾಣದಲ್ಲೆಂದೇ ಹೇಳಬೇಕು.

ಅಂತಹ ಪರಿಶೀಲನೆಯ ಪ್ರಾರಂಭದಲ್ಲಿಯೇ ಕೇಳಬೇಕಾದ ಪ್ರಶ್ನೆ, ಸಂಭಾಷಣೆಯನ್ನು ಒಂದು 'ಪ್ರಮಾಣ'ವೆಂದು ಪರಿಗಣಿಸಬಹುದೆ ಎನ್ನುವುದು. 'ಪ್ರಮಾಣ'ವೆಂದರೆ ಜ್ಞಾನ ಸಾಧನ ಮಾರ್ಗ. ಸಾಧಾರಣವಾಗಿ, ಜ್ಞಾನ ಮೀಮಾಂಸೆಯಲ್ಲಿ ಸಂಭಾಷಣೆಯು ನಿರ್ದಿಷ್ಟವಾದ ಪ್ರಮಾಣವಾಗಿ ಪರಿಗಣಿತವಾಗಿಲ್ಲ. ಅನ್ಯವ್ಯಕ್ತಿಗಳ ಅಸ್ತಿತ್ವವನ್ನು ಕುರಿತು ನಾವು ಪಡೆಯುವ ಜ್ಞಾನವು ಬೇರೆ ಭೌತ ವಸ್ತುಗಳನ್ನು ಕುರಿತು ಪಡೆಯುವ ಇಂದ್ರಿಯ ಪ್ರತ್ಯಕ್ಷ ಜ್ಞಾನದಂತೆಯೇ ಪರಿಗಣಿತವಾಗಿದೆ. ಇದಕ್ಕೆ ಅತಿ ಮುಖ್ಯಕಾರಣ, ವ್ಯಕ್ತಿಗಳೆಲ್ಲರೂ ಇಂದ್ರಿಯ ಪ್ರತ್ಯಕ್ಷಕ್ಕೆ ನಿಲುಕುವ ಭೌತ ಶರೀರಗಳನ್ನು ಹೊಂದಿರುವುದೇ ಆಗಿದೆ.

ಇದು 'ಸ್ಥೂಲ'ವಾದ ಸತ್ಯ. ಇದನ್ನು 'ಸೂಕ್ಷ್ಮ'ವಾಗಿ ವಿಶ್ಲೇಷಿಸುವುದು ಅಗತ್ಯವೆನಿಸುತ್ತದೆ. ಕಾರಣ, ವ್ಯಕ್ತಿಯು ಕೇವಲ ಭೌತ ಶರೀರವು ಮಾತ್ರವಲ್ಲ. ಶರೀರದೊಂದಿಗೆ ಅವನಲ್ಲಿ ಪ್ರಬುದ್ಧವಾದ 'ಅರಿವೂ' ಇರುತ್ತದೆ. ಈ 'ಅರಿವಿನ' ಅಸ್ತಿತ್ವವನ್ನು ಅರಿತಾಗಲೇ ನಾವು ವ್ಯಕ್ತಿಯ ಅಸ್ತಿತ್ವವನ್ನು ಅರಿತಂತೆ. ಆದರೆ ಅನ್ಯವ್ಯಕ್ತಿಯಲ್ಲಿನ 'ಅರಿವು' ನಮ್ಮ ನೇರ ಇಂದ್ರಿಯ ಪ್ರತ್ಯಕ್ಷಕ್ಕೆ ನಿಲುಕುವ ಭೌತ ವಸ್ತುವಲ್ಲ. ಹೀಗಾಗಿ, ಅದನ್ನು ಅರಿಯುವುದು ಹೇಗೆ ಎನ್ನುವ ತಾತ್ವಿಕ ಪ್ರಶ್ನೆ ತಲೆದೋರುತ್ತದೆ.

ಪ್ರತಿ ವ್ಯಕ್ತಿಯೂ ತನ್ನದೇ ಆದ 'ಅರಿವನ್ನು' ಅರಿಯುವಲ್ಲಿ ಈ ಪ್ರಶ್ನೆಯು ಉದ್ಭವಿಸುವುದಿಲ್ಲ. ಕಾರಣ, ಪ್ರತಿಯೊಬ್ಬ ವ್ಯಕ್ತಿಗೂ ಅವನದೇ ಆದ ಅರಿವು ಸ್ವಯಂ ವೇದ್ಯ. ಆದರೆ ಅನ್ಯವ್ಯಕ್ತಿಗಳಲ್ಲಿಯೂ ಅದೇ ರೀತಿಯಾಗಿ ಅರಿವಿದೆ ಎನ್ನುವುದಕ್ಕೆ ಸಮರ್ಥನೆಯೇನು ?

ಇದನ್ನೊಂದು ತಾತ್ವಿಕ ಪ್ರಶ್ನೆಯೆಂದು ಪರಿಗಣಿಸಿ, ಇದಕ್ಕೆ ಉತ್ತರ ನೀಡುವ ಪ್ರಯತ್ನ ನ್ಯಾಯವೈಶೇಷಿಕ ದರ್ಶನದಲ್ಲಿ ನಡೆದಿದೆ. ಇವರ ಪ್ರಕಾರ, ಒಬ್ಬ ವ್ಯಕ್ತಿಯು ತನ್ನ ಶರೀರದ ಚಲನವಲನಗಳಂತೆಯೇ ಇರುವ ಇತರರ ಚಲನವಲನಗಳನ್ನು ಗಮನಿಸಿ ಅವರಲ್ಲಿಯೂ ತನ್ನಲ್ಲಿರುವಂತೆ 'ಅರಿವು' ಇರುವುದೆಂದು ತರ್ಕಿಸುತ್ತಾನೆ. ಎಂದರೆ, 'ಅನುಮಾನ' ಪ್ರಮಾಣದ ಮೂಲಕ ಇತರ ವ್ಯಕ್ತಿಗಳಲ್ಲಿನ 'ಅರಿವಿನ' ಅಸ್ತಿತ್ವವನ್ನು ಅರಿತಂತಾಯಿತು.

ಈ ಅಭಿಪ್ರಾಯವು ಸರ್ವಮಾನ್ಯತೆಯನ್ನು ಪಡೆಯುವಲ್ಲಿ ವಿಫಲವಾಗುತ್ತದೆ. ಕಾರಣ, 'ಅನುಮಾನ' ಪ್ರಮಾಣದಲ್ಲಿ ಕಂಡುಬರಬೇಕಾದ 'ತಾರ್ಕಿಕ ಕ್ರಮ' ಅನ್ಯವ್ಯಕ್ತಿಗಳಲ್ಲಿನ ಅರಿವಿನ ಅಸ್ತಿತ್ವವನ್ನು ತಿಳಿಯುವಲ್ಲಿ ಕಂಡುಬರುವುದಿಲ್ಲ; ಅದು 'ಪರೋಕ್ಷ ಜ್ಞಾನ'ವೂ ಅಲ್ಲ; ನೇರವಾದ ಜ್ಞಾನವೇ ಆಗಿರುತ್ತದೆ. ಅಲ್ಲದೆ, ಪ್ರತಿ ವ್ಯಕ್ತಿಯಲ್ಲಿನ ಅರಿವೂ 'ವಿಶಿಷ್ಟ'ವಾಗಿರುವುದರಿಂದ, ಅವನಲ್ಲಿನ ಅರಿವಿನ 'ವಿಶಿಷ್ಟತೆ'ಯ ಜ್ಞಾನವನ್ನು ಪಡೆಯುವಲ್ಲಿ 'ಅನುಮಾನ' ಪ್ರಮಾಣಕ್ಕೆ ಬೇಕಾಗುವ 'ವ್ಯಾಪ್ತಿಜ್ಞಾನ'ವು ಸಾಧ್ಯವಾಗುವುದಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ, ಅನ್ಯವ್ಯಕ್ತಿಗಳಲ್ಲಿನ ಅರಿವನ್ನು ನನ್ನ ಅರಿವಿನ 'ವಿಷಯ'ವನ್ನಾಗಿ ಅರಿತರೆ, ಅದು ಆ ಅರಿವನ್ನು 'ಜ್ಞಾತೃ'ವನ್ನಾಗಿ ಗ್ರಹಿಸಿದಂತಾಗುವುದಿಲ್ಲ. ಆದ್ದರಿಂದ, ಅನ್ಯವ್ಯಕ್ತಿಯಲ್ಲಿನ, ಆ ರೀತಿಯ 'ಜ್ಞಾತೃ ಸ್ವರೂಪ'ದ ಅರಿವಿನ ಅಸ್ತಿತ್ವದ ಜ್ಞಾನವನ್ನು ಪಡೆಯುವುದು ಹೇಗೆ ಎನ್ನುವ ಪ್ರಶ್ನೆಯು ಉಳಿದುಕೊಂಡೇ ಇರುತ್ತದೆ.

ಅನ್ಯವ್ಯಕ್ತಿಗಳಲ್ಲಿನ ಅರಿವಿನ ಜ್ಞಾತೃತ್ವದ ಅರಿವು ನನ್ನಲ್ಲಿ ಮೂಡುವುದು ನಾನು ಅವರನ್ನು ನೋಡುವುದರಿಂದಲ್ಲ, ಅವರಿಂದ ನೋಡಲ್ಪಡುವುದರಿಂದವೆನ್ನಬಹುದು. ಹೀಗೆ 'ನೋಡಲ್ಪಡುವಾಗ' ನಾನು ಅನ್ಯವ್ಯಕ್ತಿಯ ಅರಿವಿನ 'ವಿಷಯ'ವಾಗಿ ಪರಿಣಮಿಸುತ್ತೇನೆ. ಅಂದರೆ, ವ್ಯಕ್ತಿಗಳ ನಡುವೆ ಪರಸ್ಪರ ಪ್ರತ್ಯಕ್ಷವೇರ್ಪಟ್ಟಾಗ ಒಬ್ಬ ಜ್ಞಾತೃವು ಮತ್ತೊಬ್ಬ ವ್ಯಕ್ತಿಯನ್ನು ತನ್ನ ಜ್ಞಾನದ ವಿಷಯವನ್ನಾಗಿ ಮಾತ್ರ ಅರಿಯುತ್ತಿರುವನೆಂದಾಯಿತು.

ಆದರೆ ವ್ಯಕ್ತಿಗಳ ನಡುವೆ ಈ ರೀತಿಯ ಜ್ಞಾತೃ - ವಿಷಯ ಸಂಬಂಧವು ಮಾತ್ರ ಸಾಧ್ಯವೆ ? ಕೇವಲ ಇಂದ್ರಿಯ ಪ್ರತ್ಯಕ್ಷಕ್ಕೇ ಅವರ ಸಂಬಂಧವು ಸೀಮಿತಗೊಂಡಾಗ, ಅಷ್ಟು ಮಾತ್ರ ಸಾಧ್ಯವೆಂದೇ ಹೇಳಬೇಕು. ಆದರೆ ವ್ಯಕ್ತಿಗಳ ನಡುವಣ ಸಂಬಂಧವು ಕೇವಲ ಇಂದ್ರಿಯ ಪ್ರತ್ಯಕ್ಷಕ್ಕೇ ಸೀಮಿತವಾಗಿರದೆ, ಸಂಭಾಷಣೆಯ ಹಂತವನ್ನು ತಲುಪಬಹುದು.

ಹಾಗಾದಾಗ, ವ್ಯಕ್ತಿಗಳ ನಡುವೆ ಜ್ಞಾತೃ - ಜ್ಞಾತೃ ಸಂಬಂಧವೇರ್ಪಡುತ್ತದೆ. ಇದು 'ನಾನು-ನೀನು' ಸಂಬಂಧ. ಕೇವಲ ಇಂದ್ರಿಯ ಪ್ರತ್ಯಕ್ಷದಲ್ಲಿ 'ಅವನು' ('ಅವಳು') ಆಗಿ ಉಳಿಯಬಹುದಾದ ಅನ್ಯವ್ಯಕ್ತಿಯು 'ನೀನು' ಆಗಿ ಪರಿಣಮಿಸುವುದು ಸಂಭಾಷಣೆಯಲ್ಲಿ ಮಾತ್ರ ಸಾಧ್ಯ. ಇದು ಇಬ್ಬರು ಜ್ಞಾತೃಗಳ ಪರಸ್ಪರ ನೇರ ಸಂಬಂಧ. ಈ ಅರ್ಥದಲ್ಲಿ ವ್ಯಕ್ತಿಗಳ ನಡುವೆ ಪರಸ್ಪರ 'ಜ್ಞಾತೃ - ಜ್ಞಾತೃ' ಸಂಬಂಧ ವೇರ್ಪಡಬೇಕಾದರೆ ಸಂಭಾಷಣೆಯೇ ಅನಿವಾರ್ಯವಾದ 'ಪ್ರಮಾಣ' ಅಥವಾ 'ಜ್ಞಾನ ಮಾರ್ಗ'ವೆನ್ನಬಹುದು. ಸಂಭಾಷಣೆಯ ಮಾಧ್ಯಮದಲ್ಲಿ ನಾನು ಬೇರೆ 'ಜ್ಞಾತೃ'ವನ್ನು ಕೇವಲ ನೋಡುವುದಿಲ್ಲ, 'ಸಂಧಿಸುತ್ತೇನೆ.'

ಆದರೆ ಅನ್ಯವ್ಯಕ್ತಿಯನ್ನು 'ನೀನು' (ಅಥವಾ 'ನೀವು') ಎಂದು ಸಂಬೋಧಿಸಿ ಮಾತನಾಡಿದ ಮಾತ್ರಕ್ಕೆ ಅವನ 'ಅಂತರಂಗ'ವೆಲ್ಲವೂ ನನಗೆ ಗೊತ್ತಾಗಿಬಿಡುವುದೆ ? ಇಷ್ಟರಿಂದಲೇ ಖಂಡಿತವಾಗಿ ಇದು ಸಾಧ್ಯವಿಲ್ಲ. ಏಕೆಂದರೆ, ನಮ್ಮ ಸಂಭಾಷಣೆಯು ಬಹುಮಟ್ಟಿಗೆ 'ವ್ಯಾವಹಾರಿಕ'ವಾಗಿರುತ್ತದೆ. ಈ ಸಂಭಾಷಣೆಯು ಕೇವಲ 'ಕೊಟ್ಟು-ತೆಗೆಯುವ' ವ್ಯಾಪಾರವಿದ್ದಂತೆ. ಕೆಲವೊಮ್ಮೆ ಪ್ರಪಂಚದಲ್ಲಿನ ಬೇರೆ ವಿಷಯಗಳ ಬಗ್ಗೆ 'ಉದ್ದೇಶರಹಿತ ಹರಟೆ'ಯೂ ಆಗಿರಬಹುದು. ಇದರಲ್ಲಿ ಪರಸ್ಪರ ಭಾವನೆಗಳ, ಆಸೆ-ಆಕಾಂಕ್ಷೆಗಳ, ಮೌಲ್ಯಗಳನ್ನು ಕುರಿತ ದೃಷ್ಟಿಕೋನಗಳ ಕಾಳಜಿಯುತ ಸಂಸರ್ಗವೇನೂ ನಡೆಯುವುದಿಲ್ಲ. ಒಬ್ಬನ 'ಅಂತರಂಗ'ವನ್ನು ಮತ್ತೊಬ್ಬನು ಅರಿತಂತಾಗುವುದಿಲ್ಲ.

M. P. BIDRI

ಆತ್ಮಸಾಕ್ಷಿ, ಪ್ರಾಮಾಣಿಕತೆಗಳ ನಿಯಮವೇನೂ ಇಲ್ಲಿ ಇರುವುದಿಲ್ಲ. ವ್ಯಕ್ತಿಯು ಸ್ವಂತ ಅಭಿಪ್ರಾಯಗಳನ್ನು ಅದುಮಿಕೊಂಡು ಬೇರೆಯವರ ಮೂಗಿನ ನೇರಕ್ಕೆ ಮಾತನಾಡುತ್ತಿರಬಹುದು. ಯಾವಾಗಲೂ ಅಪ್ರಾಮಾಣಿಕವಾಗಿ ಪರಿಣಮಿಸದಿದ್ದರೂ, ಇದೊಂದು 'ಮೇಲ್ಪದರದ' ಸಂಭಾಷಣೆಯಾಗಿ ಮಾತ್ರ ಪರ್ಯವಸಾನವಾಗುತ್ತದೆ.

ಪ್ರತ್ಯಕ್ಷ, ಅನುಮಾನ ಪ್ರಮಾಣಗಳಿಗಿರುವಂತೆ ಸಂಭಾಷಣೆಗೂ ತನ್ನದೇ ಆದ ಅನಿವಾರ್ಯ ಮಿತಿ ಇರುತ್ತದೆ. ಈ ಮಿತಿ ಅರಿವಿನಲ್ಲಿನ ವಿಶಿಷ್ಟತೆಯಿಂದಲೇ ಉಂಟಾಗುತ್ತಲಿರುತ್ತದೆ. ರಾಜಕೀಯ, ಆರ್ಥಿಕ, ಸಾಮಾಜಿಕ ಅರ್ಥಗಳಲ್ಲಿ 'ಸಾಮಾನ್ಯತೆ'ಯು ಸಾಧ್ಯವೆಂದು 'ಕಲ್ಪಿಸಿ'ಕೊಂಡರೂ, ಪ್ರತಿ ವ್ಯಕ್ತಿಯ ವಿಶಿಷ್ಟತೆಯನ್ನು ಅವು ಅಳಿಸಿಹಾಕಲಾರವು. ಕಾರಣ, ಅವನ ವಿಶಿಷ್ಟತೆ ಅವನಲ್ಲಿನ ಅರಿವಿನ ಸ್ವರೂಪದಲ್ಲಿಯೇ ಅಡಗಿದೆ. ಅವನ ಭಾವನೆಗಳನ್ನು, ಪ್ರತಿಕ್ರಿಯೆಗಳನ್ನು, ಆಲೋಚನೆಗಳನ್ನು ಎಷ್ಟೇ ಆಳವಾಗಿ ನಾನು ಅರ್ಥಮಾಡಿಕೊಂಡರೂ, ಅವುಗಳಲ್ಲಿ ಅನುಭೂತಿಯಿಂದ ಪಾಲ್ಗೊಂಡರೂ, ಅವನ್ನು 'ಅವನೇ' ಗ್ರಹಿಸುವ ರೀತಿಯಲ್ಲಿ ನಾನು ಗ್ರಹಿಸಲಾಗುವುದಿಲ್ಲ. ಏಕೆಂದರೆ, ಅವು ಅವನಿಗೆ ಅವನದೇ ಆದ ಸ್ವಾನುಭವದ ಆಂತರಿಕ ಪ್ರತ್ಯಕ್ಷದಲ್ಲಿ 'ಸ್ವಂತಿಕೆ'ಯನ್ನು ಪಡೆದು ಗೋಚರವಾಗುತ್ತಲಿರುತ್ತವೆ. ನಾನು 'ಅವನಲ್ಲ'ವಾದ್ದರಿಂದ ಅವನು ನನಗೆ ಹಾಗೆ ಗೋಚರಿಸಲು ಸಾಧ್ಯವಿಲ್ಲ. ಸಂಭಾಷಣೆಯಲ್ಲಿ ತೊಡಗುವ ಅರಿವಿನಲ್ಲಿ ಹುದುಗಿರುವ ಅನಿವಾರ್ಯ ಮಿತಿ ಇದು; ಇದು ಆವಶ್ಯಕವೂ ಹೌದು; ಏಕೆಂದರೆ, ಅರಿವುಗಳಲ್ಲಿನ ಈ ರೀತಿಯಾದ ಪರಸ್ಪರ 'ನಿಷೇಧ'ಗಳಿಂದಲೇ ಅವುಗಳ 'ಒಮ್ಮತಗಳೂ,' 'ಭಿನ್ನಾಭಿಪ್ರಾಯಗಳೂ' ಸಾಧ್ಯವಾಗುತ್ತಲಿರುತ್ತವೆ.

ಈ ಅನಿವಾರ್ಯ ಮಿತಿಯೇ ಅಲ್ಲದೆ, ಕೆಲವು ನಿವಾರಣೀಯ ದೋಷಗಳೂ ಸಂಭಾಷಣೆಯನ್ನು ಪ್ರವೇಶಿಸಬಹುದು. ಈ ದೋಷಗಳು ಆಂತರಿಕವಾಗಿರಬಹುದು ಅಥವಾ ಬಾಹ್ಯ ಕಾರಣಗಳಿಂದ ಏರ್ಪಡುತ್ತಲಿರಬಹುದು. ಅಂಜಿಕೆ, ದಾಕ್ಷಿಣ್ಯ, ಸಂಕೋಚ, ಅಹಂಭಾವ ಇತ್ಯಾದಿಗಳು ತಲೆದೋರಿದಾಗ ಸಂಭಾಷಣೆಯ ಸೇತುವೆಯಲ್ಲಿ ಬಿರುಕು ಬರುವುದು ಖಚಿತ. ಇಂತಹ ಸಂದರ್ಭಗಳಲ್ಲಿ ಸಂಭಾಷಣೆಯು ತನ್ನ ನೈಜತೆಯನ್ನು ಕಳೆದುಕೊಂಡು, ಕೃತಕವಾಗಿಬಿಡುತ್ತದೆ; ವ್ಯಕ್ತಿಗಳ ಪರಸ್ಪರ ವಿಶಿಷ್ಟತೆಯನ್ನು ಅರಿಯುವಲ್ಲಿ ಅದು ತಾತ್ವಿಕವಾಗಿ ಅಪರಿಣಾಮಕಾರಿಯಾಗಿ, ವಿಫಲವಾಗುತ್ತದೆ.

ಆದ್ದರಿಂದ ಸಂಭಾಷಣೆಯಲ್ಲಿ ಹೇಳುವವನಷ್ಟೇ ಕೇಳುವವನೂ ಮುಖ್ಯವೆನ್ನುವುದನ್ನು ಮನಗಾಣಬೇಕು. ಸಂಭಾಷಣೆಯಲ್ಲಿ ತೊಡುಗುವವರಿಬ್ಬರಿಗೂ ಸ್ವಾತಂತ್ರ್ಯವಿರಬೇಕು. ತಮ್ಮ ಅಭಿಪ್ರಾಯಗಳನ್ನು, ಭಿನ್ನಾಭಿಪ್ರಾಯಗಳನ್ನು ಪ್ರಾಮಾಣಿಕವಾದ ಬಿಚ್ಚು ಮನಸ್ಸಿನಿಂದ ವ್ಯಕ್ತಪಡಿಸುವಂತಿರಬೇಕು. ಆ ರೀತಿಯ 'ಮುಕ್ತ ಸಂಭಾಷಣೆ'ಯಿಂದ ಮಾತ್ರ ವ್ಯಕ್ತಿಗಳು ಪರಸ್ಪರ ಭಾವನೆಗಳಲ್ಲಿ, ಅನುಭವಗಳಲ್ಲಿ ಪಾಲ್ಗೊಳ್ಳುವಂತಾಗಿ, ಅವರ ಬದುಕು ಹೆಚ್ಚು ಬಾಹುಳ್ಯವನ್ನು ಪಡೆದಂತಾಗುತ್ತದೆ; ಅವರಲ್ಲಿನ ಅರಿವು ಹೆಚ್ಚು ಸತ್ವಪುಷ್ಟಿಯನ್ನು ಪಡೆಯುತ್ತದೆ.

ನಮಗೆ ಗೋಚರವಿಲ್ಲದೆಯೇ ಅನೇಕ ವೇಳೆ ನಾವು ಪೂರ್ವಾಗ್ರಹ ಪೀಡಿತರಾಗಿರುವುದೂ ಉಂಟು. ಪೂರ್ವಾಗ್ರಹ ಪೀಡನೆ 'ಮುಕ್ತ ಸಂಭಾಷಣೆಗೆ' ಅಜ್ಞಾತ ಶತ್ರು. ಇದರಿಂದ ನಮ್ಮ ನಂಬಿಕೆಗಳಿಗೆ ಅನುಸಾರವಾಗಿ ಬೇರೆಯವನು ಮಾತನಾಡಿದರೆ ಮಾತ್ರ ಅದನ್ನು ಮೆಚ್ಚಿಕೊಳ್ಳುವ, ಇಲ್ಲದಿದ್ದರೆ ನಿರಾಕರಿಸುವ ಮನೋಭಾವವನ್ನು ನಾವು ಬೆಳೆಸಿಕೊಳ್ಳುತ್ತೇವೆ. ಇದರಿಂದ ಯಾವುದೇ 'ಹೊಸ' ಸತ್ಯವನ್ನು, ವಾದಸರಣಿಯನ್ನು ಅರಿಯುವ ಅವಕಾಶವನ್ನೇ ನಾವು ಕಳೆದುಕೊಂಡಂತಾಗುತ್ತದೆ. ಅರಿವು ಪರಿಪಕ್ವತೆಯನ್ನು ಪಡೆಯುವಲ್ಲಿ ಇದಕ್ಕಿಂತಲೂ ದೊಡ್ಡ ಅಡಚಣೆ ಮತ್ತೊಂದಿಲ್ಲ. ಇದರಿಂದ ಅರಿವು ಆಂತರಿಕವಾಗಿ ಸ್ವತಂತ್ರವಾದಾಗಲೇ, 'ಮುಕ್ತ ಸಂಭಾಷಣೆ'ಯು ಸಾಧ್ಯವಾಗಿ ಫಲಪ್ರದವಾಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ಸಂಭಾಷಣೆಯು ಇಂದ್ರಿಯ ಪ್ರತ್ಯಕ್ಷವು ಒದಗಿಸುವ 'ಸ್ಥಾನಿಕ ನೆಲೆ'ಯ ಮೇಲೆ ಆಧಾರಪಟ್ಟಿದ್ದರೂ, ಅದನ್ನು ಪೂರ್ಣವಾಗಿ ಇಂದ್ರಿಯ ಪ್ರತ್ಯಕ್ಷದಲ್ಲಾಗಲಿ, ಅನುಮಾನ ಪ್ರಮಾಣದಲ್ಲಾಗಲಿ ವಿಲೀನಗೊಳಿಸಲಾಗುವುದಿಲ್ಲ. ಅನ್ಯವ್ಯಕ್ತಿಗಳಲ್ಲಿನ ಅರಿವಿನ ಜ್ಞಾನವನ್ನು ಪಡೆಯುವಲ್ಲಿ ಅದರ 'ನಿರ್ದಿಷ್ಟ' ಪಾತ್ರವಿದ್ದೇ ಇರುತ್ತದೆ.

ಜಿ. ಶ್ರೀನಿವಾಸನ್
೨೩೬೪, ೧ನೇ ಮಹಡಿ, ೧೨ನೇ ಮುಖ್ಯರಸ್ತೆ
'ಎ' ಬ್ಲಾಕ್, ೨ನೇ ಹಂತ, ಸುಬ್ರಮಣ್ಯನಗರ, ರಾಜಾಜಿನಗರ,
ಬೆಂಗಳೂರು - ೫೬೦ ೦೧೦

## ಸಾದರ ಸ್ವೀಕಾರ

**ರಾಮನ ಸಾಮರ್ಥ್ಯ** (ಮಕ್ಕಳ ಕಥೆಗಳು) ಸ್ವತಃ
ನವಗಿರಿನಂದ
**ಪುಟ : ೬೪** **ಬೆಲೆ : ರೂ. ೨೫**

**ಜೂಟಾಟ** (ಮಕ್ಕಳ ನಾಟಕಗಳು) ನೀಳಾದೇವಿ
**ಪುಟ : ೭೬** **ಬೆಲೆ : ರೂ. ೨೮**

**ರೇಡಿಯೋದಿಂದ ವಿಡಿಯೋವರೆಗೆ** (ನಗೆಬರಹಗಳು)
ಅನಂತ ಕಲ್ಲೋಳ
**ಪುಟ : ೮೮** **ಬೆಲೆ : ರೂ. ೩೫**

**ಮುಂಬೈ ಡೈರಿ** (ಲೇಖನ ಸಂಗ್ರಹ) ಉಮಾ ರಾವ್
**ಪುಟ : ೧೩೬** **ಬೆಲೆ : ರೂ. ೬೦**

**ಆಲಿಕೆ: ಸಮಸ್ಯೆ ಪರಿಹಾರ** ಡಾ॥ ಜಿ. ಪುರುಷೋತ್ತಮ
**ಪುಟ : ೫೬** **ಬೆಲೆ : ರೂ. ೨೦**

**ಕಂದಾ ಅಕ್ಷರ ಕಲಿ**
(ಮಕ್ಕಳಿಗೆ ಸರಳ ಪಾಠಗಳು ಚಿತ್ರಗಳ ಸಹಿತ)
ಬಿ. ಕೆ. ತಿರುಮಲಮ್ಮ
**ಪುಟ : ೪೪** **ಬೆಲೆ : ರೂ. [illegible]**

**ಭಾನುವಾರವೆಂದರೆ** (ಕವನ ಸಂಕಲನ) ಸುಕನ್ಯಾ ಕಳಸ
**ಪುಟ : ೪೮** **ಬೆಲೆ : ರೂ. ೨೦**

**ಕನ್ನಡ ನಾಡಿನ ಕೂಸುಮರಿ** (ಮಕ್ಕಳ ಪದ್ಯಗಳು)
ಎನ್. ಶ್ರೀನಿವಾಸ ಉಡುಪ
**ಪುಟ : ೩೬** **ಬೆಲೆ : ರೂ. ೧೫**

**ಸಿಂಡ್ರೆಲಾ -ಅಂಬ್ರೆಲಾ** (ಪುಟಾಣಿ ಪ್ರಾಸಗಳು)
ಚಿಂತಾಮಣಿ ಕೊಡ್ಲೆಕೆರೆ
**ಪುಟ : ೪೦** **ಬೆಲೆ : ರೂ. ೨೦**

**ವೈದ್ಯಕೀಯ ನಿರ್ಲಕ್ಷ್ಯ** (ಗ್ರಾಹಕ ಜಾಗೃತಿ)
ವೈ. ಜಿ. ಮುರಳೀಧರ
**ಪುಟ : ೪೦** **ಬೆಲೆ : ರೂ. ೧೬**

*ಮೇಲಿನ ಹತ್ತು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

**ಅಣ್ಣನ ಅರಿವು ಮತ್ತು ಆಚಾರ**(ವಾಚನ)
ಕೆ.ಡಿ. ಮುತ್ತೂರ
**ಪುಟ : ೧೨೬** **ಬೆಲೆ : ರೂ. ೩೫**
**ಸರ್ವೋದಯ ಪ್ರಕಾಶನ**, ಮುಧೋಳ, ಬಾಗಲಕೋಟೆ ಜಿಲ್ಲೆ

**ಗ್ರಂಥ ಗ್ರಂಥಾಲಯ ವಾಚನ** (ಸೂಕ್ತಿ ಸಂಗ್ರಹ)
ಸಂ: ಟಿ. ವಿ. ವೆಂಕಟರಮಣಯ್ಯ
**ಪುಟ : ೮೦** **ಬೆಲೆ : ರೂ. ೨೫**

**ನಗೆ - ಹಾಸ್ಯ** (ಸೂಕ್ತಿ ಸಂಗ್ರಹ)
ಸಂ: ಟಿ. ವಿ. ವೆಂಕಟರಮಣಯ್ಯ
**ಪುಟ : ೮೦** **ಬೆಲೆ : ರೂ. ೨೫**

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು :*
**ಟಿ. ವಿ. ವೆಂಕಟರಮಣಯ್ಯ** , ಇಡಬ್ಲ್ಯುಎಸ್ ೨೧೮,
ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್,
ಬಸವೇಶ್ವರನಗರ, ಬೆಂಗಳೂರು-೫೬೦ ೦೭೯

**ಸೂರಿನೊಳಗೆ** (ಕವನ ಸಂಕಲನ) ಪಿ. ಭೋಗರಾಜು
**ಪುಟ : ೭೨** **ಬೆಲೆ : ರೂ. ೪೦**
**ಶ್ರಮ ಸಂಸ್ಕೃತಿ ಪ್ರಕಾಶನ**, ೧ನೇ ಮುಖ್ಯರಸ್ತೆ,
ಅರಳೆಪೇಟೆ, ತುಮಕೂರು-೫೭೨ ೧೦೨

**ನಾಳೆಯ ಪುಸ್ತಕ** (e-book) ಬೇದ್ರೆ ಮಂಜುನಾಥ್
**ಪುಟ : ೩೬** **ಬೆಲೆ : ರೂ. ೮**
**ಬೇದ್ರೆ ಪ್ರಕಾಶಕರು**, ಕೆಳಗೋಟೆ, ಚಿತ್ರದುರ್ಗ-೫೭೭೫೦೧

**ಸಮುದಾಯ ೨೫**
ಸಂ: ಸಿ. ಆರ್. ಭಟ್, ಸಿ. ಕೆ. ಗುಂಡಣ್ಣ
**ಪುಟ : ೮೪** **ಬೆಲೆ : ರೂ. ೨೫**
**ಸಮುದಾಯ ಹುಬ್ಬಳ್ಳಿ ಧಾರವಾಡ ಘಟಕ**
ಬಿ. ಐ. ಈಳಗೇರ, ಪ್ರಶಾಂತನಗರ, ಧಾರವಾಡ-೫೮೦೦೦೩

**ಗ್ಯಾಟ್ ಡೆಂಕಲ್ ಡಬ್ಲ್ಯುಟಿಒ ಒಂದು ವಿಷಸರ್ಪ**
ಬಿ. ಕೆ. ಸುಂದರೇಶ್
**ಪುಟ : ೩೬** **ಬೆಲೆ : ರೂ. ೧೦**
**ನವೋದಯ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**, ಚಿಕ್ಕಮಗಳೂರು

**ನೊಂದ ಜನಮನ ಕೂಗು** (ಪದ್ಯ ಸಂಕಲನ)
ಕುವರ ಯಲ್ಲಪ್ಪ
**ಪುಟ : ೫೬** **ಬೆಲೆ : ರೂ. ೨೦**
**ಕವಿಕುಲ ಪ್ರಕಾಶನ**, ೬೨, ಲಾವಣಿ ನಾಗರಾಜ್ ರಸ್ತೆ,
ವಿಜಯಾನಂದನಗರ, ನಂದಿನಿ ಲೇಔಟ್, ಬೆಂಗಳೂರು-೯೬

**ಗೊಂದಲಗಳ ನಾಡಿನಲ್ಲಿ** (ಲೇಖನ ಸಂಗ್ರಹ)
ಡಾ॥ ಎಂ. ಆರ್. ಮಂದಾರವಲ್ಲಿ
**ಪುಟ : ೮೮** **ಬೆಲೆ : ರೂ. ೫೦**
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಕೋಲ- ೫೮೧೩೧೪

# ನೈತಿಕ ಮೌಲ್ಯಗಳನ್ನು ಎತ್ತಿ ಹಿಡಿದ ಭಾರತೀಯ ನಾಸ್ತಿಕ ಮತಗಳು

ಭಾರತದಲ್ಲಿ ನಾಸ್ತಿಕ ಮತಗಳಿವೆ ಎಂದರೆ ಅನೇಕರಿಗೆ ಆಶ್ಚರ್ಯ. ಆದರೆ ಅವು ಕೇವಲ ಇವೆ ಮಾತ್ರವಲ್ಲ, ಪ್ರವರ್ಧಮಾನ ಸ್ಥಿತಿಯಲ್ಲೂ ಇವೆ. ಹಾಗೂ ನೈತಿಕ ಮೌಲ್ಯಗಳನ್ನು ಅತ್ಯಂತ ಎತ್ತರಕ್ಕೆ ಎತ್ತಿ ಹಿಡಿದಿವೆ. ಬೌದ್ಧ ಹಾಗೂ ಜೈನಮತಗಳೇ ಈ ನಾಸ್ತಿಕ ಮತಗಳು.

ಹುಟ್ಟಿದ ಭಾರತವನ್ನು ತ್ಯಜಿಸಿದರೂ, ಶ್ರೀಲಂಕಾ, ಚೀನ, ಜಪಾನ್ ಮತ್ತಿತರ ಪೌರ್ವಾತ್ಯ ದೇಶಗಳಿಗೆ ಹಬ್ಬಿ ಈಗಲೂ ಜನಜೀವನವನ್ನು ಜಾಜ್ವಲ್ಯಮಾನವಾಗಿ ಬೆಳಗುತ್ತಿದೆ ಬೌದ್ಧಮತ. ವೈದಿಕ ಮತದ ಬಲವಾದ ಆಘಾತವನ್ನು ತಡೆದುಕೊಂಡು ಜೈನಮತವು ಈಗಲೂ ಗುಜರಾಥ, ರಾಜಾಸ್ಥಾನ, ಕರ್ನಾಟಕಗಳಲ್ಲಿ ಕಳಕಳಿಸುತ್ತಿದೆ. ಇವೆರಡೂ ಪಕ್ಕಾ ನಾಸ್ತಿಕ ಮತಗಳೆಂಬುದು ಸ್ವತಃ ಆ ಮತಗಳ ಅನುಯಾಯಿಗಳನೇಕರಿಗೆ ತಿಳಿದಿಲ್ಲ! ವೈದಿಕ ಮತದ ಪ್ರಭಾವಕ್ಕೊಳಗಾಗಿ ಈಗ ಬೌದ್ಧರು ಬುದ್ಧನನ್ನು ದೇವರೆಂದೇ ತಿಳಿದು ಪೂಜಿಸುತ್ತಾರೆ. ವೈದಿಕರು ತಮ್ಮ ದೇವರುಗಳಾದ ವಿಷ್ಣು, ಶಿವ, ಗಣೇಶ, ಕುಮಾರರನ್ನು ಪೂಜಿಸುವಂತೆಯೇ ಜೈನರೂ ಸಹ ತೀರ್ಥಂಕರರನ್ನು ಪೂಜಿಸಿ ವರಗಳನ್ನು ಬೇಡಿಕೊಳ್ಳುವ ಪದ್ಧತಿ ಬೆಳೆದುಬಂದು ಈ ಮತಗಳ ಮುಖ್ಯ ತತ್ವವಾದ ನಾಸ್ತಿಕತೆ ಕಣ್ಮರೆಯಾಗಿದೆ. ಆದರೆ, ಪುಣ್ಯವಶಾತ್, ಆ ಮತಗಳ ಅಧ್ವರ್ಯುಗಳು ಪ್ರತಿಪಾದಿಸಿದ ನೈತಿಕ ಮೌಲ್ಯಗಳು ಈಗಲೂ ಜನಜೀವನವನ್ನು ಬಹುಮಟ್ಟಿಗೆ ಶುಚಿಯಾಗಿಟ್ಟುಕೊಂಡಿರಲು ಪ್ರಚೋದಿಸುತ್ತಿವೆ.



ಆಸ್ತಿಕ ನಂಬಿಕೆಗಳನ್ನು ಖಂಡಿಸಿ, 'ಪಂಚಶೀಲ'ಗಳಿಂದಲೇ ಶಾಂತಿಯುತ ಜೀವನ ಸಾಧ್ಯ ಎಂದು ಬೋಧಿಸಿದ ಮಹಾವೀರ

ದುಃಖದ ಮೂಲ ಕಾರಣವನ್ನು ಹುಡುಕಿಕೊಂಡು ಹೊರಟ ಬುದ್ಧನಿಗೆ ಪ್ರಪಂಚವನ್ನೂ ಜನಜೀವನವನ್ನೂ ನಿಯಂತ್ರಿಸುತ್ತಿದ್ದಾನೆಂದು ಹೇಳುವ ವೈದಿಕಮತದ ದೇವರು, ಸೃಷ್ಟಿಕರ್ತ ಅಥವಾ ಬ್ರಹ್ಮನ್‌ನಲ್ಲಿ ನಂಬಿಕೆ ಬರಲಿಲ್ಲ. ಯಾವುದು ನಮಗೆ ನಿಖರವಾಗಿ ತಿಳಿದಿಲ್ಲವೋ ಅದನ್ನು ನಾವು ವರ್ಜಿಸಬೇಕು ಎಂಬುದೇ ಅವನ ಇರಾದೆ. ಪಂಚೇಂದ್ರಿಯಗಳಿಂದಲೂ ತರ್ಕದಿಂದಲೂ ಸಾಧಿಸಲಾಗದ ತತ್ವವನ್ನು ಅವನು ನಿರಾಕರಿಸಿದ. ಅಲೌಕಿಕವಾದ ಯಾವುದೇ ಶಕ್ತಿ ನಮ್ಮ ಆಗುಹೋಗುಗಳನ್ನು ನಿಯಂತ್ರಿಸುತ್ತಿದೆ ಎಂಬ ವಾದ ಬುದ್ಧನಿಗೆ ಹಿಡಿಸಲಿಲ್ಲ. ಶಾಸ್ತ್ರಾಧಾರದಿಂದಲೇ ತತ್ವಗಳನ್ನು ನಿರೂಪಿಸುವ ಕುರುಡು ಧರ್ಮವನ್ನು ನಿರಾಕರಿಸಿದ. ಗಾಳಿಗೋಪುರಗಳಲ್ಲೇ ವಿಹರಿಸುತ್ತಿದ್ದ ಆಗಿನ ದರ್ಶನಗಳು ಅವನಿಗೆ ಒಪ್ಪಿಗೆಯಾಗಲಿಲ್ಲ, ದೇವರ ಬಗ್ಗೆ ಬುದ್ಧ ತಲೆ ಕೆಡಿಸಿಕೊಳ್ಳಲಿಲ್ಲ.

ವೈದಿಕ ಧರ್ಮದಲ್ಲಿ ಆಗ ಅತ್ಯಂತ ಮಹತ್ವವನ್ನು ಪಡೆದಿದ್ದ ಯಜ್ಞಯಾಗಾದಿ ಮತಾಚರಣೆಗಳನ್ನು ಬುದ್ಧ ಕಟುವಾಗಿ ಟೀಕಿಸಿ ಹಿತಮಿತವಾದ ಕರುಣೆ, ಪ್ರೀತಿ, ಔದಾರ್ಯಗಳಿಂದ ಕೂಡಿದ ಜೀವನಕ್ಕೆ ಇಂಬುಗೊಟ್ಟ. ದುಃಖ ನಿವಾರಣೆಯೇ ಅವನ ಮುಖ್ಯೋದ್ದೇಶವಾಗಿತ್ತು. ಅದಕ್ಕೋಸ್ಕರ ಆತ ಶುದ್ಧ ಜೀವನದ ತಳಪಾಯದ ಹಾಗಿರುವ ನೈತಿಕ ಮೌಲ್ಯಗಳನ್ನೊಳಗೊಂಡ ಎಂಟು ನಿಯಮಗಳನ್ನು ಜನರಿಗೆ ಬೋಧಿಸಿದ.

ಇದೇ ನೀತಿನಿಯಮಗಳನ್ನು ಬುದ್ಧ ಭಿಕ್ಕುಗಳಿಗೆ ಕಟ್ಟುನಿಟ್ಟಾಗಿ ಅನುಸರಿಸಲು ಆದೇಶಿಸಿದ. ಶುದ್ಧ ಜೀವನ ನಡೆಸಲು ನಾವು ಶೀಲವಂತರಾಗಿರಬೇಕು. ಶೀಲ ಎಂದರೆ ನುಡಿಯಲ್ಲಿ ಸತ್ಯ, ಜೀವನದಲ್ಲಿ ತೃಪ್ತಿ, ನಡತೆಯಲ್ಲಿ ಅಹಿಂಸೆ ಮುಂತಾದುವು. ಅಹಿಂಸೆಗೆ ಬುದ್ಧ ಪ್ರಾಮುಖ್ಯತೆಯನ್ನು ಕೊಟ್ಟಿದ್ದನು. ಅಹಿಂಸೆ ಎಂದರೆ ಕೇವಲ ಪ್ರಾಣಿಗಳನ್ನು ಕೊಲ್ಲದೇ ಇರುವುದಲ್ಲ. ಮಾನವರಿಗೂ ಪ್ರಾಣಿಗಳಿಗೂ ಯಾವ ರೀತಿಯ ಹಿಂಸೆಯನ್ನೂ ಮಾಡಬಾರದು. ದೈಹಿಕ ಹಾಗೂ ಮಾನಸಿಕ ಹಿಂಸೆಯನ್ನು ವರ್ಜಿಸಬೇಕು. ಹಿಂಸಾಚಾರದಿಂದ ಕಂಗೆಟ್ಟುಹೋಗಿದ್ದ ಆಗಿನ ಜನತೆಗೆ ಈ ನವ ''ಶೀಲ''ಗಳು ಅತ್ಯಂತ ಪ್ರಿಯವಾದವು. ಲಕ್ಷಾಂತರ ಜನ ಬುದ್ಧನಿಗೆ ಶರಣು ಹೋದರು. ಅವನ ಅನುಯಾಯಿಗಳಾದ ಭಿಕ್ಕುಗಳ ಸಂಘಗಳು ಬೃಹದಾಕಾರವನ್ನು ತಾಳಿದವು. ಚಕ್ರವರ್ತಿಗಳು, ರಾಜಮಹಾರಾಜರುಗಳು ಬೌದ್ಧ ಧರ್ಮದಲ್ಲಿ ಶ್ರದ್ಧೆಯುಳ್ಳವರಾದರು, ಚಕ್ರವರ್ತಿ ಬಿಂಬಸಾರನು ಬೌದ್ಧಮತವನ್ನು ಆದರಿಸಿದನು. ನಂತರ, ಅವನ ಮಗ ವಿಶ್ವವಿಖ್ಯಾತನಾದ ಅಶೋಕ ಕಳಿಂಗ ಯುದ್ಧದಲ್ಲಿ ಭಾರಿ ವಿಜಯವನ್ನೇ ಗಳಿಸಿದ. ಆದರೆ ನಂತರ ಪಶ್ಚಾತ್ತಾಪಗಳಿಂದ ನೊಂದು ಯುದ್ಧ ಮಾಡುವುದೇ ಅತ್ಯಂತ ಹೀನಕಾರ್ಯ ಎಂದೆಣಿಸಿದ. ಇನ್ನು ಯುದ್ಧ ಮಾಡುವುದಿಲ್ಲ ಎಂದು ನಿರ್ಧರಿಸಿ, ಗೆದ್ದರೂ ಯುದ್ಧವನ್ನು ತ್ಯಜಿಸಿದ.

ಪ್ರಪಂಚದ ಚರಿತ್ರೆಯಲ್ಲೇ ಅಪೂರ್ವ ನಕ್ಷತ್ರದಂತೆ ಅವನು ಕಂಗೊಳಿಸುತ್ತಿದ್ದಾನೆ. ಈತ ಬೌದ್ಧ ಧರ್ಮಾನುಯಾಯಿಯಾಗಿ ಆ ಧರ್ಮವನ್ನು ಶ್ರೀಲಂಕಾ ಮೊದಲಾದ ಪೌರ್ವಾತ್ಯ ದೇಶಗಳಲ್ಲಿ ಹಬ್ಬುವಂತೆ ಮಾಡಿದ. ಅನಂತರ

**ಟಿ. ಎಸ್. ಸಂಜೀವರಾವ್**

### ಮಾನವ ಕರ್ಮದ ಮಹತ್ವ

*ಮನುಷ್ಯನು ತನ್ನ ಕರ್ಮಬಲದಿಂದ ಏನೆಲ್ಲ ಮಾಡಬಲ್ಲವನೆಂದೂ, ಉನ್ನತೋನ್ನತ ಪದಕ್ಕೇರಬಲ್ಲನೆಂದೂ ತಿಳಿಸುತ್ತ ಭಗವಾನ್ ಮಹಾವೀರರು ಕರ್ಮದ ಮಹತ್ವವನ್ನು ವಿವರಿಸಿದರು.... ಬಾಹ್ಯ ದೈವೀಶಕ್ತಿಯ ಮೇಲೆ ಅವಲಂಬಿಸಿಕೊಳ್ಳುವ ಅಗತ್ಯವೇನೂ ಇಲ್ಲ. ಸರ್ವವ್ಯಾಪಿಯಾದ, ಸರ್ವಸ್ವತಂತ್ರನಾದ, ನಿತ್ಯವೆನಿಸುವ ಈಶ್ವರೀ ಶಕ್ತಿಗೆ ಜೈನಧರ್ಮದಲ್ಲಿ ಪ್ರವೇಶವಿಲ್ಲ. ಈ ವಿಶ್ವವನ್ನು ಸೃಷ್ಟಿಸಿರಬಹುದಾದ ಮತ್ತು ನಮ್ಮ ಶುಭ-ಅಶುಭ ಕರ್ಮಗಳಿಗೆ ಫಲವನ್ನೀಯಬಹುದಾದ ಈಶ್ವರೀ ಶಕ್ತಿ ಎಂಬುದಿಲ್ಲ.*

*- ಡಾ॥ ಜಗದೀಶಚಂದ್ರ ಜೈನ್*

### ವಾಸ್ತವಿಕ ದೃಷ್ಟಿ

*ಬುದ್ಧನದು ವಾಸ್ತವಿಕ ದೃಷ್ಟಿ. ಆದ್ದರಿಂದ ಆತನಿಗೆ ದೇವರ ಅಸ್ತಿತ್ವದಲ್ಲಿಯಾಗಲಿ, ಪ್ರಾರ್ಥನೆ, ಯಜ್ಞಯಾಗಾದಿಗಳಿಂದ ಜೀವನದ ಕ್ಲೇಶಗಳಿಗೆ ನಿವಾರಣೆ ಸಿಕ್ಕುತ್ತದೆ ಎಂಬುದರಲ್ಲಿಯಾಗಲಿ ನಂಬಿಕೆ ಬರಲಿಲ್ಲ. ಆದ್ದರಿಂದ ಜನಗಳಿಗೆ ಆತ ಪ್ರಾರ್ಥನೆ ಮಾಡಿ, ಯಜ್ಞ ಯಾಗಾದಿಗಳನ್ನು ಮಾಡಿ ಎಂದು ಬೋಧಿಸಲಿಲ್ಲ. ಬುದ್ಧನೇ ನಾಸ್ತಿಕವಾದವನ್ನು ವಿಸ್ತಾರವಾಗಿ ಮಾಡಿದ್ದಾನೆ ಎಂದು ಅಶ್ವಘೋಷ ಹೇಳಿದ್ದಾನೆ.*

*-ದೇಬಿಪ್ರಸಾದ ಚಟ್ಟೋಪಾಧ್ಯಾಯ*

### ಮೂಲಧಾತುಗಳು

ಜೈನಮತದ ದೃಷ್ಟಿಯಲ್ಲಿ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವೂ ಪುದ್ಗಲದಿಂದಲೇ ವಿಕಾಸ ಹೊಂದಿದೆ. ಪುದ್ಗಲ ಎಂದರೆ ಸೂಕ್ಷ್ಮವಾದ ಮೂಲಧಾತುಗಳು... ಇವು ಭೌತಿಕ ಪ್ರಪಂಚದ ಆಧಾರ... ಜೈನರು ಜಗತ್ತಿಗೆ ಕಾರಣನಾದ ಈಶ್ವರ ತತ್ವವನ್ನೊಪ್ಪುವುದಿಲ್ಲ.

- ವಿದ್ವಾನ್ ಇಮ್ಮಡಿ ಶಿವಬಸವ ಸ್ವಾಮಿಗಳು

### ಪೂರ್ಣ ನಿರಾಕರಣೆ

ಆದಿಕಾಲದ ಉಪನಿಷತ್ತುಗಳಲ್ಲಿ ದೇವರೆಂಬ ವ್ಯಕ್ತಿ ಇದ್ದಾನೆಂಬ ನಂಬಿಕೆಗೆ ವ್ಯತಿರಿಕ್ತವಾದ ಭಾವನೆ ಹಾಸುಹೊಕ್ಕಾಗಿದೆ. ಬುದ್ಧನಾದರೋ ಈ ನಂಬಿಕೆಯನ್ನು ಪೂರ್ಣವಾಗಿ ನಿರಾಕರಿಸಿರುತ್ತಾನೆ.

- ಎಮ್. ಹಿರಿಯಣ್ಣ

ಬುದ್ಧನ ಪ್ರಕಾರ ಯಾವುದೂ ಸ್ಥಿರವಲ್ಲ... ಆತ್ಮನೂ ಇಲ್ಲ, ಪರಮಾತ್ಮನೂ ಇಲ್ಲ.

- ಸುರೇಂದ್ರನಾಥ ದಾಸಗುಪ್ತ



ಆತ್ಮನೂ ಇಲ್ಲ, ಪರಮಾತ್ಮನೂ ಇಲ್ಲ; ಶುದ್ಧ ಜೀವನದಿಂದಲೇ ದುಃಖಕ್ಕೆ ಪರಿಹಾರ ಎಂದು ಬೋಧಿಸಿದ ಬುದ್ಧ

ನೂರಾರು ವರ್ಷ ಬೌದ್ಧ ಮತ ಪ್ರವರ್ಧಮಾನ ಸ್ಥಿತಿಯಲ್ಲಿ ವಿಜೃಂಭಿಸಿ ಜನಜೀವನವನ್ನು ಸದ್ಗುಣ, ಸತ್ಕಾರ್ಯಗಳಿಂದ ಬೆಳಗಿತು. ಬೌದ್ಧ ಧರ್ಮದ ದರ್ಶನದಿಂದ ಆಕರ್ಷಿತರಾಗಿ ಪಾಶ್ಚಿಮಾತ್ಯ ದೇಶಗಳ ಜನ ಇದರ ಸದ್ಗುಣಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಿದ್ದಾರೆ. ಭಾರತದಲ್ಲಿ ಭೀಮರಾವ್ ಅಂಬೇಡ್ಕರ್ ಅವರ ಸಾಹಸದಿಂದಾಗಿ ಲಕ್ಷಾಂತರ ದಲಿತರು ಬೌದ್ಧ ಧರ್ಮವನ್ನು ಪ್ರೀತಿಯಿಂದ ಅಪ್ಪಿಕೊಂಡಿದ್ದಾರೆ.

ಜೈನಮತವು ನಾಸ್ತಿಕತೆಯನ್ನು ತರ್ಕಬದ್ಧವಾಗಿ ನಿರೂಪಿಸಿದೆ. ಹಾಗೆಯೇ ಮಾನವನ ಉನ್ನತಿಗಾಗಿ ಅತ್ಯಂತ ತೀಕ್ಷ್ಣವಾದ ಅಹಿಂಸಾತತ್ವವನ್ನೂ ಬೋಧಿಸಿದೆ. ಇದು ತತ್ವ ಮಾತ್ರಕ್ಕೆ ಸೀಮಿತವಾಗಿಲ್ಲ. ದಿನ ನಿತ್ಯ ನಡೆವಳಿಕೆಯಲ್ಲಿ ಅದನ್ನು ಪ್ರಖರವಾಗಿ ಅಳವಡಿಸಿಕೊಳ್ಳಲು ಬೇಕಾದ ಕಟ್ಟುಪಾಡುಗಳನ್ನೂ ಸ್ಪಷ್ಟವಾಗಿ ಉಲ್ಲೇಖಿಸಿದೆ. ಸಕಲ ಜೀವಿಗಳನ್ನೂ - ತಗಣೆ, ಸೊಳ್ಳೆ ಮೊದಲಾದ ಮಾನವನನ್ನು ಕಾಡುವ ಕ್ರಿಮಿ ಕೀಟಗಳನ್ನೂ ಸಹ ಕರುಣೆಯಿಂದ ಪ್ರೀತಿಯಿಂದ ಕಾಣಬೇಕು; ಅವುಗಳಿಗೆ ನೋವನ್ನುಂಟು ಮಾಡಬಾರದು ಎಂಬ ಉದಾತ್ತ ಸಾಂಸ್ಕೃತಿಕ ಧ್ಯೇಯವನ್ನು ಜೈನಧರ್ಮ ಪ್ರತಿಪಾದಿಸಿದೆ. ಜೈನಧರ್ಮದಲ್ಲಿ ಅಹಿಂಸಾ ತತ್ವವು ನೀತಿಯ ಪರಾಕಾಷ್ಠತೆಯ ಶಿಖರವನ್ನು ತಲುಪಿದೆ. ಮಹಾತ್ಮ ಗಾಂಧಿಯವರು ಈ ನೀತಿಯನ್ನು ಮಾನವನು ತನ್ನ ಸಕಲ ಕಾರ್ಯಕಲಾಪಗಳಲ್ಲೂ - ಅಂದರೆ, ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಹಾರಗಳಲ್ಲೂ ಪಾಲಿಸಿಕೊಂಡು ಬರಬೇಕು ಎಂಬುದನ್ನು ಸ್ವತಃ ಆಚರಣೆಯಿಂದಲೇ ತೋರಿಸಿಕೊಟ್ಟು, ಆ ಮೂಲಕವೇ ದೇಶಕ್ಕೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟರು.

ಜೈನಮತವು ಶ್ರಮಣ (ಸಂನ್ಯಾಸಿ)ರಿಗೆ ವಿಧಿಸಿರುವ ಈ ಕಟ್ಟುಪಾಡುಗಳನ್ನೇ ನೋಡಿ: ಅವರು ಅನುಸರಿಸಬೇಕಾದ ನಿಯಮಗಳು ''ಪಂಚಶೀಲ'' ಗಳೆಂದು ಪ್ರಸಿದ್ಧಿಯಾಗಿವೆ. ಅಹಿಂಸೆ, ಸತ್ಯ, ಅಸ್ತೇಯ (ಕಳುವು ಮಾಡದೇ ಇರುವುದು), ಬ್ರಹ್ಮಚರ್ಯ ಮತ್ತು ಅಪರಿಗ್ರಹ (ತನ್ನ ಅವಶ್ಯಕತೆಗಿಂತ ಹೆಚ್ಚಾಗಿ ಸ್ವೀಕರಿಸದೇ ಇರುವುದು) ಎಂಬುವೇ ಆ ಐದು ನಿಯಮಗಳು. ಇದೇ ನೀತಿ ನಿಯಮಗಳನ್ನು ಶ್ರಾವಕ (ಸಂಸಾರಿ)ರಿಗೆ, ಸ್ವಲ್ಪ ಸಡಿಲಿಸಲಾಗಿದೆ. ಬ್ರಹ್ಮಚರ್ಯದ ಬದಲು ಪಾತಿವ್ರತ್ಯ ಮತ್ತು ಪತ್ನೀ ವ್ರತತ್ವ, ಅಪರಿಗ್ರಹಕ್ಕೆ ಬದಲಾಗಿ ಅಲ್ಪದರಲ್ಲೇ ತೃಪ್ತಿ. ಬೌದ್ಧರಲ್ಲಿ ಅನೇಕರು ಮಾಂಸಾಹಾರವನ್ನು ತ್ಯಜಿಸಿಲ್ಲ; ಆದರೆ ಜೈನರಿಗೆ - ಶ್ರವಣರಿಗೂ ಶ್ರಾವಕರಿಗೂ - ಮಾಂಸಾಹಾರ ಕಟ್ಟುನಿಟ್ಟಾಗಿ ವರ್ಜ್ಯ.

ಅಹಿಂಸೆ ಎಂಬ ಪದ ನಕಾರಾತ್ಮಕವಾದರೂ ಅದರ ಅರ್ಥ ಸಕ್ರಿಯಾತ್ಮಕವಾದದ್ದು. ಹಿಂಸೆಯಿಂದ ಹಿಂಜರಿಯುವುದು ಮಾತ್ರವಲ್ಲ, ಜೀವಿಯು ನರಳುವುದನ್ನು ಕಂಡೂ ತಿಳಿದೂ ಅದಕ್ಕೆ ಸಹಾಯ ಮಾಡದಿದ್ದರೆ ಅದು ಹಿಂಸೆ ಮಾಡಿದಂತೆಯೇ ಎಂದು ಅದರ ಅಭಿಪ್ರಾಯ.




ವಿಶ್ವವನ್ನು ಸೃಷ್ಟಿಸಿದ, ಅದನ್ನು ನಿಯಮಿಸುತ್ತಿರುವ ದೇವರು ಎಂಬ ತತ್ವ ಇದೆ ಎಂಬುದನ್ನು ಜೈನಧರ್ಮ ತಾರ್ಕಿಕವಾಗಿ ನಿರಾಕರಿಸುತ್ತದೆ. ವಿಶ್ವವನ್ನು ಯಾರೂ ಸೃಷ್ಟಿಸಿಲ್ಲ. ಅದು ಇದೆ ಅಷ್ಟೆ. ಮಾನವನ ಸುಖ ದುಃಖಗಳಿಗೆ ಅವನ ಕಾರ್ಯಗಳೇ ಕಾರಣ, ಎಂದು ಜೈನಮತ ನಂಬುತ್ತದೆ.

ಜೈನ ಮತ್ತು ಬೌದ್ಧಮತಗಳೆರಡೂ ವೇದಗಳು ಅಪೌರುಷೇಯ ಎಂಬುದನ್ನು ತಿರಸ್ಕರಿಸಿದವು. ಯಜ್ಞಯಾಗಾದಿಗಳನ್ನು ಮಾಡಿದರೇನೇ ಸತ್ಫಲ ದೊರೆಯುತ್ತದೆಯೆಂಬುದನ್ನು ನಿರಾಕರಿಸಿ, ಮಾನವ ಪ್ರಯತ್ನದಿಂದಲೇ, ಅಂದರೆ ಶುದ್ಧ ಜೀವನದಿಂದಲೇ, ಶಾಂತಿಯನ್ನು ಸಾಧಿಸಬೇಕೆಂದು ಈ ಎರಡೂ ಮತಗಳೂ ಬೋಧಿಸಿವೆ. ಇಬ್ಬರ ದೃಷ್ಟಿಯಲ್ಲೂ ಅಹಿಂಸೆಯೇ ಪರಮಧರ್ಮ. ಪಂಡಿತ ಭಾಷೆಯಾದ ಸಂಸ್ಕೃತವನ್ನು ಬಿಟ್ಟು, ತಮ್ಮ ಪ್ರವಚನಗಳನ್ನು ಮಾತೃಭಾಷೆಗಳಾದ ಮತ್ತು ಜನಸಮುದಾಯಕ್ಕೆ ಅರ್ಥವಾಗುವ ಭಾಷೆಯಲ್ಲಿ - ಬುದ್ಧನು ಪಾಳಿಯಲ್ಲೂ, ಮಹಾವೀರನು ಅರ್ಧಮಾಗಧಿಯಲ್ಲೂ - ಮಾಡಿದರು. ಜಾತಿಮತ ಭೇದಗಳನ್ನು ತೊಡೆದುಹಾಕಿದರು. ಅವರ ದಾರ್ಶನಿಕ ತತ್ವಗಳು, ಬೋಧಿಸಿದ ನೀತಿ ಮಾರ್ಗಗಳು ಎರಡು ಸಾವಿರ ವರ್ಷಗಳ ಮೇಲೂ ಸಮಕಾಲೀನಕ್ಕೂ ಒಪ್ಪುವಂಥವು. ಅಲ್ಲದೆ ಕಲೆ, ಸಾಹಿತ್ಯಗಳೆರಡರಲ್ಲೂ ಉತ್ತಮೋತ್ತಮ ಕೃತಿಗಳು ಹೊರಬಂದಿವೆ. ಬಾಹುಬಲಿಯ ಭವ್ಯ ವಿಗ್ರಹ ಈ ಉನ್ನತಿಯ ಕುರುಹು ಎಂಬಂತೆ ಶ್ರವಣಬೆಳಗೊಳದಲ್ಲಿ ಇಂದ್ರಗಿರಿಯ ಮೇಲೆ ಭದ್ರವಾಗಿ ನಿಂತಿದೆ.

ಟಿ. ಎಸ್. ಸಂಜೀವರಾವ್
ಇ.ಡಬ್ಲ್ಯೂ. ಎಸ್. ೪೩೪, ಕೆ.ಎಚ್.ಬಿ. ಕಾಲೋನಿ
೨ನೇ ಹಂತ, ೪ನೇ ಮುಖ್ಯರಸ್ತೆ, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯




*(೨೦೦೧ ಮಾರ್ಚ್ ತಿಂಗಳ ಮೊದಲ ವಾರದಲ್ಲಿ ಇಬ್ಬರು ಕಾಲೇಜು ಅಧ್ಯಾಪಕರ ಪ್ರವೇಶ. ತಾವು ನಡೆಸಬೇಕೆಂದಿದ್ದ ಮುಷ್ಕರಕ್ಕೆ ಕಾರಣವಾಗಿದ್ದ ಸಮಸ್ಯೆ ಸ್ವಲ್ಪ ಮಟ್ಟಿಗೆ ಬಗೆಹರಿದಿದೆ)*

ಅಧ್ಯಾಪಕ ೧ : ಏನ್ರೀ ! ನಿಮ್ಮ ಕಾಲೇಜಿನಲ್ಲಿ ಸಂಬ್ಳ ಕೊಟ್ರಾ ? ನಮ್ಮಲ್ಲಿ ಇನ್ನೂ ಲೇಟಾಗುತ್ತಂತೆ. ಈಗಾಗ್ಲೆ ಎರಡು ತಿಂಗಳಿಂದ ಸಂಬಳ ಇಲ್ಲದೆ ಒದ್ದಾಡೋ ಹಾಗಾಗಿದೆ. ಇವ್ರು ೧೫% ಕಟ್ ಇಲ್ಲ ಅಂತ ಹೇಳಿದ ಮೇಲೆ ತಡಾ ಆಗ್ತಿರೋದು ನೋಡಿದ್ರೆ....

ಅಧ್ಯಾಪಕ ೨ : ಅಯ್ಯೋ ! ನಮ್ಮಲ್ಲೂ ಅದೇ ಗೋಳೇ. ಎಲ್ಲೋ ಕೆಲವು ಕಾಲೇಜುಗಳಿಗೆ ಕೊಟ್ರಂತೆ. ಅಷ್ಟಲ್ಲಿ ಗ್ರ್ಯಾಂಟ್ ಮುಗಿದೋಯ್ತಂತೆ. ಇನ್ನೂ ಒಂದುವಾರ ಆಗ್ಬಹುದು ಅಂತಿದ್ದಾರೆ. ಒಟ್ನಲ್ಲಿ ಈ ತಿಂಗಳ ಒಳಗೆ ಕೊಡ್ತಾರೆ ಬಿಡಿ. ತೆರಿಗೆ ಹಿಡೀಬೇಕಲ್ಲ ಅದಕ್ಕಾದ್ರೂ ಕೊಟ್ಟೇಕೊಡ್ತಾರೆ.

ಅಧ್ಯಾಪಕ ೧ : ಅದ್ಸರಿ, ಇನ್ಮೇಲೆ ವೇಕೆನ್ಸಿಗಳ್ನೆಲ್ಲಾ ತುಂಬೋದೇ ಇಲ್ಲ ಅಂತ ಹೇಳ್ಬಿಟ್ಟಿದ್ದಾರೆ ! ಹಾಗಾದ್ರೆ, ಇನ್ಮುಂದೆ ಕಾಲೇಜುಗಳಲ್ಲಿ ಪರ್ಮನೆಂಟ್ ಮೇಷ್ಟ್ರು ಅಂತ ಇರೋದೇ ಇಲ್ಲ. ಎಲ್ಲಾ ಕಾಂಟ್ರ್ಯಾಕ್ಟ್ ಮೇಷ್ಟ್ರುಗಳೇ. ಅದೇನೋ 'ನೀಡ್ ಬೇಸ್ಡ್' ಅಂತ ಮಾಡ್ತಾರಂತೆ.

ಅಧ್ಯಾಪಕ ೨ : ನಮ್ಗೂ ಹಾಗೇ ಅನ್ಸುತ್ತೆ. ಈಗಾಗ್ಲೇ ಹತ್ರತ್ರ ೧೪ ವರ್ಷದಿಂದ ಹೊಸ ಅಪಾಯಿಂಟ್‌ಮೆಂಟ್ಸ್ ಆಗಿಲ್ಲ. ಇನ್ಮುಂದೂ ಸಹಾ ಹಾಗೇ ಆದ್ರೆ - ಯಾರಾದ್ರೂ ರಿಟೈರ್ ಆದ್ರೆ ಅಥವಾ ಸತ್ರೆ - ಸರ್ಕಾರಕ್ಕೆ ಇನ್ನೂ ಸಂತೋಷ. ಫುಲ್‌ಟೈಮ್ ಅಪಾಯಿಂಟ್‌ಮೆಂಟ್ ಮಾಡೋಹಾಗಿಲ್ಲ. ಜಾಸ್ತಿ ಸಂಬಳವೂ ಕೊಡಬೇಕಾಗಿಲ್ಲ. ಸರ್ಕಾರಕ್ಕೆ ಹಣಾನೂ ಉಳೀತು. ಎಂ.ಎಲ್.ಎ.ಗಳು, ಎಂ.ಎಲ್.ಸಿ.ಗಳು ತಮ್ಮ ಸಂಬಳ ಅಲವೆನ್ಸ್ ಎಲ್ಲಾ ಹೆಚ್ಚಿಸ್ಕೋಬಹುದು.

ಅ ೧ : ಆಯ್ತು ! ಏನೇನಾಗುತ್ತೋ ನೋಡ್ತಾ ಇರೋಣ.

೨

(೨೦೦೨ ಜುಲೈ - ಆಗಸ್ಟ್ ತಿಂಗಳ ನಡುವೆ ಒಂದು ದಿನ. ಒಂದು ಖಾಸಗಿ ಕಾಲೇಜಿನ ಪ್ರಿನ್ಸಿಪಾಲರ ಕೊಠಡಿ)

ಯುವಕ ೧ : ನಮಸ್ಕಾರ ಸಾರ್. ನಾವಿಬ್ಬರೂ ಹೊಸದಾಗಿ ಪಿ.ಜಿ.ಕೋರ್ಸ್ ಮುಗ್ಸಿದೀವಿ. ನಾನು ಸದ್ಗುರುರಾಜ್ ಅಂತ ಸೋಷಿಯಾಲಜಿ ಎಂ.ಎ. ಅವರು ದರ್ಶನ್‌ಕುಮಾರ್. ಕೆಮಿಸ್ಟ್ರಿ ಎಂ.ಎಸ್ಸಿ. ನಿಮ್ಮ ಕಾಲೇಜಿನಲ್ಲಿ ಈ ಎರಡೂ ಡಿಪಾರ್ಟ್‌ಮೆಂಟ್‌ಗಳಲ್ಲಿ ಇಬ್ಬರು ಪ್ರೊಫೆಸರ್ಸ್ ರಿಟೈರ್ ಆಗಿದ್ದಾರೆ ಅಂತ ತಿಳೀತು. ಅದಕ್ಕೇ ಅಪ್ಲಿಕೇಷನ್ ಕೊಡೋಣ ಅಂತ ಬಂದಿದೀವಿ.

ಪ್ರಿನ್ಸಿಪಾಲರು : ನಾವಿನ್ನೂ ಈಗ್ಲೇ ಅಪ್ಲಿಕೇಷನ್ಸ್ ತಗೋತಿಲ್ಲ ಇವ್ರೇ. ಹೀಗೆ ಟೆಂಪರರಿಯಾಗಿ ಅಪಾಯಿಂಟ್ ಮಾಡಿಕೊಳ್ಳೋದಕ್ಕೂ ನಮಗೆ ಸರ್ಕಾರದಿಂದ ಪರ್ಮಿಷನ್ ಸಿಗಬೇಕು. ಆಮೇಲೇನೇ ಏನಿದ್ರೂನು. ಅಷ್ಟೇ ಅಲ್ದೆ, ಇನ್ನು ಮುಂದೆ 'ನೀಡ್ ಬೇಸ್ಡ್' ಅಪಾಯಿಂಟ್‌ಮೆಂಟ್ಸ್ ಅಂತ ಬೇರೆ ಹೇಳ್ತಿದ್ದಾರಲ್ಲ.

ದರ್ಶನ್ : ನೀಡ್ ಇಲ್ದೆ ಎಲ್ಹೋಗುತ್ತೆ ಸಾರ್. ಬಿ.ಎ.ನಲ್ಲಿ ಸೋಷಿಯಾಲಜಿ, ಬಿ.ಎಸ್ಸಿ.ಯಲ್ಲಿ ಕೆಮಿಸ್ಟ್ರಿ ಎಷ್ಟು ಮುಖ್ಯ ಅಲ್ವಾ ಸರ್ ? ಆ ಸಬ್ಜೆಕ್ಟ್‌ಗೆ ಲೆಕ್ಚರರ್ಸ್ ಬೇಕೇ ಬೇಕಾಗ್ತಾರಲ್ಲ. ಸದ್ಯಕ್ಕೆ ನಮ್ಮ ಅಪ್ಲಿಕೇಷನ್ಸ್ ತಗೊಳ್ಬಹುದಲ್ಲಾ !

ಪ್ರಿನ್ಸಿ: ನಮ್ಮ ಮಂತ್ರಿಗಳ ಮಾತುಗಳು ಕೇಳ್ತಿಲ್ವೇನ್ರಿ ನೀವು ? ಈ ಬಿ.ಎ., ಬಿ.ಎಸ್ಸಿ.ಗಳು ಕೆಲಸಕ್ಕೆ ಬಾರದ ಕೋರ್ಸುಗಳು ಅಂತ ಅವರು ಮತ್ತೆ ಮತ್ತೆ ಹೇಳ್ತಾ ಇದಾರೆ. ಜತೆಗೆ ಇವರೆಲ್ಲಾ ದಂಡಪಿಂಡಗಳು ಅಂತ ಟಿ.ವಿ.ನವ್ರು ಸಹ ಬಿರುದು ಕೊಟ್ಬಿಟ್ಟಿದ್ದಾರೆ. ಇನ್ಮುಂದೆ ಈ ಸಬ್ಜೆಕ್ಟ್ಸ್‌ಗೆ ಯಾರು ಬರ್ತಾರೆ ಹೇಳಿ. ಎಲ್ಲಾ ಐ.ಟಿ.ಮಯ. ನೀವೂ ಯಾವ್ದಾದ್ರೂ, ಜಾವಾನೋ, ಮತ್ತೊಂದೋ ಕಂಪ್ಯೂಟರ್ ಕೋರ್ಸ್ ಮಾಡಿಕೊಳ್ಳಿ. ಕೆಲ್ಸ ಸಿಗ್ಬಹುದು. ಕಾಲೇಜು ಮೇಷ್ಟ್ರ ಕೆಲಸ ನೆಚ್ಚಿಕೊಂಡಿರಬೇಡಿ.

ಸದ್ಗುರು : ಹಾಗಾದ್ರೆ ಈಗ ಅಪ್ಲಿಕೇಷನ್ಸ್ ತಗೊಳ್ಳೋದಿಲ್ವಾ ಸರ್ ?

ಪ್ರಿನ್ಸಿ : ಇಲ್ಲ, ನಮಗೆ ಮೇಷ್ಟ್ರುಗಳು ಬೇಕಾದ್ರೆ, ಸರ್ಕಾರ ಸರಿ ಅಂತ ಹೇಳಿದ್ರೆ, ಪೇಪರ್‌ನಲ್ಲಿ ಹಾಕಿಸ್ತೇವೆ. ಆಗ ಬನ್ನಿ. ಅಲ್ಲೀವರೆಗೆ ನೀವು ಎಲ್ಲಿ ಹೋದ್ರೂ ಇಷ್ಟೇ.

ಇಬ್ಬರು : ಸರಿ ಸರ್. ಥ್ಯಾಂಕ್ಸ್, ಬರ್ತೀವಿ. ನಮಸ್ಕಾರ.

೩

(ಕೆಲ ಕಾಲದ ನಂತರ ಅವರೇ ಇಬ್ಬರು ಯುವಕರು. ಮತ್ತೆ ಪ್ರವೇಶ)

ಸದ್ಗುರುರಾಜ್ : ಲೋ ! ಏನೋ ಇದು. ನಾವಿಬ್ರು ಪಿ.ಜಿ. ಮುಗಿಸಿ ಇಷ್ಟು ವರ್ಷ ಆದ್ರೂ ಎಲ್ಲೂ ಸರಿಯಾದ ಕೆಲಸ ಸಿಗೋ ಹಂಗೇ ಇಲ್ವಲ್ಲೋ. ಅಲ್ಲೀ ಇಲ್ಲೀ ಬರೀ ಪಾರ್ಟ್ ಟೈಮ್ ಎಷ್ಟೂ ಅಂತ ಮಾಡೋದು ? ಸುಮ್ನೆ ವೇದಿಕ್ ಅಸ್ಟ್ರಾಲಜಿ ಡಿಗ್ರಿ ಪಡೆಯಬೇಕಿತ್ತೋ ಏನೋ !

ದರ್ಶನ್ ಕುಮಾರ್ : ಇನ್ಮೇಲೆ ಅಷ್ಟೇ ಅಂತ ಕಾಣತ್ತೆ. ೨೦೦೧ರಲ್ಲೇ ಹೇಳಿದ್ರಲ್ಲಾ - ಆಗಿನ ಸರ್ಕಾರ. ಇನ್ಮುಂದೆ ಮೇಷ್ಟ್ರುಗಳ ರಿಕ್ರೂಟ್‌ಮೆಂಟ್ ಇಲ್ಲ ಅಂತ. ಈಗಿನ ಸರ್ಕಾರಾನೂ ಅದೇ ಪಾಲಿಸೀನೇ ಕಂಟಿನ್ಯೂ ಮಾಡ್ಕೊಂಡು ಹೋಗ್ತಿದೆ. ಎಲ್ಲಿ ಹೋದ್ರೂ ವರ್ಕ್‌ಲೋಡ್ ಇದೆ, ಆದ್ರೆ ಅದು ವೇಕೆನ್ಸಿ ಅಲ್ಲ ಅಂತಿದಾರೆ. ಅದೂ ಆ ವರ್ಕ್‌ಲೋಡೋ ! ತುಂಬಾ ಕಡಿಮೆ.

ಸದ್ಗುರು : ನನ್ಗೊಂದು ಐಡಿಯಾ ಹೊಳಿತಾ ಇದೆ. ಸುಮ್ನೆ ಈ ಕೆಲ್ಸ ಹುಡಿಕ್ಕೊಂಡು ಅಲ್ಲೀ, ಇಲ್ಲೀ ಅಲಿಯೋದರ ಬದಲು, ನಾವೇ ಯಾಕೆ ಬೇರೆಯವರಿಗೆ ಕೆಲಸ ತೋರಿಸಬಾರ್ದು ? ನಮ್ಮಥರಾ ಕೆಲಸ ಹುಡುಕ್ತಿರೋರು ಬೇಕಾದಷ್ಟು ಜನ ಇದ್ದಾರೆ.

ದರ್ಶನ್ : ನಮ್ಗೇ ಕೆಲಸ ಇಲ್ದೆ ಇರೋವಾಗ ಬೇರೆಯವರಿಗೆಲ್ಲಿ ಕೆಲಸ ತೋರಿಸ್ತೀಯೋ? ನಿಂದೆಲ್ಲೋ ವಿಚಿತ್ರ ಐಡಿಯಾ !

ಸದ್ಗುರು : ಇಲ್ಲಿ ಕೇಳೋ ! ಈ ಸರ್ಕಾರದ ನೀಡ್‌ಬೇಸ್ಡ್ ಅಪಾಯಿಂಟ್‌ಮೆಂಟ್ಸ್ ಮಾಡೋ ಪಾಲಿಸಿ ಇದೆಯಲ್ಲಾ, ಅದನ್ನೇ ಬಂಡವಾಳ ಮಾಡಿಕೊಳ್ಳೋಣ. ನಮ್ಮ ಕೆಲಸಕ್ಕೆ ಜಾಸ್ತಿ ಏನೂ ಬೇಕಾಗಿಲ್ಲ. ಒಂದು ಆಫೀಸ್ ರೂಮು, ಟೆಲಿಫೋನ್. ಮುಂದೆ ನೋಡ್ಕೊಳ್ಳೋಣ-ಮೊಬೈಲು, ಇ-ಮೈಲು, ಇಂಥಾ ವೆಲ್ಲ. ಸದ್ಯಕ್ಕೆ ಎಲ್ಲಾದ್ರೂ ಒಂದು ಫೋನ್ ಸಂಪಾದಿಸಬೇಕು.

ಮೊದಲು ಇಲ್ಲಿರೋ ಕಾಲೇಜುಗಳ ಲಿಸ್ಟ್ ಮಾಡೋಣ. ಅಲ್ಲೆಲ್ಲಾ ಯಾವ್ಯಾವ ಡಿಪಾರ್ಟ್‌ಮೆಂಟ್‌ನಲ್ಲಿ ವೇಕೆನ್ಸಿಗಳಿವೆ ಅನ್ನೋದು ತಿಳ್ಕೊಳ್ಳೋಣ. ಇದಕ್ಕೆಲ್ಲಾ ಸ್ವಲ್ಪ ಓಡಾಡ್ಬೇಕಷ್ಟೇ. ಆಮೇಲೆ ಪೇಪರ್‌ನಲ್ಲಿ ಒಂದು ಜಾಹೀರಾತು ಕೊಡೋಣ. ಲೆಕ್ಚರರ್ಸ್ ಬೇಕಾಗಿದ್ದಾರೆ : ಅವರ್ಲಿ ಬೇಸಿಸ್ ಮೇಲೆ ಕೆಲಸ

**ನಗರಗೆರೆ ರಮೇಶ್**

ಮಾಡೋದಕ್ಕೆ ಅಂತ. ನಮಗೇನೂ ಪಿಎಚ್.ಡಿ.ಗಳು, ನೆಟ್ ಪಾಸಾಗಿರೋರು ಬೇಕಾಗಿಲ್ಲ. ಪಿ.ಜಿ. ಆಗಿದ್ರೆ ಸಾಕು. ಅವರು ನಾವು ಈಗ ಅಲೀತಾ ಇದೀವಲ್ಲಾ ಆ ಕಾಲೇಜು, ಈ ಕಾಲೇಜು ಅಂತ, ಹಂಗೆಲ್ಲಾ ಅಲೀಬೇಕಾಗಿಲ್ಲ. ನಮ್ಮ ಹತ್ರ ರಿಜಿಸ್ಟರ್ ಮಾಡ್ಸಿದ್ರೆ ಸಾಕು. ಯಾವತ್ತು, ಯಾವ ಪೀರಿಯಡ್‌ನಲ್ಲಿ, ಯಾವ ಸಬ್ಜೆಕ್ಟ್‌ಗೆ ಮೇಷ್ಟ್ರು ಬೇಕು ಅನ್ನೋ ವಿವರ ನಾವು ಪ್ರಿನ್ಸಿಪಾಲರುಗಳಿಂದ ತಿಳ್ಕೊಳ್ಳೋದು, ಅಲ್ಲಿಗೆ ಇವರನ್ನ ಕಳಿಸೋದು. ಸೆಕ್ಯುರಿಟಿಗೆ ಅಂತ ಜನಾನ ಕಳಿಸ್ತಾರಲ್ಲ ಹಾಗೆ.

ದರ್ಶನ್ : ಏನೋ ನೀನು ಹೇಳ್ತಿರೋದು ! ಇದೇನು ಸಿನಿಮಾಗಳಿಗೆ ಜೂನಿಯರ್ ಆರ್ಟಿಸ್ಟ್‌ಗಳನ್ನ ಕಳಿಸೋದೋ ಅಥವಾ ರಿಯಲ್ ಎಸ್ಟೇಟೋ ಅಂದ್ಕೊಂಡಿದ್ದೀಯೇನೋ ! ಇದೆಲ್ಲಾ ನಡಿಯತ್ತಾ ?

ಸದ್ಗುರು : ಯಾಕೋ ನಡಿಯಲ್ಲ ? ಇಂಥಾ ಸಿಸ್ಟಮ್ ಮಾಡಿದ್ರೆ ಮೇಷ್ಟ್ರುಗಳಿಗೆ ಪರ್ಮನೆಂಟ್ ಕೆಲಸ ಕೊಡೋದೇ ಬೇಕಾಗಿಲ್ವಲ್ಲ ! ನಾವು ಸರ್ಕಾರಕ್ಕೆ, ಪ್ರೈವೇಟ್ ಮೇನೇಜ್‌ಮೆಂಟುಗಳಿಗೆ ಹಣ ಉಳಿಸ್ತೇವೆ. ಅವರಿಗೆ ಬೇಕಾದ ಕೆಲವು ಸಬ್ಜೆಕ್ಟ್ಸ್‌ಗೆ ಪರ್ಮನೆಂಟ್ ಆಗಿ ಅಪಾಯಿಂಟ್ ಮಾಡಿಕೊಂಡು ಮಿಕ್ಕ ಸಬ್ಜೆಕ್ಟ್ಸ್‌ಗೆಲ್ಲಾ ಹೀಗೆ ಮಾಡಬಹುದು.

ದರ್ಶನ್ : ಇಂಥಾ ಉದ್ಯೋಗ ಮಾಡೋಕೆ ಯಾರೋ ಬರ್ತಾರೆ ?

ಸದ್ಗುರು : ಯಾಕೆ ಬರೋದಿಲ್ಲಾ ? ಒಂದು ಸಲ ಪೇಪರ್‌ನಲ್ಲಿ ಹಾಕಿಸಿ ನೋಡು ಎಷ್ಟು ಅಪ್ಲಿಕೇಷನ್ಸ್ ಬರುತ್ತೆ ಅಂತ. ಬೇರೆ ಎಲ್ಲಾ ಕಡೆ ಹೊಸ ರಿಕ್ರೂಟ್‌ಮೆಂಟ್ಸ್ ಇಲ್ಲ. ಸ್ವಲ್ಪ ಜನ ಪಿ.ಜಿ. ಮಾಡಿರೋರು ಇದಾರೆ. ಬ್ಯಾಂಕ್‌ಗಳಲ್ಲಿ ಇರೋರನ್ನೇ ವಿ.ಆರ್.ಎಸ್. ಅಂತ ಹೇಳಿ ಮನೆಗೆ ಕಳಿಸ್ತಿದ್ದಾರೆ. ಬಿ.ಎ., ಬಿ.ಎಸ್ಸಿ, ಬಿ.ಕಾಂ.ಗಳಿಗೆ ಸೇರ್ತಿರೋರು ಕಡಿಮೆ. ಅವರಿಗೆ ಈಥರಾ ಮೇಷ್ಟ್ರುಗಳು ಸಾಕು. ನನ್ನ ಈ ಪ್ಲಾನು ಎಷ್ಟು ದಿನ ನಡೆಯತ್ತೋ ಗೊತ್ತಿಲ್ಲ. ಅಷ್ಟರಲ್ಲಿ ಸ್ವಲ್ಪ ದುಡ್ಡು ಮಾಡಿಕೊಳ್ಳೋಣ. ನಾಳೆ ಹೊತ್ತಿಗೆ ಒಂದು ಒಳ್ಳೆ ಹೆಸರು ಹುಡುಕಿಡ್ತೀನಿ ನಮ್ಮ ಕಂಪನಿಗೆ.

೪

*(ಒಂದು ಬೋರ್ಡು : 'ಸದ್ಗುರುದರ್ಶನ್'. ಅದರ ಕೆಳಗೆ ಒಕ್ಕಣೆ : ಇಲ್ಲಿ ಎಲ್ಲ ವಿಷಯಗಳಿಗೂ ಯಾವ ಸಮಯದಲ್ಲಿ ಯಾದರೂ ಪಾಠ ಹೇಳಲು ನುರಿತ ಅಧ್ಯಾಪಕರು ಸಿಗುತ್ತಾರೆ. ಸಂಪರ್ಕಿಸಿ :*

*ಕಛೇರಿ ಸಮಯ : ಬೆಳಿಗ್ಗೆ ೬ ರಿಂದ ಸಂಜೆ ೬ ರವರೆಗೆ*

*ನಿರ್ದೇಶಕರು : ಶ್ರೀ ಸದ್ಗುರುರಾಜ್ ಎಂ.ಎ., ಎಂ. ಫಿಲ್*

*ಡಾ|| ದರ್ಶನ್‌ಕುಮಾರ್ ಎಂ.ಎಸ್ಸಿ., ಪಿಎಚ್.ಡಿ, (ರಾಜ್ಯ ಪ್ರಶಸ್ತಿ ವಿಜೇತರು!)*

*ಒಂದು ಕಛೇರಿಗೆ ಬೇಕಾದ ಎಲ್ಲಾ ಪರಿಕರಗಳು - ಇಬ್ಬರು ನಿರ್ದೇಶಕರು, ಸ್ವಲ್ಪ ದೂರದಲ್ಲಿ ಒಬ್ಬ ಸಹಾಯಕ. ಟೆಲಿಫೋನ್ ಗಂಟೆ ಕೇಳಿಸುತ್ತೆ.)*

ರಿಸೆಪ್ಷನಿಸ್ಟ್ : ಹಲೋ ! ಸದ್ಗುರುದರ್ಶನ್ !!

ಆ ಕಡೆಯಿಂದ : ನೋಡಿ, ನಾನು ಇಂಟರ್ನೇಷನಲ್ ಕಾಲೇಜಿನಿಂದ ಪ್ರಿನ್ಸಿಪಾಲ್ ಮಾತಾಡ್ತಿರೋದು. ಸದ್ಗುರು ರಾಜ್ ಅವರು ಇದಾರಾ ?

ರಿಸೆ : ಇದಾರೆ ಸರ್. ತಮಗೇನ್ಬೇಕಾಗಿತ್ತು ?

ಆಕಡೆ : ಏನೂ ಇಲ್ಲ. ನಮ್ಮಲ್ಲಿ ನಾಳೆ ಬೆಳಗ್ಗೆ ೧೦.೩೦ಕ್ಕೆ ಸೆಕೆಂಡ್ ಬಿ.ಎ. ಕರ್ನಾಟಕ ಹಿಸ್ಟರಿಯಲ್ಲಿ ವಿಜಯನಗರ ಎಂಪೈರ್ ಬಗ್ಗೆ ಪಾಠ ಮಾಡೋಕೆ ಒಂದು ಹ್ಯಾಂಡ್ ಬೇಕು. ಕಳ್ಸಿಕೊಡ್ತೀರಾ ?

ರಿಸೆ : ಆಗ಼್್ಲಿ ಸರ್. ನೀವೇನೂ ಚಿಂತೆಮಾಡಬೇಡಿ. ನಾಳೆ ಬೆಳಿಗ್ಗೆ ೧೦.೨೫ಕ್ಕೆ ಸರಿಯಾಗಿ ಒಬ್ಬ ಮೇಸ್ಟ್ರು ಬಂದು ನಿಮಗೆ ರಿಪೋರ್ಟ್ ಮಾಡಿಕೊಳ್ತಾರೆ. ಆಗ್ಬಹುದಾ ?

ಆಕಡೆ : ಥ್ಯಾಂಕ್ಯೂ

ರಿಸೆ : ವೆಲ್‌ಕಮ್ ಸರ್.

ಸದ್ಗುರು : ಯಾವ ಕಾಲೇಜಿನವರು ?

ರಿಸೆ : ಅದೇ ಸರ್. ಇಂಟರ್ನೇಷನಲ್ ಕಾಲೇಜು. ನಾಳೆ ಬೆಳಿಗ್ಗೆ ೧೦.೩೦ಕ್ಕೆ ಸೆಕೆಂಡ್ ಬಿ.ಎ.ಗೆ ವಿಜಯನಗರ ಎಂಪೈರ್ ಪಾಠ ಮಾಡೋಕೆ ಒಬ್ರು ಬೇಕಂತೆ.

ದರ್ಶನ್ : ಇವತ್ತು ಮಧ್ಯಾಹ್ನ ಮೂರೂವರೆಗೆ ಆಕ್ಸ್‌ಬ್ರಿಡ್ಜ್ ಕಾಲೇಜಿಗೆ ಫಸ್ಟ್ ಬಿ.ಎ.ಗೆ ಎಕನಾಮಿಕ್ಸ್ ಮೇಷ್ಟ್ರು ಬೇಕು ಅಂತ ಕೇಳಿದ್ರಲ್ಲಾ ಅದು ಅರೇಂಜ್ ಆಯ್ತಾ ?

ಸದ್ಗುರು : ಓ ರೆಡಿ ! ೨ ಗಂಟೆ ಇಂದ ೩ ಗಂಟೆವರೆಗೆ ಅಲ್ಲೇ ಲಾಸ್ಟ್ ಹೊರೈಜನ್ ಕಾಲೇಜಿನಲ್ಲಿ ಒಂದು ಕ್ಲಾಸ್ ಮುಗಿಸಿಕೊಂಡು ಒಬ್ರು ಅಲ್ಲಿಂದ ಆಕ್ಸ್‌ಬ್ರಿಡ್ಜ್‌ಗೆ ಹೋಗ್ತಾರೆ. ಅವರಿಗೆ ಆಗ಼್್ಲೇ ಹೇಳಿದೇನೆ.

ದರ್ಶನ್ : ಹಾಗಾದ್ರೆ ಇವತ್ತು ಅದೇ ಕೊನೇ ಕ್ಲಾಸೂ ಅನ್ನು. ಇವತ್ತು ಒಟ್ಟು ಎಷ್ಟು ಜನ ಮೇಷ್ಟ್ರುಗಳನ್ನ ಕಳಿಸಿದ ಹಾಗಾಯ್ತು ?

ರಿಸೆ : (ಒಂದು ಪುಸ್ತಕ ತೆಗೆದುನೋಡಿ) ಇವತ್ತು ಒಟ್ಟು ಇಪ್ಪತ್ತು ಜನ, ಸರ್.

ದರ್ಶನ್ : ಹಾಗಾದ್ರೆ ೨೦ x ೩೦೦ = ೬೦೦೦ ರೂ. ಅಂತ ಆಯ್ತು. ಯಾಕೆ, ಹೋದವಾರ ಇದೇ ದಿನದಲ್ಲಿ ೯೦೦೦ ಕಲೆಕ್ಟ್ ಆಗಿತ್ತಲ್ರೀ. ಯಾಕೆ ಹೀಗೆ ಡಲ್ ಆಗ್ತಾ ಇದೆ ಕಲೆಕ್ಷನ್ನು ?

ಸದ್ಗುರು : ನಾವು ಈ ಫೀಲ್ಡ್‌ಗೆ ಬಂದು ಎರಡು ವರ್ಷ ಆಯ್ತಲ್ಲೋ ! ಇದರಲ್ಲಿ ದುಡ್ಡಿದೆ ಅನ್ನೋದು ಎಲ್ಲರಿಗೂ ಗೊತ್ತಾಗೋಯ್ತು. ಆಗ಼್್ಲೇ ನಮ್ಮ ಏರಿಯಾದಲ್ಲಿ ಐದು ನಮ್ಮಂಥ ಕಂಪನಿಗಳು ಹುಟ್ಕೊಂಡಿವೆ. ಅದಕ್ಕೇ ಈಗ ನಮಗೆ ಮೇಷ್ಟ್ರುಗಳ ಸಪ್ಲೈ ಸ್ವಲ್ಪ ಕಡಿಮೆ ಆಗ್ತಾ ಇದೆ.

ರಿಸೆ : ನಿನ್ನೇ ಆ ಇಂಗ್ಲಿಷ್ ಮೇಸ್ಟ್ರು ಬಂದು 'ಗುರು-ಶಿಷ್ಯ ಸಂಗಮ'ದವರು ಗಂಟೆಗೆ ೨೫೦ ಕೊಡ್ತಿದ್ದಾರೆ. ನೀವು ಬರೀ ೧೫೦ ಕೊಟ್ರೆ ಬರೋದು ಕಷ್ಟ ಆಗುತ್ತೆ ಅಂತ ಹೇಳೋದ್ರು. ಇವತ್ತು ಬರ್ತಾರೆ ಮತ್ತೆ. ಏನು ಹೇಳ್ಲಿ ಅವರಿಗೆ ?

ಸದ್ಗುರು : ಇದು ಒಳ್ಳೇ ತಾಪತ್ರಯ ಆಯ್ತಲ್ಲ ! ನಮ್ಮ ಕಂಪನಿ ಒಂದೇ ಇದ್ದಾಗ ನಾವೆಷ್ಟು ಕೊಟ್ರೆ ಅಷ್ಟೇ ಇಸ್ಕೊಂಡ್ ಹೋಗ್ತಿದ್ರು. ಈಗ ನೋಡಿ ಬೇರೆಯವರು ಸ್ವಲ್ಪ ಜಾಸ್ತಿ ಕೊಡ್ತಾರೆ ಅಂದಾಕ್ಷಣ ಇವರಿಗೂ ತಲೆ ತಿರುಗ್ತಾ ಇದೆ. ಆಯ್ತು. ಅವರಿಗೆ ೨೫೦ ಕೊಡ್ತೀವಿ ಅಂತ ಹೇಳ್ರಿ. ಸದ್ಯಕ್ಕೆ ಈ ವಿಷಯ ಬೇರೆಯವರಿಗೆ ತಿಳಿಯೋದು ಬೇಡ. ಸಾಧ್ಯವಾದಷ್ಟು ದಿನ ತಳ್ಳೋಣ.

ದರ್ಶನ್ : ಅದೇ ಕಣಯ್ಯಾ ! ಕಾಂಪಿಟೇಷನ್‌ನಲ್ಲಿರೋ ಮಜಾ ! ಮೊದಲು ನಾವು ಮಾತ್ರ ಇದ್ವಿ. ಆಗ ನಮ್ದೇ ದರ್ಬಾರು. ಒಂಥರಾ ಮೊನಾಪಲಿ. ನಾವು ಕೊಟ್ಟಷ್ಟು. ಆ ಮೇಷ್ಟ್ರುಗಳು ಇಸ್ಕೊಂಡಷ್ಟು. ಈಗ ನೋಡು. ಈ ಕಾಲೇಜಿನೋರು ಕಡಿಮೆ ರೇಟು ಕೊಡ್ತೀವಿ ಅಂತಾರೆ. ಮೇಷ್ಟ್ರುಗಳು ಜಾಸ್ತಿ ಕೇಳ್ತಿದ್ದಾರೆ. ಅದ್ರಲ್ಲೂ ಆ ಕಾಲೇಜುಗಳಿಗೆ ಒಳ್ಳೇ ಮೇಷ್ಟ್ರು ಬೇಕಂತೆ.

ಸದ್ಗುರು : 'ಒಳ್ಳೆ' ಅಂತ ಅನ್ನಿಸ್ಕೊಳ್ಳೋರು ಈಗ ಯಾರು ಸಿಕ್ತಾರೆ ? ಅಂಥವರು ಈಗ ಮೇಷ್ಟ್ರು ಕೆಲಸಕ್ಕೆ ಯಾಕ್ಬರ್ತಾರೆ ? ಎಂ.ಎ., ಎಂ.ಎಸ್ಸಿ., ಮಾಡೋರೇ ಕಡಿಮೆ ಆಗಿದಾರೆ. ಅದರಲ್ಲಿ ಒಳ್ಳೆಯವರನ್ನ ಎಲ್ಲಿ ಹುಡುಕೋದು ? ಎಲ್ಲೋ ಕೆಲವು ಸಬ್ಜೆಕ್ಟ್ಸ್‌ಗೆ ಬಿಟ್ರೆ, ಬೇರೆ ಕಡೆ ವರ್ಷಪೂರ್ತಿ ಕೆಲಸಾನೂ ಗ್ಯಾರಂಟಿ ಇಲ್ದೇ ಇದ್ದಾಗ ಯಾರು ಬರ್ತಾರೆ ಇದಕ್ಕೆ ?

ದರ್ಶನ್ : ಏನೋ, ನಮಗೆ ಹೋದ್ಸಲ ರಾಜ್ಯ ಪ್ರಶಸ್ತಿ ಬಂದಿದ್ರಿಂದ ಇನ್ನೂ ಸ್ವಲ್ಪ ಡಿಮಾಂಡ್ ಇದೆ. ಇಲ್ದೇ ಇದ್ರೆ, ಇಷ್ಟೊತ್ತಿಗೆ ನಾವು ಬೇರೆ ಯಾವುದಾದ್ರೂ ಕೆಲಸ ನೋಡ್ಕೋ ಬೇಕಾಗಿತ್ತು.

ಸದ್ಗುರು : ನಮ್ಮಿಬ್ರುಗೂ ಇಷ್ಟು ಚಿಕ್ಕ ವಯಸ್ಸಿನಲ್ಲೇ ಹೆಸರಾಂತ ಶಿಕ್ಷಣ ತಜ್ಞರು ಅಂತ ಹೆಸರು ಬಂದಿರೋದು ಬಹಳ ಜನಕ್ಕೆ ಕಣ್ಣು ಕೆಂಪಗಾಗಿದೆ. ಆ 'ಗುರು-ಶಿಷ್ಯ ಸಂಗಮ'ದವನಂತೂ ಏನಾದ್ರೂ ಮಾಡಿ ಈ ವರ್ಷದ ಪ್ರಶಸ್ತಿಯನ್ನು ತಾನೇ ಗಿಟ್ಟಿಸ್ಕೋಬೇಕು ಅಂತ ತಿಪ್ಪರಲಾಗ ಹಾಕ್ತಿದಾನೆ. ಅದಕ್ಕೇ ಮೇಷ್ಟ್ರುಗಳಿಗೆ ನಮಗಿಂತ್ಲೂ ಜಾಸ್ತಿ ಹಣ ಕೊಟ್ರೆ ಅವರ ಹತ್ರಾನೇ ಹೆಚ್ಚು ಜನ ಹೋಗ್ತಾರೆ. ಆಗ ಅವನೇ ಎಲ್ಲರಿಗಿಂತ್ಲೂ ಜಾಸ್ತಿ ಮೇಷ್ಟ್ರುಗಳ್ನ ಸಪ್ಲೈ ಮಾಡಿದ ಹಾಗಾಗುತ್ತೆ ಅಂತ ಅವನ ಪ್ಲ್ಯಾನು.

ದರ್ಶನ್ : ಅದೂ ಸರಿಯೆ ! ಹೋದ್ಸಲ ನಮಗೆ ಅದಕ್ಕೇ ತಾನೇ ಅವಾರ್ಡ್ ಬಂದಿದ್ದು - 'ಶಿಕ್ಷಣ ರತ್ನದ್ವಯ'ಅಂತ.

ಸದ್ಗುರು : ಏನಾದ್ರೂ ಮಾಡಿ ಈ ವರ್ಷ ಅವನಿಗೆ ಈ ಪ್ರಶಸ್ತಿ ಸಿಗದ ಹಾಗೆ ಮಾಡ್ಬೇಕು. ಹೀಗೇ ಬಿಟ್ರೆ ಅವನು ಬರೋ ವರ್ಷ ತಾನೂ ಒಬ್ಬ ಅವಾರ್ಡ್ ವಿನ್ನರ್ ಅಂತ ಹೇಳ್ಕೊಂಡು ನಮ್ಮನ್ನ ಮುಳುಗಿಸಿಬಿಡ್ತಾನೆ.

ದರ್ಶನ್ : ಅದ್ಹೇಗೋ ಆಗತ್ತೆ ? ಈಗಾಗ್ಲೇ ಫೆಬ್ರವರಿ ಬಂತು. ಎಲ್ಲಾ ಕಡೇನೂ ಕ್ಲಾಸುಗಳೆಲ್ಲಾ ಮುಗೀತಾ ಇವೆ. ಅವನು ದುಡ್ಡು ಜಾಸ್ತಿ ಕೊಡ್ತೀನಿ ಅಂತ ಹೇಳಿ ಈಗಾಗ್ಲೇ ಜಾಸ್ತಿ ಜನ ಮೇಷ್ಟ್ರುಗಳನ್ನ ಬುಕ್ ಮಾಡಿಕೊಂಡ್ಬಿಟ್ಟಿದ್ದಾನಂತೆ.

ಸದ್ಗುರು : ನೋಡ್ತಾ ಇರು. ಏನೋ ಮಾಡ್ತೀನಿ.

೫

*(ಅದೇ ದೃಶ್ಯ ಕೆಲವು ತಿಂಗಳುಗಳ ನಂತರ)*

ರಿಸೆಪ್ಷನಿಸ್ಟ್ : ಸರ್ ! ಇವತ್ತು ಪೇಪರ್ ನೋಡಿದ್ರಾ ? ಈ ವರ್ಷದ 'ಶಿಕ್ಷಣರತ್ನ' ಪ್ರಶಸ್ತಿ ಆ 'ಗುರುಸಾಗರ'ದವರಿಗೆ ಬಂದಿದೆ.

ದರ್ಶನ್ : ಏನೋ ಇದು ಆ ಗುರುಶಿಷ್ಯ ಸಂಗಮ ಎಲ್ಹೋದ್ನೋ ? ಏನ್ ಮಾಡ್ದೆ ?

ಸದ್ಗುರು : ನಾನಾಗ್ಲೇ ಹೇಳಿರ್ಲಿಲ್ವಾ ? ಏನೋ ಮಾಡಿದೆ. ನನಗೆ ಗೊತ್ತಿರೋರು ಆ ಅವಾರ್ಡ್ ಕಮಿಟಿನಲ್ಲಿದ್ರು. ಮತ್ತೆ ನಮಗೇ ಈ ಪ್ರಶಸ್ತಿ ತರಿಸಿಕೊಂಡ್ರೆ ಎಲ್ಲರಿಗೂ ಅನುಮಾನ ಬರತ್ತೆ. ಆದ್ರೆ ಆ 'ಸಂಗಮ'ದವನಿಗೆ ಬರಬಾರ್ದು. ಅವನಿಗಿಂತಲೂ ಈ 'ಸಾಗರ'ದವನು ಕಡಿಮೆ ಅಪಾಯಕಾರಿ ನಮಗೆ. ಅದಕ್ಕೇ ಅಲ್ಲಿ ಆಫೀಸಿನಲ್ಲಿ ಲೆಕ್ಕಾಚಾರ ಎಲ್ಲಾ ತಲೆ ಕೆಳಗು ಮಾಡ್ಸಿ 'ಸಾಗರ'ಕ್ಕೆ ಅವಾರ್ಡ್ ಬರೋ ಹಂಗೆ ಮಾಡ್ದೆ.

ಇದೆಲ್ಲಾ ಹಾಳಾಗ್ಹೋಗ್ಲಿ. ಇನ್ಮೇಲೆ ಈ ಅವಾರ್ಡೂ ಇಲ್ಲ; ನಮ್ಮ ಕಂಪನೀನೂ ಇಲ್ಲ. ನಮ್ಮ ಹೊಟ್ಟೇಗೆ ಮಣ್ಣು ಬೀಳೋ ಥರ ಇದೆ.

*(೫೬ನೇ ಪುಟಕ್ಕೆ)*

# ಬಸವಕ್ರಾಂತಿಯ ಸೋಲು ಗೆಲುವು

## ಕೆಲವು ಟಿಪ್ಪಣಿಗಳು

*'ಹೊಸತು'ವಿನ ಅಕ್ಟೋಬರ್ ೨೦೦೦ದ ಸಂಚಿಕೆಯಲ್ಲಿ ಡಾ|| ಎಚ್. ಎಸ್. ಮಂಜುರಾಜ್ ಅವರು ಬಸವಣ್ಣನವರ ಧ್ಯೇಯ-ಧೋರಣೆಗಳನ್ನು ಮತ್ತು ಮಹತ್ವಪೂರ್ಣ ಸಾಧನೆಗಳನ್ನು "ಬಸವಕ್ರಾಂತಿಯ ಸೋಲು ಗೆಲುವು" ಎಂಬ ಲೇಖನದಲ್ಲಿ ಪ್ರತಿಪಾದಿಸಿದ್ದರು. ಅವರ ವಿಚಾರಗಳನ್ನು ವಿಶ್ಲೇಷಿಸಿ ತಮ್ಮ ನಿಲುವನ್ನು ಪ್ರಕಟಿಸುವುದರ ಮೂಲಕ ಶ್ರೀ. ರಾಜಶೇಖರ ರಾಮಣ್ಣ ಬಿಲ್ವಪತ್ರಿ ಅವರು ಚರ್ಚೆಯನ್ನು ಮುಂದುವರಿಸಿದ್ದಾರೆ.*

ರಾಜಶೇಖರ ರಾಮಣ್ಣ ಬಿಲ್ವಪತ್ರಿ

**ಬ**ಸವಣ್ಣನವರ ಸ್ಪಷ್ಟ ವಿಚಾರ, ಧೋರಣೆಗಳಲ್ಲೂ ಇಲ್ಲದ ದ್ವಂದ್ವ, ವೈರುಧ್ಯಗಳನ್ನು ಕಾಣುವ ಹುಮ್ಮಸ್ಸು ತೋರಿಸಿರುವ ಡಾ|| ಮಂಜುರಾಜ್ ತಾವು ಹೇಳುವ ಯಾವೊಂದು ಹೇಳಿಕೆಯ ಅಥವಾ ಉದಾಹರಿಸುವ ವಚನದ ವಿಶ್ಲೇಷಣೆಗೂ ತೊಡಗುವುದಿಲ್ಲ. ಬಸವಣ್ಣನವರ ಸಮಗ್ರ ವ್ಯಕ್ತಿತ್ವದ ಪರಿಪೂರ್ಣ ಸೌಂದರ್ಯದಲ್ಲಿ ಪ್ರಯತ್ನಪೂರ್ವಕವಾಗಿ ಕುರೂಪವನ್ನು ಹುಡುಕುವ ಸಾಹಸ, ಮೊಸರಿನಲ್ಲಿ ಕಲ್ಲು ಹುಡುಕುವ ಜಾಣ್ಮೆಯೆನ್ನಬಹುದೇನೋ !

'ಲಾಂಛನಕ್ಕೆ ಶರಣೆಂಬೆ' ಎನ್ನುತ್ತ ಇಷ್ಟಲಿಂಗ ಕಟ್ಟಿಕೊಂಡವರು ಮಾತ್ರ ಭಕ್ತರು. ಉಳಿದವರು ಭವಿಗಳು ಎಂದು ದೂರುವ 'ಛಲ ಬೇಕು ಶರಣಂಗೆ ಪರದೈವವನೊಲ್ಲೆನೆಂಬ' ಸಂಕುಚಿತ ಆಲೋಚನೆಗಳನ್ನು ಏನೆಂದು ಕರೆಯುವುದು ಎಂದು ಪ್ರಶ್ನಿಸುತ್ತಾರೆ ಮಂಜುರಾಜ್ (ಪು. ೨೩). ಆದರೆ ಇಷ್ಟಲಿಂಗ ಕಟ್ಟಿಕೊಂಡವರನ್ನು ಮಾತ್ರ ಭಕ್ತರು, ಅಂತಲ್ಲದವರು ಭವಿಗಳೆಂಬ ದೂರೂ ಮೇಲಿನ ಮಾತಿನಲ್ಲಿಲ್ಲ. ಲಾಂಛನಕ್ಕೆ ಶರಣೆಂಬೆ ಮತ್ತು ಪರದೈವದ ತಿರಸ್ಕೃತಿಯ ಛಲದಲ್ಲಿ ಯಾವ ಸಂಕುಚಿತ ಆಲೋಚನೆಯೂ ಇಲ್ಲವೆಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಬೌದ್ಧರಲ್ಲಿನ ಸಂಘ, ಧರ್ಮ, ಬುದ್ಧನಿಗೆ ಶರಣು ಹೋಗುವ ಪ್ರಕ್ರಿಯೆಯೇ ಇಲ್ಲಿ 'ಲಾಂಛನಕ್ಕೆ ಶರಣೆಂಬೆ' ಎಂಬ ಮಾತಿನಲ್ಲಿದೆ. ಬೌದ್ಧರಲ್ಲಿ ಆ ಬಗೆಯ ಶರಣಾಗತಿ ಎಲ್ಲ ಭಿಕ್ಷುಗಳನ್ನೂ ಯಾವ ರೀತಿ ಒಂದುಗೂಡಿಸಿ ಸಂಘಟಿತರಾಗುವಂತೆ ಮಾಡಿತೋ ಅಂತಹುದೇ ಪರಿಣಾಮ, ಕಾರ್ಯ, ಸಂಘಟನೆ ಈ ಮಾತಿನ ಸಂದರ್ಭದಲ್ಲೂ ಉಂಟಾಯಿತೆನ್ನಬಹುದು. ಬಸವ ಚಳವಳಿಯಲ್ಲಿನ ಎಲ್ಲ ಭಾಗಿಗಳಿಗೂ ಸಂಘಟನೆಗೆ ಬೇಕಾದ ಏಕಸೂತ್ರತೆಯನ್ನು ಒದಗಿಸಿದ್ದು ಬಸವ ಪ್ರಣೀತ ಧರ್ಮ ಮತ್ತು ಅದರ ಲಾಂಛನಗಳೆನ್ನಬಹುದು. ಕ್ರಾಂತಿಕಾರಿ ವಿಚಾರಗಳು, ಸಮಾನತೆಯ ಭಾವನೆಗಳು ಎಲ್ಲ ಶರಣರನ್ನೂ ಹತ್ತಿರಕ್ಕೆ ತಂದಿದ್ದರೂ ಅವರನ್ನು ಒಂದು ಸಂಘಟನೆಯಾಗಿ ಬೆಸೆದಿದ್ದವುಗಳು ಈ ಧರ್ಮ, ಲಾಂಛನಗಳೇ. ಸಂಘಟನೆಯನ್ನು ಕಾಯ್ದುಕೊಳ್ಳುವ ಉದ್ದೇಶದಿಂದ 'ಲಾಂಛನಕ್ಕೆ ಶರಣೆಂ'ದಿದ್ದಾರೆಯೇ ಹೊರತು ಇಷ್ಟಲಿಂಗವನ್ನೇ ಮುಂದು ಮಾಡಿ ಭಕ್ತ-ಭವಿಗಳೆಂದು ಮಾಡಿದ ಭೇದವಿದಲ್ಲ. ಭಕ್ತ - ಭವಿಯೆಂಬುವೇನಿದ್ದರೂ ಅವರವರ ಮನೋಸ್ಥಿತಿ, ಆಚಾರ- ವಿಚಾರಗಳಿಗೆ ಸಂಬಂಧಿಸಿದವು. ಅಲ್ಲದೆ ಶರಣ ಚಳವಳಿಯಲ್ಲಿ ತೊಡಗಿದವರೆಲ್ಲರೂ ಬಸವಣ್ಣನವರ ವಿಚಾರ, ತತ್ತ್ವದ ಅನುಯಾಯಿಗಳಾಗಿದ್ದು ಲಾಂಛನಗಳನ್ನು ಒಪ್ಪಿಕೊಂಡವರೇ ಹೊರತು ಅವನ್ನು ವಿರೋಧಿಸಿದ ಇತರ ಜನರಲ್ಲ.

**ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ,**
**ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ**
**ಛಲಬೇಕು ಶರಣಂಗೆ ಲಿಂಗ ಜಂಗಮವೊಂದೆಂಬ,**
**ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ**
**ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ,**
**ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ.**

ಎಂಬ ವಚನದಲ್ಲಿ ಎಲ್ಲ ಸಾಲುಗಳನ್ನೂ ಗಮನಿಸುವ ಅವಶ್ಯಕತೆ ಇದೆ. ಈ ವಚನದ ಒಟ್ಟಾರೆ ಆಶಯ ಶರಣನ ನೈತಿಕ ವ್ಯಕ್ತಿತ್ವವನ್ನು ನಿಷ್ಕರ್ಷಿಸುವುದೇ ಆಗಿದೆ. ವಚನ ನಿಷ್ಕರ್ಷಿಸುವ ಯಾವ ಅಂಶದಲ್ಲೂ ದೌರ್ಬಲ್ಯ ತಲೆದೋರಬಾರದೆಂಬುದೇ ಇಲ್ಲಿ ವ್ಯಕ್ತವಾಗುತ್ತದೆ. ಪರದೈವದ ತಿರಸ್ಕೃತಿಯನ್ನು ಇಲ್ಲಿ ಏಕ ದೇವೋಪಾಸನೆಯ ತಾತ್ವಿಕ ನೆಲೆಯಲ್ಲಿ ಭಾವಿಸಬೇಕೇ ಹೊರತು ಈರ್ಷೆಯಿಂದಲ್ಲ. ತಮ್ಮ ತತ್ವ-ಸಿದ್ಧಾಂತಕ್ಕೆ ಹೊರತಾದ, ವೈಚಾರಿಕತೆಯ ಜಡ್ಡುಗಟ್ಟಿದ ಇತರ ಧರ್ಮದ ಬಹುದೇವತಾ ಕಲ್ಪನೆಯ ಮೌಢ್ಯವನ್ನು ತಿರಸ್ಕರಿಸುವುದು ಮಂಜುರಾಜ್ ಅವರಿಗೆ ಸಂಕುಚಿತ ಆಲೋಚನೆಯಾಗಿ ಕಂಡಿತೇನೋ ! ಚಳವಳಿಯ, ಸಂಘಟನೆಯ ದೃಷ್ಟಿಯಿಂದಲೂ ಶರಣರೆಲ್ಲರೂ ತಮ್ಮ ದೈವಕ್ಕೆ, ಒಂದು ದೈವ - ಒಂದು ವಿಚಾರಕ್ಕೆ ಬದ್ಧರಾಗಿರಬೇಕಾಗಿದ್ದ ಸಂದರ್ಭವದಾಗಿತ್ತೆಂಬುದನ್ನು ಮರೆಯಬಾರದು.

ಇನ್ನು "ವೃತ್ತಿ ಸೂಚಕಗಳು, ಜಾತಿ ಸೂಚಕಗಳು ಕ್ರಮೇಣ ಸಂಕುಚಿತ ಅರ್ಥದ ದ್ವೀಪಗಳಾಗಿ ಮಡುಗಟ್ಟಿ ಮತ್ತೆ ಜಾತಿಯ ಭೂತ ಹೆಗಲೇರುತ್ತದೆಂಬ ಪ್ರಜ್ಞೆ ಆ ಹೊತ್ತಿನ ಯಾರಿಗೂ ಇದ್ದಂತಿರಲಿಲ್ಲ" ಎಂದಿದ್ದಾರೆ. ಮೊದಲನೆಯದಾಗಿ, ಅಂಕಿತಗಳೊಂದಿಗೆ ಬರುವ ಈ ವೃತ್ತಿ - ಜಾತಿ ಸೂಚಕಗಳಿಂದಾಗಿಯೇ ಶರಣರ ಬೃಹಚ್ಚಳವಳಿಯಲ್ಲಿ ಅಷ್ಟೊಂದು ವೃತ್ತಿ ಜಾತಿಯ ಜನ ಪಾಲ್ಗೊಂಡಿದ್ದರೆಂಬ ಅಂಶ ತಿಳಿಯುವುದು. ಎರಡನೆಯದಾಗಿ, ಪ್ರತಿಯೊಬ್ಬ ವಚನಕಾರನೂ ತನ್ನ ಜಾತಿ-ವೃತ್ತಿ ಸೂಚಕವನ್ನು ಬಳಸಿಕೊಂಡೇ ತನ್ನ ಗುರುತನ್ನು ವಿಶಿಷ್ಟತೆಯನ್ನು ಈ ಬೃಹಚ್ಚಳವಳಿಯಲ್ಲಿ ಸ್ಥಾಪಿಸಲು ಪ್ರಯತ್ನಿಸಿದ್ದಾನೆ. ಮೂರನೆಯದಾಗಿ, ಎಲ್ಲ ಶರಣರಲ್ಲೂ ಸಮಾನತೆಯೆಂಬುದು ಮಾನಸಿಕ ಮತ್ತು ಸಾಮಾಜಿಕ (ಶರಣಸಮಾಜ - ಶರಣವಲಯದಲ್ಲಿ) ನೆಲೆಯಲ್ಲಿ ಮೂಡಿದ ಸಂದರ್ಭದಲ್ಲಿ ಈ ವೃತ್ತಿ - ಜಾತಿ ವಾಚಕಗಳು ಸಂಕುಚಿತ ನೆಲೆ, ಅರ್ಥವನ್ನು ಕಳೆದುಕೊಂಡು ಕೀಳರಿಮೆಯಿಂದ ಮುಕ್ತವಾಗಿದ್ದವು. ಹಾಗೆಂದೇ ಅಂಥ ಕೀಳರಿಮೆ ವಿರೋಧಿಸಿ ಕೆಳಸ್ತರದಿಂದ ಬಂದ ಶರಣ ವಚನಕಾರರು ಅವನ್ನು ಯೋಚಿಸಿಯೇ ತಮ್ಮ ಜಾಗೃತ ಪ್ರಜ್ಞೆಯಿಂದಲೇ ಬಳಸಿದ್ದಾರೆನ್ನಬೇಕಾಗುತ್ತದೆ. ಇದಕ್ಕೆ ಬಸವಣ್ಣನವರ ಕಾಯಕತತ್ವದ ಘನತೆ ಮತ್ತು ಕಾಯಕ ಗೌರವಗಳೇ ಕಾರಣವೆಂದು ವಿಶೇಷವಾಗಿ ಹೇಳಬೇಕಾಗಿಲ್ಲ. ಆದರೆ ಜಾತಿಯ ಭೂತ ಮತ್ತೆ ಹೆಗಲೇರಿದ್ದು ಚಳವಳಿಯ ಅನಂತರದ ಅನಾರೋಗ್ಯಕಾರೀ ಬೆಳವಣಿಗೆಗಳ ಪರಿಣಾಮದಿಂದಾಗಿ. ಇದಕ್ಕೆ ಪಟ್ಟಭದ್ರ ಹಿತಾಸಕ್ತಿಗಳಾದ ಶೈವ ಮತ್ತು ವೈದಿಕ ಮೂಲಭೂತವಾದಿಗಳ ಅಪಾರ ಕೊಡುಗೆಯಿದೆಯೆಂಬುದನ್ನು ತಿಳಿದುಕೊಳ್ಳಬೇಕು.

ಮಂಜುರಾಜ್‌ರವರು, "ಬಸವ ಚಳವಳಿಯ ಹಂತದಲ್ಲಿ ಮೇಲ್‌ಸ್ತರದ ಆಲೋಚನೆಗೂ 'ಕೆಳ' ಎನಿಸಿಕೊಂಡ ಸ್ತರದ ಆಲೋಚನೆಗೂ ಎಲ್ಲೋ ಒಂದು ಕಡೆ ಬಿರುಕು ಏರ್ಪಟ್ಟಿರಬೇಕು. ಇದು ಸಿದ್ಧಾಂತ ರೂಪುಗೊಳ್ಳುವ ಸಂದರ್ಭದಲ್ಲೋ, ಸಿದ್ಧಾಂತಗಳು ಕಾರ್ಯರೂಪಕ್ಕೆ ತೊಡಗುವ ಸಂದರ್ಭದಲ್ಲೋ ಆಗಿದ್ದಿರಬೇಕು" ಎನ್ನುವಲ್ಲಿ ಅಸ್ಪಷ್ಟ ನಿಲುವಿದೆ. ಅವರು ತಿಳಿಸುವ 'ಬಿರುಕು' ಸಿದ್ಧಾಂತ ರೂಪುಗೊಳ್ಳುವಾಗ ಉಂಟಾಗಿರಲಿಕ್ಕೆ ಸಾಧ್ಯವಿದೆಯೇ ಹೊರತು ಸಿದ್ಧಾಂತದ ಕಾರ್ಯರೂಪದಲ್ಲಿಯಂತೂ ಖಂಡಿತ ಸಾಧ್ಯವಿಲ್ಲ. ಏಕೆಂದರೆ ಸಿದ್ಧಾಂತ ಕಾರ್ಯರೂಪಕ್ಕೆ ಬರುವುದು ಸಿದ್ಧಾಂತ ರೂಪುಗೊಳ್ಳುವುದರ ಮುಂದಿನ ಹಂತ. ಒಂದು ವೇಳೆ ಸಿದ್ಧಾಂತ ರೂಪುಗೊಳ್ಳುವಾಗ ಭಿನ್ನಾಭಿಪ್ರಾಯವುಂಟಾಗದೆ ಏಕಾಭಿಪ್ರಾಯವೇ ಮೂಡಿದ್ದರೆ ಅದು ಕಾರ್ಯರೂಪದಲ್ಲೂ ಬಹುಪಾಲು ಏಕಾಭಿಪ್ರಾಯದ ಮೂಲ ಸ್ವರೂಪವನ್ನೇ ಕಾಯ್ದುಕೊಳ್ಳುವ ಸಾಧ್ಯತೆ ಇರುತ್ತದೆ. ಇಲ್ಲಿ ಯಾವ ಭಿನ್ನಾಭಿಪ್ರಾಯ, ಬಿರುಕಿಗೆ ಅವಕಾಶವಿಲ್ಲ. ಒಂದು ವೇಳೆ ಆ ಸಂದರ್ಭದಲ್ಲಿ ಹೀಗೇನಾದರೂ ಆಗಿದ್ದರೆ ಚಳವಳಿಯು ಸಂಪೂರ್ಣ ಯಶಸ್ವಿಯಾಗುವ ಸಾಧ್ಯತೆಯೂ ಇಲ್ಲದಿರುತ್ತಿರಲಿಲ್ಲ. ಆದರೆ ಇದೆಲ್ಲ ತಿರುವು ಮುರುವಾಗಲು ಕಾರಣ ಆ ಭಿನ್ನಾಭಿಪ್ರಾಯ, ಬಿರುಕು ಸಿದ್ಧಾಂತ ರೂಪುಗೊಳ್ಳುವಾಗಲೇ ಉಂಟಾಗಿದ್ದುದೇ ಆಗಿದೆ.

ಶರಣರಿಗೆ ತಮ್ಮ ಚಳವಳಿಯ ರೂಪು-ರೇಷೆ, ಕಾರ್ಯ ವಿಧಾನದ ಕುರಿತ ಚರ್ಚೆ, ವಿಚಾರ-ವಿಮರ್ಶೆಗಳ ಸಂದರ್ಭದಲ್ಲಿ ಭಿನ್ನಾಭಿಪ್ರಾಯ ಮೂಡುತ್ತಿದ್ದುದು ಸಹಜವೇ ಆಗಿದೆ. ಇಲ್ಲದಿದ್ದರೆ 'ಎಲ್ಲ ಶರಣರೂ' ಅಂತಿಮ ಕ್ರಾಂತಿಯಲ್ಲಿ ಭಾಗವಹಿಸುತ್ತಿದ್ದರು; ಇಲ್ಲವೆ, ಅಂಥ ಅ-ಯೋಜಿತ, ಆಕಸ್ಮಿಕ ಮತ್ತು ಸಾಕಷ್ಟು ಪೂರ್ವಸಿದ್ಧತೆ

ಯಿಲ್ಲದ ಆ ಕ್ರಾಂತಿಯನ್ನು ಅವಸರವಸರವಾಗಿ ಕೈಗೊಳ್ಳುವ ವಿಚಾರ ಅವರಿಗೆ ಹೊರತಾಗಿರುತ್ತಿತ್ತು. ಹೀಗೆ ಅವರ ಚಳವಳಿಯ ಕುರಿತ ಸೈದ್ಧಾಂತಿಕ ನೆಲೆಯಲ್ಲಿ ಭಿನ್ನಾಭಿಪ್ರಾಯ ಮೂಡಿದುದು ಆ ಚಳವಳಿಯ ವೈಫಲ್ಯದ ಒಂದು ಕಾರಣವೆನ್ನಬಹುದು. ಆದರೆ ಈ ಎಲ್ಲ ಭಿನ್ನಾಭಿಪ್ರಾಯಗಳ ನಡುವೆಯೂ ಅವರ ಒಗ್ಗಟ್ಟು, ಸಂಘಟನೆ ಒಡೆಯದಂತೆ ಉಳಿದುದು ಅವರೆಲ್ಲರಲ್ಲೂ ಸಮಾನವಾಗಿ ಬೇರೂರಿದ್ದ ತೀವ್ರ ಪರಿವರ್ತನೆಯ ಕುರಿತ ಭಾವನೆ, ತುಡಿತ, ಮೂಲ ಧೋರಣೆಯ ಕಾರಣದಿಂದೆಂಬುದು ಗಮನಾರ್ಹ.

''ಅಂತರ್ಜಾತಿ ಮದುವೆಯಿಂದ ವರ್ಣ ಸಂಕರಗೊಳ್ಳುತ್ತಿದ್ದಂತೆಯೇ ಈ ಬುಡಮೇಲು ಕೃತ್ಯಗಳು ವಿನಾಶಕಾರಿ ಹಂತ ತಲುಪಿದವು. ಒಂದು ಹಂತ ಮೀರಿದ ತರುವಾಯ ಶರಣರು ನಾಯಕರ ಯಾವ ಮಾತನ್ನೂ ಕೇಳುವ ಸ್ಥಿತಿಯಲ್ಲಿಲ್ಲದ್ದರಿಂದ ಪರಸ್ಪರ ಹಿಂಸಾಚಾರ ಅನಿವಾರ್ಯವೆಂಬಂತೆ ಭುಗಿಲೆದ್ದಿತು'' ಎಂದಿದ್ದಾರೆ ಮಂಜುರಾಜ್. ಇಲ್ಲಿ 'ವರ್ಣಸಂಕರ'ವೆಂಬುದು ಪ್ರತಿಗಾಮಿಗಳು ಬಳಸುವ ಪದವೇ ಹೊರತು ಪ್ರಗತಿಪರರು ಬಳಸುವಂಥದ್ದಲ್ಲ. ಬಸವಣ್ಣನವರು ಮಾಡಿದ ಅಂತರ್ಜಾತಿ ವಿವಾಹವು ಅವರ ವೈರಿಗಳ ವೈದಿಕಶಾಹಿಯ ದೃಷ್ಟಿಯಲ್ಲಿ ವರ್ಣ ಸಂಕರವೇ ಆದರೂ ಜಾತಿ ಪದ್ಧತಿಯನ್ನು, ಮೇಲು ಕೀಳುಗಳನ್ನು ಕಿತ್ತೊಗೆಯಲು ಕಟಿಬದ್ಧರಾದ ಬಸವಾದಿ ಶರಣರಿಗೆ ಅದು ತಾವು ಸಾಧಿಸುವ ಸಾಮಾಜಿಕ ಸಮಾನತೆಯ ಪರಮೋಚ್ಚ ದ್ಯೋತಕ. ಆ ಘಟನೆಯನ್ನು ಸಮಾನತೆ ಬಯಸುವವರೆಲ್ಲರೂ ತಮ್ಮ ಚಳವಳಿಯಲ್ಲಿ ಬಸವಣ್ಣನವರಿಟ್ಟ ಕ್ರಾಂತಿಕಾರಿ ಹೆಜ್ಜೆಯೆಂದೇ ಪರಿಗಣಿಸಬೇಕಾಗುತ್ತದೆ. ಆದರೆ ಲೇಖಕರು ಆ ಪದವನ್ನು ಬಳಸಿದ ರೀತಿ ಓದುಗರನ್ನು ತಪ್ಪುದಾರಿಗೆ ದೂಡುವಂತಹುದು, ಅಪಾರ್ಥಕ್ಕೆಡೆ ಮಾಡುವಂತಹುದು. ಅಥವಾ ಲೇಖಕರೇ ಅದನ್ನು ಪ್ರಗತಿಪರ ದೃಷ್ಟಿಯಿಂದ ನೋಡುವುದಿಲ್ಲವೋ ಅಥವಾ ಅವರ ಅರ್ಥಗ್ರಹಿಕೆಯಲ್ಲೇ ತೊಂದರೆಯಿದೆಯೋ ತಿಳಿಯುವುದಿಲ್ಲ. ಅಲ್ಲದೆ, ''ಈ ಬುಡಮೇಲು ಕೃತ್ಯಗಳು ವಿನಾಶಕಾರಿ ಹಂತ ತಲುಪಿದವು'' ಎನ್ನುವಲ್ಲಿಯೂ ಲೇಖಕರು ಯಾರ, ಯಾವ ಕೃತ್ಯಗಳೆನ್ನುವುದನ್ನು ಸ್ಪಷ್ಟಪಡಿಸುವುದಿಲ್ಲ. ಇದೂ ಓದುಗನನ್ನು ಗೊಂದಲಕ್ಕೀಡುಮಾಡುವಂತಹುದೇ. ಈ ಅಂತರ್ಜಾತಿ ವಿವಾಹದ ಪರಿಣಾಮವಾದ 'ಎಳೆ ಹೂಟೆ'ಯು ರಾಜನಿಂದ ವಿಧಿಸಲ್ಪಟ್ಟ ಶಿಕ್ಷೆಯೆನಿಸಿಕೊಳ್ಳುತ್ತದೆಯೇ ಹೊರತು ಬುಡಮೇಲು ಕೃತ್ಯವೆನಿಸಿಕೊಳ್ಳವುದಿಲ್ಲ. ಅಲ್ಲದೆ ಬಸವಣ್ಣನವರ ಗಡಿಪಾರನ್ನು ಹಾಗೆ ಹೇಳಲಾಗುವುದಿಲ್ಲ ಮತ್ತು ರಾಜನೊಬ್ಬ 'ಬುಡಮೇಲು' ಎನ್ನುವಂತಹ ಕಾರ್ಯದಲ್ಲಿ ತೊಡಗುವ ಅವಶ್ಯಕತೆಯಿಲ್ಲ. ಅವನಿಗೆ ಚಿತಾವಣೆ ಮಾಡಿದ ಚಳವಳಿಯ ವೈರಿಗಳು ತಮ್ಮ ಮನಸ್ಸಿನ ಪ್ರಕ್ಷುಬ್ಧತೆಯ ಪರಿಣಾಮಗಳನ್ನು ರಾಜನ ಮೂಲಕ ಮಾಡಿಸಿದರೇ ಹೊರತು ನೇರವಾಗಿ ತಾವು ತೊಡಗಲಿಲ್ಲ. ಆದ್ದರಿಂದ 'ಬುಡಮೇಲು ಕೃತ್ಯಕ್ಕೆ' ನೇರವಾಗಿ ಅವರನ್ನು ಹೊಣೆಮಾಡುವಂತಿಲ್ಲ. ಇನ್ನು ಎಳೆ ಹೂಟೆಗೆ ಪ್ರತಿಯಾಗಿ ಜರುಗಿದ ಸಶಸ್ತ್ರ ಹೋರಾಟವನ್ನು ಬುಡಮೇಲು ಕೃತ್ಯವೆನ್ನುವುದಾದರೆ ಕ್ರಾಂತಿ ಎನ್ನುವುದು ಯಾವುದಕ್ಕೆ ? ಇಷ್ಟಕ್ಕೂ ಇಂಥ ಪದವು ರಾಜಶಾಹಿ, ಪುರೋಹಿತಶಾಹಿ ಮುಂತಾದ ಅಧಿಕಾರಸ್ಥ ವಲಯದಲ್ಲಿ ಪ್ರಚಲಿತವಿರುವಂತಹುದೇ ಹೊರತು ದುಡಿಯುವ ವರ್ಗದ, ಕ್ರಾಂತಿಕಾರಿಗಳ ನೆಲೆಯದ್ದಲ್ಲ. ಬುಡಮೇಲು ಕೃತ್ಯವೆನ್ನುವುದು ಪ್ರತಿಗಾಮಿಗಳು ತಮಗೆ ಮುಳುವಾಗಬಹುದಾದ ಪ್ರಗತಿಪರರ ಕಾರ್ಯ ಚಟುವಟಿಕೆಗಳನ್ನೇ ಉದ್ದೇಶಿಸಿ ಕರೆದ ವಿಶೇಷ ಪದವಾಗಿದೆ. ಅದು ಪ್ರಗತಿ ವಿರುದ್ಧದ, ಎಂದರೆ ಪ್ರತಿಗಾಮಿ ಭಾವನೆಯನ್ನು ಸೂಚಿಸುತ್ತದೆಯೇ ಹೊರತು ಪ್ರಗತಿಪರತೆಯನ್ನು ಸಮರ್ಥಿಸುವುದಿಲ್ಲ. ಆದ್ದರಿಂದ ಇಲ್ಲಿ ಶರಣರ ಯಾವ ಚಟುವಟಿಕೆಯನ್ನೂ ಬುಡಮೇಲು ಕೃತ್ಯವೆಂದು ಹೇಳುವಂತಿಲ್ಲ. ಮುಖ್ಯವಾಗಿ ಶರಣರು ನಾಯಕರ ಮಾತನ್ನು ಕೇಳುವ ಪ್ರಮೇಯವೇ ಆ ಸಂದರ್ಭದಲ್ಲಿರಲಿಲ್ಲ. ಚಳವಳಿಯ ಕೇಂದ್ರ ಬಿಂದು ಬಸವಣ್ಣನವರು ಆಗಲೇ ಗಡಿಪಾರಿನ ಶಿಕ್ಷೆಯಿಂದಾಗಿ ಕಲ್ಯಾಣವನ್ನು ತೊರೆದಿದ್ದರು. ಪ್ರಾಯೋಗಿಕ ಕ್ರಾಂತಿಗಿಂತ ಸೈದ್ಧಾಂತಿಕ ಕ್ರಾಂತಿ, ಕಟು ವಿಮರ್ಶೆ-ವಿಡಂಬನೆ ಮತ್ತು ಅಧ್ಯಾತ್ಮದೊಂದಿಗೇ ಹೆಚ್ಚು ಗುರುತಿಸಿಕೊಳ್ಳುವ .ಅಲ್ಲಮ ಪ್ರಭುಗಳೂ ಶ್ರೀಶೈಲಕ್ಕೆ ತೆರಳಿದ್ದರು. ಚೆನ್ನಬಸವಣ್ಣನವರನ್ನು ತಾತ್ವಿಕ ಜಿಜ್ಞಾಸೆಗಳೊಂದಿಗೆ ಹೆಚ್ಚು ಸಂಬಂಧಿಸಬಹುದೇ ಹೊರತು ಸಶಸ್ತ್ರ ಕ್ರಾಂತಿಯೊಂದಿಗೆ ತಳುಕುಹಾಕುವಂತಿಲ್ಲ. ಹೀಗೆ ಶರಣ ಸಮುದಾಯದಲ್ಲಿ ಪ್ರಮುಖವಾಗಿ ಕಾಣುವ ವ್ಯಕ್ತಿಗಳೆಲ್ಲರೂ ಕಾರಣಾಂತರಗಳಿಂದಾಗಿ ಸಶಸ್ತ್ರ ಕ್ರಾಂತಿಯಿಂದ ದೂರವೇ ಉಳಿದರು. ಹೇಳಬಹುದಾದಂತಹ ಯಾವ ನಾಯಕರೇ ಇಲ್ಲದ ಆ ಸಂದರ್ಭದಲ್ಲಿ ತೀವ್ರಗಾಮಿಗಳಾದ ಮಡಿವಾಳ ಮಾಚಿದೇವನಂತಹವರೇ ನಾಯಕರಾಗಿ ಕ್ರಾಂತಿಯನ್ನು ಜೀವ ತುಂಬಿ ಮುನ್ನಡೆಸಬೇಕಾಯಿತು.

ಇಲ್ಲಿ - ಶರಣರೆಲ್ಲರಿಗೂ ಸಮಾನವಾದ ಒಂದೇ ಮೂಲಧೋರಣೆ ಗುರಿಯಿದ್ದರೂ ಅವರವರ ಮೂಲ ಮನೋಭಾವ ಮತ್ತು ಅವರವರು ಬಂದ ಹಿನ್ನೆಲೆ-ಪರಿಸರಗಳ ಆಧಾರದಿಂದ ಮಂದಗಾಮಿ ಮತ್ತು ತೀವ್ರಗಾಮಿಗಳೆಂದು ಪ್ರತ್ಯೇಕಿಸಿ ನೋಡಬಹುದು. ಬಸವಣ್ಣ, ಚೆನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮೇಶ್ವರರಂತಹ ಶರಣರು ಮೂಲತಃ ಭಕ್ತಿ ಪ್ರಧಾನ, ಮೃದುಧೋರಣೆಯ ಮನೋಭಾವದವರು. ಅಲ್ಲದೆ ಇವರೆಲ್ಲರೂ ಮೇಲ್‌ಸ್ತರದಿಂದಲೇ ಬಂದವರೆಂಬುದನ್ನು ಮರೆಯಬಾರದು. ಹೀಗಾಗಿ ಬಸವಣ್ಣನವರು ಸ್ವಭಾವತಃ ಕ್ರಾಂತಿಕಾರಿಗಳಾದರೂ ಅವರ ಕ್ರಾಂತಿ ಮನೋಧರ್ಮಕ್ಕೆ ಕೆಳವರ್ಗದವರಿಗಾದಂತಹ ನೋವು, ಹಿಂಸೆ, ಆಘಾತ, ಕೀಳರಿಮೆಗಳ ನೇರ ಬಿಸಿ ತಟ್ಟಲಿಲ್ಲ. ಹಾಗಾಗಿಯೇ ಅವರ ಕ್ರಾಂತಿಕಾರಿ ಧೋರಣೆಗಳೂ ಮೃದುತ್ವದ ಗಡಿ ದಾಟಲಿಲ್ಲ. ಅವರ ವಿರೋಧವೂ ಮೃದುತ್ವದ ಕವಚ ತೊಟ್ಟುಕೊಂಡೇ ಬರುತ್ತದೆ. ''ವೇದವನೋದುವರ ಮುಂದೆ ಅಳು ಕಂಡಾ ಹೋತೆ, ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು ಅಳು ಕಂಡಾ ಎಲೆ ಹೋತೆ,.... ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ'' ಎಂಬ ವಚನವನ್ನು ಉದಾಹರಣೆಗೆ ನೋಡಬಹುದು.

ಒಂದು ವ್ಯವಸ್ಥೆಯ ವಿರೋಧವೂ ಬಸವಣ್ಣನವರಲ್ಲಿ ಇಂತಹ ಅತ್ಯಂತ ಮೃದುಧೋರಣೆಯಾಗಿ ಮೂಡಿಬರುತ್ತದೆ. ಕೊನೆಗೆ 'ನೀನತ್ತುದಕೆ ತಕ್ಕುದ ಮಾಡುವ ಕೂಡಲ ಸಂಗಮದೇವ' ಎನ್ನುವಲ್ಲಿ ಕೂಡಲ ಸಂಗನ ಮೇಲೇ ಅವಲಂಬಿತವಾಗುವಂತಹ ಒಂದು ಬಗೆಯ ಅಸಹಾಯಕತೆಯ ಮಟ್ಟವನ್ನು ಮುಟ್ಟುತ್ತದೆ. ಇದರರ್ಥ ಬಸವಣ್ಣನವರು ಕ್ರಿಯಾಶೂನ್ಯರೆಂದಲ್ಲ, ಬದಲಾಗಿ ತಮ್ಮ ಧೋರಣೆಯಲ್ಲಿ ಮೃದುವಾಗಿದ್ದರೆಂಬುದು. ಸಾಮಾನ್ಯವಾಗಿ ಅವರ ಎಲ್ಲ ವಚನಗಳೂ ಅವರ ಮನೋಧರ್ಮಕ್ಕೆ ಹಿಡಿದ ಕನ್ನಡಿಗಳೇ. ಹೀಗಾಗಿ ಅವರ ಎಂಥ ತೀವ್ರ ವಿರೋಧವೂ ಮೃದುತ್ವದ ಪರಿಧಿಯನ್ನು ದಾಟುವುದಿಲ್ಲ. ಆದರೆ ಅಲ್ಲಮ ಪ್ರಭುಗಳ ಯಾವ ಮಾತು, ವಿರೋಧವೂ ಮೃದುತ್ವದ ಪರಿಧಿಗೆ ಒಳಗಾಗುವುದಿಲ್ಲ. ''ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣವೆಂಬುದು ಪುಂಡರ ಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿಯೆಂಬುದು ತೋರಿ ಎಂಬ ಲಾಭ'' ಎಂಬಂತಹ ಹಲವಾರು ವಚನಗಳನ್ನು ಗಮನಿಸಬಹುದು. ಮೂಲತಃ ಶೋಷಣೆಗೊಳಗಾದ ಕೆಳವರ್ಗದಿಂದ ಬಂದುದರಿಂದಲೇ ಅಲ್ಲಮ ಪ್ರಭುವಿಗೆ ಮಾತಿನ ಚಾಟಿಯೇಟು ಕೊಡುವ ಗುಣ ಸ್ವಾಭಾವಿಕವಾಗಿಯೇ ಬಂದಿದೆ. ಹೀಗೆ ವಚನದಲ್ಲಿ, ಸೈದ್ಧಾಂತಿಕವಾಗಿ ತೀವ್ರಗಾಮಿಯಾದರೂ ಅಧ್ಯಾತ್ಮಕ್ಕೇ ಪ್ರಧಾನವಾಗಿ ಅರ್ಪಿಸಿಕೊಂಡಿದ್ದರಿಂದ ಮತ್ತು ಆ ಕಾರಣದಿಂದಲೇ ಕ್ರಾಂತಿಯ ಪ್ರಾಯೋಗಿಕತೆಯಿಂದ ಅಥವಾ ನೇರ ಹೋರಾಟದಿಂದ ಹೊರಗುಳಿಯುವಂತಾಯಿತು. ಇನ್ನು ಉಳಿದೆಲ್ಲ ಕೆಳವರ್ಗದಿಂದ ಬಂದ ಶರಣರು ತಾವನುಭವಿಸಿದ ಕಷ್ಟ-ನಷ್ಟ, ಹಿಂಸೆ, ಅವಮಾನ, ಶೋಷಣೆಗಳ ಕಾರಣದಿಂದಲೇ ತೀವ್ರಗಾಮಿ ಮನೋಗುಣದವರಾಗಿ ಬೆಳೆದುಬಂದಿರುವುದು ಸಹಜವಾಗಿದೆ. ಇಂಥ ಹಿನ್ನೆಲೆಯಿಂದ ಮೇಲು ಮತ್ತು ಕೆಳವರ್ಗದಿಂದ ಬಂದ ಶರಣರಲ್ಲಿ ಮೂಲತಃ ಸಮಾನತೆ, ಏಕಸೂತ್ರತೆಯಿದ್ದರೂ ತಮ್ಮ ಚಳವಳಿ ಕುರಿತ ವಿಚಾರ-ವಿಮರ್ಶೆ, ಕಾರ್ಯ ವಿಧಾನದ ಕುರಿತ ಅಭಿಪ್ರಾಯ ಭೇದ,



ವೈಚಾರಿಕ ಸಂಘರ್ಷ, ಬಿರುಕುಗಳುಂಟಾದವೆನ್ನಬಹುದು. ಹೀಗೆ ಮೂಲತಃ ಅವರ ಸಿದ್ಧಾಂತ ಮತ್ತು ಕಾರ್ಯ ವಿಧಾನದಲ್ಲಿ ಒಮ್ಮತವಿರದ ಕಾರಣ ಅವರಲ್ಲೇ ಮಂದಗಾಮಿಗಳಿಂದ ಹೋರಾಟಕ್ಕೆ ಅಸಮ್ಮತಿಯುಂಟಾಗಿರಬಹುದಾದ್ದರಿಂದ ಅ-ಯೋಜಿತವೂ, ಪೂರ್ವಸಿದ್ಧತೆ ರಹಿತವೂ, ಆಕಸ್ಮಿಕವೂ ಆದ ತೀವ್ರಗಾಮಿಗಳ ಹೋರಾಟ ನಿಶ್ಚಿತ ಯಶಸ್ಸನ್ನು ಹೊಂದಲಿಲ್ಲವೆನ್ನಬಹುದು. 'ಪುರೋಹಿತಶಾಹಿಯನ್ನು ಎದುರಿಸಿದಂತೆ ರಾಜಶಾಹಿಯನ್ನು ಎದುರಿಸಲು ಬಸವ ಚಳವಳಿಗೆ ಸಾಧ್ಯವಾಗಿರಲಿಕ್ಕಿಲ್ಲ' ಎಂಬ ಮಂಜುರಾಜ್‌ರ ಅಸ್ಪಷ್ಟತೆಗೆ ಪರಿಹಾರವನ್ನಿಲ್ಲಿ ಕಂಡುಕೊಳ್ಳಬಹುದು.

ಯಾವನು ಸಮಾಜದ ನೇರ ತುಳಿತಕ್ಕೊಳಗಾಗುತ್ತಾನೋ ಅವನೇ ಸೆಟೆದೆದ್ದು ಕ್ರಾಂತಿಕಾರಿ, ತೀವ್ರಗಾಮಿಯಾಗುತ್ತಾನೆ. ಏಕೆಂದರೆ ತುಳಿತಕ್ಕೊಳಗಾದ ಅವನ ಸ್ವಾಭಿಮಾನ, ಆತ್ಮ ಪ್ರಜ್ಞೆಗಳು ಶೋಷಣೆಯ ವಿರುದ್ಧದ ಕಿಚ್ಚಾಗಿ ಪರಿಣಮಿಸುತ್ತವೆ.

ಬಸವಣ್ಣನವರು ಜಾತಿರಹಿತ ಮತ್ತು ವರ್ಗರಹಿತ ಸಮಾಜ ನಿರ್ಮಿಸಲು ಯತ್ನಿಸುತ್ತಿದ್ದುದು ನೂರಕ್ಕೆ ನೂರು ಸತ್ಯ. ಬಸವಾದಿ ಶರಣರ ಮೂಲಧ್ಯೇಯವೇ ಅದಾಗಿತ್ತು. ಇದರಲ್ಲಿ ಯಾವ ವೈಭವೀಕರಣವೂ ಇಲ್ಲ. ಇದರಲ್ಲಿ ಮಿಥ್ಯಾಂಶದ ಲವಲೇಶವೂ, ಯಾವ ಕುರುಹು-ಸಾಕ್ಷಿಯೂ ಬಸವಣ್ಣನವರ ಚರಿತ್ರೆಯಲ್ಲಿ ಅವರ ಮತ್ತು ಸಮಸ್ತ ಶರಣರ ವಚನಗಳಲ್ಲಿ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಬಸವಣ್ಣ ವರ್ಗಗಳ ತಾರತಮ್ಯದ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲವೆಂದರೆ ಏನು ಅರ್ಥ ? ಸಮಾನತೆಯೆಂಬುದು ಕೇವಲ ಬಾಯಿಮಾತಿನ ಕೆಲಸವಲ್ಲ. ಅದು ಜಾತಿ ಮತ್ತು ವರ್ಗಗಳ ಮೂಲೋತ್ಪಾಟನೆಯಿಂದ ಮಾತ್ರ ಸಾಧ್ಯವೆಂಬ ಪೂರ್ಣ ಅರಿವು ಬಸವಣ್ಣನವರಿಗಿದ್ದುದರಿಂದಲೇ ಅವರು ಆ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಿ ಜನಾಂದೋಲನವನ್ನು ಸಂಘಟಿಸಿ ತಕ್ಕಮಟ್ಟಿಗಿನ ಸಫಲತೆಗಳಿಗೆ ಕಾರಣರಾದರು. ಅವರು ಸಂಪತ್ತಿನ ಸಂಗ್ರಹವನ್ನು ವಿರೋಧಿಸುವುದೂ ಮತ್ತು ಕಾಯಕತತ್ವವನ್ನು ಪ್ರತಿಪಾದಿಸುವುದೂ ಪರಸ್ಪರ ಪೂರಕವಾಗಿ ವರ್ಗವಿರೋಧಿ ಆಶಯವನ್ನೇ ಪ್ರಕಟಿಸುತ್ತವೆ.

'ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡಲಿ ಬಡವನಯ್ಯ' ಎನ್ನುವಲ್ಲಿಯೇ ಬಸವಣ್ಣನವರ ಮಾತಿನ ಶಕ್ತಿಯಡಗಿದೆ. ಕೇವಲ ವಾಚ್ಯಾರ್ಥವನ್ನು ಗ್ರಹಿಸುವವರಿಗೆ ಇದರ ವ್ಯಂಗ್ಯಾರ್ಥ ದಕ್ಕಿಲ್ಲ. ಆದುದರಿಂದಲೇ ಆತುರದ ನಿರ್ಣಯಕ್ಕೆ ಬಂದು ತಮ್ಮ ಆಶಯಕ್ಕೆ ತಕ್ಕಂತೆ ದುರ್ಬಳಕೆ ಮಾಡಿಕೊಳ್ಳುತ್ತಾರೆ. ಈ ವಚನದಲ್ಲಿ, ನಮ್ಮೊಳಗಿರುವ ದೇವನನ್ನು ಮರೆತು ಹೊರಗೆಲ್ಲೋ ಯಾವುದೋ ಕಲ್ಲಿನಲ್ಲಿ, ಗುಡಿಯಲ್ಲಿ ಕಾಣುವ ಮೌಢ್ಯದ ಟೀಕೆಯ ಜೊತೆಗೆ, ಒಳಗಿರುವ ಚೈತನ್ಯವೆಂಬ ದೇವನಿಗೆ ಆವಾಸ ಸ್ಥಾನವಾಗಿರುವ ದೇಹವನ್ನೇ ದೇವಾಲಯವನ್ನಾಗಿ ಮಾಡುವ ಪ್ರಕ್ರಿಯೆಯಿದೆ. ಇನ್ನೂ ಮುಂದೆ, ಎಂದರೆ, ಕೊನೆಯಲ್ಲಿ 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ'ವೆಂದು ಹೇಳುವಲ್ಲಿ ದೇವಾಲಯದ ನಿರಾಕರಣೆ- ವಿರೋಧವೇ ಇದೆ. ''ದೇಹವೇ ದೇಗುಲ, ಕಲ್ಲ ಮನೆಯ ಮಾಡಿ ಕಲ್ಲದೇವರ, ಆ ಕಲ್ಲು ಕಲ್ಲ ಕಡೆದರೆ ದೇವರೆತ್ತ ಹೋದರೋ ?'' ಎಂಬಿತ್ಯಾದಿ ಚಿಂತನೆಗಳ ಮೂಲಕ ದೇವಾಲಯ ಸಂಸ್ಕೃತಿಗೆ ಶರಣ ಚಿಂತನೆ ತಡೆಹಾಕುತ್ತದೆ ಎಂದು ಹೇಳುವ ಲೇಖಕರು ಪ್ರಸ್ತುತ ವಚನದಲ್ಲೂ ಅಂಥ ಆಶಯವನ್ನೇ ಕಾಣಬಹುದಾಗಿದೆ. ಇದರಲ್ಲಿ ವರ್ಗದ ಕಲ್ಪನೆಗೆ ತಳುಕು ಹಾಕುವ ಕ್ರಮವನ್ನು ಒಪ್ಪಲಾಗದು. ಜೊತೆಗೆ ಇದರಲ್ಲಿ ಅಸಹಾಯಕತೆಯನ್ನು ಕಾಣುವುದು ಕೂಡ ಅನುಚಿತವೆನಿಸುತ್ತದೆ.

ಲೇಖಕರು ''ಭವಿ-ಭಕ್ತ ಎಂಬ ತಾನೇ ನಿರ್ಮಿಸಿಕೊಂಡ ವರ್ಗ ತಾರತಮ್ಯದಲ್ಲಿ ಶರಣ ಚಳವಳಿ ಸಿಕ್ಕಿಕೊಂಡು ಒದ್ದಾಡಬೇಕಾಯಿತು'' ಎಂದಿದ್ದಾರೆ. ಹಿಂದಾಗಲೇ ತಿಳಿಸಿದಂತೆ 'ಭವಿ-ಭಕ್ತ' ಕಲ್ಪನೆಗಳನ್ನು ಚಳವಳಿಗೆ ತಳುಕು ಹಾಕದೆ ಕೇವಲ ತಾತ್ವಿಕ ನೆಲೆಯಲ್ಲೇ ನೋಡಬೇಕಾಗುತ್ತದೆ. ಚಳವಳಿಗೆ ಸಂಬಂಧಿಸಿದಂತೆ, ಭಕ್ತರೆಂದರೆ ಶರಣ ತತ್ವವನ್ನು ಅನುಸರಿಸಿ ಭಕ್ತಿಮಾರ್ಗದಲ್ಲಿ ನಡೆಯುವವರೆಂದೂ ಮತ್ತು ಮುಖ್ಯವಾಗಿ ಸಮಾನತೆಗಾಗಿ ಹೋರಾಡುವವರೆಂದೂ ಅರ್ಥೈಸಬೇಕೆನಿಸುತ್ತದೆ. ಭವಿಯೆಂದರೆ ಶರಣ ತತ್ವವನ್ನು ವಿರೋಧಿಸುವವನೇ ಅಲ್ಲ, ಬದಲಿಗೆ ತನ್ನ ಅಹಂಕಾರಜನ್ಯ ಅಜ್ಞಾನದಿಂದ ಅಸಂಸ್ಕೃತನಾಗಿರುವವನೇ. ಅಹಂಕಾರ ಮೊದಲಾದ ಗುಣಗಳಿಂದ ಮತ್ತು ಪೂರ್ವಾಗ್ರಹ ಪೀಡಿತರಾದ ಇಂತಹವರು ಸಹಜವಾಗಿಯೇ ಶರಣ ಚಳವಳಿಗೆ ಸೇರದಿರುವ ಮತ್ತು ವಿರೋಧಿಸುವ ಸಾಧ್ಯತೆಯೂ ಇರುತ್ತದೆ. ಅಂದಮೇಲೆ ಶರಣ ಚಳವಳಿಯು 'ಭವಿ-ಭಕ್ತ' ಎಂಬ ವರ್ಗ ತಾರತಮ್ಯವನ್ನು ತಾನೇ ನಿರ್ಮಿಸಿಕೊಳ್ಳುವ ಪ್ರಮೇಯವೆಲ್ಲಿಯದು ?

''ಶಿವಭಕ್ತನಲ್ಲದವನು ಶರಣ ಚಳವಳಿಯ ವ್ಯಾಪ್ತಿಗೆ ಬರಲಾಗಲಿಲ್ಲ. ಅನ್ನ ದಾಸೋಹದ ಪ್ರಯೋಜನ ಪಡೆಯಲು ಹಲವು ಅಪಾತ್ರರು ಲಿಂಗ ಕಟ್ಟಿಕೊಂಡು ಶಿವಭಕ್ತರಂತೆ ನಟಿಸಿದರು. ಬಹುಶಃ ಇಂಥವರೇ ಪಿತೂರಿ ನಡೆಸುವವರ ಪರವಾಗಿ ಅಂದರೆ ಗೂಢಚಾರರಾಗಿ ಕೆಲಸ ಮಾಡಿದ್ದಿರಬಹುದು'' ಎನ್ನುವಲ್ಲಿ ತಾರ್ಕಿಕ ದೌರ್ಬಲ್ಯ ಎದ್ದುಕಾಣುತ್ತದೆ. ಇದರ ಮೊದಲನೆಯ ವಾಕ್ಯವನ್ನು 'ಶಿವಭಕ್ತನಲ್ಲದವನು ಶರಣ ಚಳವಳಿಯ ವ್ಯಾಪ್ತಿಗೆ ಬರಲು ಇಷ್ಟಪಡಲಿಲ್ಲ' ವೆಂದು ತಿದ್ದಿಕೊಳ್ಳಬೇಕು. ಇನ್ನು ಶರಣರ ಅನ್ನದಾಸೋಹವು ಮೇಲು-ಕೀಳು, ಬಡವ-ಬಲ್ಲಿದ, ಪಾತ್ರ-ಅಪಾತ್ರವೆಂಬ ಯಾವುದೇ ಬಗೆಯ ಭೇದಭಾವ ವಿರದೆ ಎಲ್ಲರಿಗೂ ಮುಕ್ತವಾಗಿತ್ತು. ಅಪಾತ್ರರಿಗೆ ಪ್ರವೇಶವಿಲ್ಲದಿರಬಹುದೇನೋ ಎಂಬ ಸಂಶಯಕ್ಕಿಂತಲೂ ಮಿಗಿಲಾಗಿ, ವೇಷ ಕಟ್ಟಿಕೊಂಡು ಮೋಸ ಮಾಡಲಿಕ್ಕೆಂದೇ ಬಂದವನು ಎಂದು ಹೇಳಬಹುದಾದ ಒಬ್ಬ ತನ್ನ ಕೊರಳಲ್ಲಿ ಕಟ್ಟಿಕೊಂಡಿದ್ದ ಬದನೆಕಾಯಿಯೂ ಬಸವಣ್ಣನವರ ಪವಾಡದಿಂದ ಲಿಂಗವಾದುದೂ, ಅವನು ಶಿವಭಕ್ತನಾದ ನೆಂಬುದೂ ಪುರಾಣದಲ್ಲಿ ಬರುವ ಸನ್ನಿವೇಶ. ಇದರಿಂದ ದಾಸೋಹವು ಎಲ್ಲರಿಗೂ ಮುಕ್ತವಾಗಿದ್ದು, ಬಸವಣ್ಣನವರು ಎಲ್ಲರಿಗೂ ಅಲ್ಲಿ ಪ್ರವೇಶಾವಕಾಶ ಕಲ್ಪಿಸಿದ್ದರೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಲೇಖಕರ ಮೇಲಿನ ಮಾತಿನ ಎರಡನೆಯ ವಾಕ್ಯವನ್ನು 'ಅನ್ನ ದಾಸೋಹದ ನೆವ ಮಾಡಿಕೊಂಡು (ಪ್ರಯೋಜನ ಪಡೆಯಲು ಅಲ್ಲ) ಹಲವು ಅಪಾತ್ರರು ಬೇರೊಂದು ಉದ್ದೇಶಕ್ಕಾಗಿ ಲಿಂಗ ಕಟ್ಟಿಕೊಂಡು ಶಿವಭಕ್ತರಂತೆ ನಟಿಸಿದರು' ಎಂದು ಬದಲಾಯಿಸಿಕೊಳ್ಳಬೇಕು ಮತ್ತು ಮೂರನೆಯ ವಾಕ್ಯವು 'ಖಂಡಿತ, - ಇಂಥವರೇ ಪಿತೂರಿ ನಡೆಸುವವರ ಪರವಾಗಿ ಗೂಢಚಾರ ಕೆಲಸ ಮಾಡಿದರೆಂದು ತೀರ್ಮಾನಿಸಬೇಕು', ಎಂದಿರಬೇಕು.




''.....ಎಲ್ಲ ಕೆಳಜಾತಿ ವರ್ಗಗಳೂ ಶರಣ ಚಳವಳಿಯ ಅಡಿಗೆ ಬಂದಿತ್ತೆನ್ನುವುದಾದರೆ ಈ ಹೊತ್ತು ಕರ್ನಾಟಕದಲ್ಲಿ ಕೆಳವರ್ಗ, ಕೆಳಜಾತಿಗಳ ಸುಳಿವೇ ಇರಕೂಡದಿತ್ತು'' ಎಂಬ ಮಾತು ಅತಾರ್ಕಿಕವೂ ಅಸಂಬದ್ಧವೂ ಆಗಿದೆ. ಎಲ್ಲ ಕೆಳ ಜಾತಿ ವರ್ಗಗಳೂ ಶರಣ ಚಳವಳಿಯ ಅಡಿಗೆ ಬಂದಿದ್ದವೆನ್ನುವುದಕ್ಕೆ ಆಯಾ ಜಾತಿ-ವರ್ಗಗಳನ್ನು ಪ್ರತಿನಿಧಿಸುವ ಹಲವು ಜನ ಶರಣರೇ ಸಾಕ್ಷಿಯಾಗಿದ್ದಾರೆ. ನಾನು ಈ ಮೊದಲೇ ತಿಳಿಸಿದಂತೆ ಪ್ರತಿಯೊಬ್ಬ ವಚನಕಾರನ ಅಂಕಿತವು ಅವನ ಜಾತಿ-ವೃತ್ತಿಗಳನ್ನು ಸೂಚಿಸುತ್ತಲೇ ಅವನ ಗುರುತನ್ನು ಆ ಬೃಹತ್ ಚಳವಳಿಯಲ್ಲಿ ಸ್ಥಾಯಿಯಾಗಿಸುತ್ತದೆ. ಚಳವಳಿಯ ಅಡಿಗೆ ಬಂದ ಆಯಾ ಜಾತಿಯ ಎಲ್ಲ ಜನರೂ ಚಳವಳಿಯಲ್ಲಿ ಪಾಲ್ಗೊಂಡರೋ ಇಲ್ಲವೋ ಎಂಬುದು ಅಸ್ಪಷ್ಟ. ಹಾಗೆ ಎಲ್ಲರೂ ಪಾಲ್ಗೊಂಡಿದ್ದರೂ ತಂತಮ್ಮ ಗುರುತನ್ನು ವಚನಗಳ ಮೂಲಕ ದಾಖಲಿಸುವ ಸಾಮರ್ಥ್ಯ, ಸಾಧ್ಯತೆಗಳನ್ನು ಎಲ್ಲರಿಂದಲೂ ಅಪೇಕ್ಷಿಸುವುದೂ ತಪ್ಪು. ಅಷ್ಟಕ್ಕೂ ಅಳಿದುಳಿದು ನಮಗಿಂದು ಸಿಕ್ಕಿರುವ ವಚನ ಸಾಹಿತ್ಯವೂ ಅತ್ಯಲ್ಪ. ಆದರೆ ಶರಣ ಚಳವಳಿಯು ನಿರೀಕ್ಷಿತ ಯಶಸ್ಸನ್ನು ಸಾಧಿಸದೇ ಹೋದುದೂ ಮತ್ತು ಚಳವಳಿಯ ಬಿಸಿ ತಟ್ಟಿದ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಬೇರುಗಳನ್ನು ಸ್ಥಿರಪಡಿಸಿಕೊಳ್ಳಲು ಚಳವಳಿಯ ನಂತರ ಮತ್ತೆ ತಮ್ಮ ಕಾರ್ಯಚಟುವಟಿಕೆಯನ್ನು ವ್ಯಾಪಕವಾಗಿ ನಡೆಸಿದುದೂ ಈ ಜಾತಿ ಮತ್ತು ವರ್ಗ ವ್ಯವಸ್ಥೆಗಳು ಶಾಶ್ವತವಾಗಿ ಉಳಿದುಬರಲು ಸಹಾಯಕವಾಯಿತು.

ರಾಜಶೇಖರ ರಾಮಣ್ಣ ಬಲ್ಲಪತ್ರಿ
೬೫೩, ೧೨ನೇ 'ಬಿ' ಮುಖ್ಯರಸ್ತೆ, ಇ.ಡಬ್ಲ್ಯೂ.ಎಸ್, ೨ನೇ ಹಂತ
ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪



ಪುಟ : ೧೩೩ ಬೆಲೆ : ರೂ. ೧೦೦

ಹಿಂದುತ್ವದ ತತ್ವಜ್ಞಾನ, ಸಂಸ್ಕೃತಿ ಮತ್ತು ರಾಜಕೀಯ ಅರ್ಥವ್ಯವಸ್ಥೆಯ ವಿಶ್ಲೇಷಣೆಯನ್ನು ಒಳಗೊಂಡಿರುವ ಕಾಂಚ ಐಲಯ್ಯನವರ 'ನಾನೇಕೆ ಹಿಂದೂ ಅಲ್ಲ' ಕೃತಿ ಕೆಲವು ವೈಫಲ್ಯಗಳಿಂದ ಕೂಡಿದ್ದರೂ ಆಳವಾದ ಅಧ್ಯಯನ, ಒಳನೋಟಗಳಿಂದ ಕೂಡಿದ ಕುಶಾಗ್ರಮತಿ ವಿಮರ್ಶೆಯ ಒಂದು ಪುಸ್ತಕ. ಮೊದಲ ಕೆಲವು ಅಧ್ಯಾಯಗಳಲ್ಲಿ ವಿಮರ್ಶಿಸಿರುವ ಬಾಲ್ಯ, ಮದುವೆ, ಮಾರುಕಟ್ಟೆ ವ್ಯವಸ್ಥೆ, ಸಾಮಾಜಿಕ ಸಂಬಂಧಗಳು ನಮಗೆ ಅಷ್ಟೇನೂ ಹೊಸದನ್ನು ಹೇಳುವುದಿಲ್ಲವಾದರೂ ರಾಷ್ಟ್ರದಲ್ಲಿ ಪ್ರಸ್ತುತ ಕಾಣಿಸಿಕೊಂಡಿರುವ ರಾಜಕೀಯ (ಮೇಲ್ಜಾತಿ - ಕೆಳಜಾತಿ), ಸೌಹಾರ್ದತೆ, ಪರಸ್ಪರ ಧರ್ಮ ನಿರಪೇಕ್ಷ ಸಂಬಂಧಗಳನ್ನು ವೈವಿಧ್ಯಮಯವಾಗಿ ಚರ್ಚೆಗಿಟ್ಟು ವಿಶ್ಲೇಷಿಸಿರುವುದು ವಿಶೇಷವಾಗಿದೆ ಹಾಗೂ ಬಂಡವಾಳವಾದಿ ಸಂಸ್ಕೃತಿಯ ಜಾತಿ ಆಧಾರಿತ ಮೇಲ್ವರ್ಗ (ಮೇಲ್ಜಾತಿ)ಗಳು ತಮ್ಮ ಏಕಸ್ವಾಮ್ಯಕ್ಕೆ ಗಂಡಾಂತರ ಬರಲಿರುವ ಭಯದಿಂದಾಗಿ ಯಜಮಾನ ವ್ಯವಸ್ಥೆ ಯಲ್ಲಿ ಬದಲಾವಣೆಯಾಗುತ್ತಿರುವುದನ್ನು ಇಲ್ಲಿ ದಾಖಲಿಸಿದ್ದಾರೆ. 'ದಲಿತ ಬಹುಜನ' ಸಂಸ್ಕೃತಿ ಮತ್ತು ಉತ್ಪಾದನಾ ಸಂಬಂಧಗಳಿಗೆ ಸಂಬಂಧಿತವಾದ ವಿಶ್ಲೇಷಣೆ ಹೊಸದಾಗಿ ರೂಪಿತವಾಗಿರುವ ದಲಿತ-ಬಹುಜನ ರಾಜಕಾರಣ ಕುರಿತು ಮಾಡಿರುವ ವಿಸ್ತೃತ ರಾಜಕೀಯ ವ್ಯಾಖ್ಯಾನ ಈ ಕೃತಿಯ ಮೂಲಕಾಳಜಿ ಎನ್ನಬಹುದಾದರೂ ಐಲಯ್ಯನವರು ಸೂಚಿಸಿರುವ ದಲಿತ-ಬಹುಜನರ ಚಳುವಳಿ ಭವಿಷ್ಯದಲ್ಲಿ ಬಲಗೊಳ್ಳಲೂಬಹುದು ಅಥವಾ ತಾತ್ಕಾಲಿಕವಾಗಿ ಸೋಲಲೂಬಹುದು. ಏಕೆಂದರೆ, ಹಿಂದೂ ಧರ್ಮ ನಿಂತಿರುವುದು ಒಡೆದ ಜಾತಿಗಳ ಸಾವಿರಾರು ಮಿಶ್ರತಳಿಗಳಿಂದಲೇ. ಹಾಗೆ ನೋಡಿದರೆ ಹಿಂದೂ ಧರ್ಮದ ಆತ್ಮವಿರುವುದೇ ವರ್ಣಾಶ್ರಮ ಮತ್ತು ಜಾತಿಗಳಲ್ಲಿ. ಐಲಯ್ಯನವರು ದಲಿತ - ಬಹುಜನ ರಾಜಕೀಯಕ್ಕೆ ಅಂತಿಮ ಭವಿಷ್ಯವಿದೆ ಎನ್ನುವುದು ಈ ಕೃತಿಯ ಇಂಗಿತವಾದರೂ ಅದಕ್ಕೆ ಪೋಷಕವಾದ ಬೆಳವಣಿಗೆ ಇನ್ನೂ ಪಕ್ವವಾಗಿಲ್ಲ ಎನ್ನಬಹುದು.

ಮೂಲವಾಗಿ ದಕ್ಷಿಣ ಏಷ್ಯಾ ಉಪಖಂಡದಿಂದ ಬಂದ ಅಸಂಖ್ಯ ಆಕ್ರಮಣಕೋರರು ಸಿಂಧು ನದಿಯ ಬಯಲಲ್ಲಿ ವಾಸಿಸಲು ಪ್ರಾರಂಭಿಸಿದಾಗ ಸೃಷ್ಟಿಯಾದ ಭೌಗೋಳಿಕತೆಯ ಹಿನ್ನಲೆಯುಳ್ಳ ಪದವೇ 'ಹಿಂದೂ' ಪದ. ಮಧ್ಯಕಾಲದಲ್ಲಿ ವಿಶ್ವದ ಮುಸಲ್ಮಾನ ಪ್ರಪಂಚವು ಇಲ್ಲಿಯವರನ್ನು ಹಿಂದುಸ್ಥಾನಿಗಳೆಂದೂ, ಈ ಭಾಗವನ್ನು ಹಿಂದೂಸ್ಥಾನವೆಂದೂ ಕರೆದರು. ತೀರ ಇತ್ತೀಚೆಗೆ ಬ್ರಿಟಿಷರ ಕಾಲದಲ್ಲಿ ಹಿಂದೂ ಎಂಬುದು ಒಂದು ಧರ್ಮವನ್ನು ಉಲ್ಲೇಖಿಸುವ ಪದವಾಗಿ ಬಳಕೆಗೆ ಬಂದಿತು. ಇವರೆಲ್ಲರಿಗಿಂತ ಮುಂಚೆಯೇ ಸಿಂಧೂ ಬಯಲಲ್ಲಿ ಆದಿ ದ್ರಾವಿಡ ಸಂಸ್ಕೃತಿ ಇದ್ದು ಅದನ್ನು ಕಾಲಾಂತರದಲ್ಲಿ ದಕ್ಷಿಣಕ್ಕೆ ತಳ್ಳಲ್ಪಟ್ಟಿತು.

ಹಿಂದೂ ಧರ್ಮದಲ್ಲಿರುವುದು ಸಂಪ್ರದಾಯಶೀಲತೆಯಲ್ಲ; ಅಲ್ಲಿರುವುದು ಕೇವಲ ಸಂಪ್ರದಾಯ ವೈವಿಧ್ಯತೆ; ಅಂದರೆ ಅಸಂಖ್ಯ ದೇವರು-ದೇವತೆಗಳು, ಕುಟುಂಬಕ್ಕೊಂದು ಹೆಸರು (ಜಾತಿಯನ್ನು ತಿಳಿದುಕೊಳ್ಳುವ ಸಲುವಾಗಿ) ಜಾತಿಭೇದ. ಇದನ್ನು ದೃಢೀಕರಿಸುವಂತೆ ವಿಶ್ವ ಹಿಂದೂ ಪರಿಷತ್ತು ತಾನು ನಂಬಿಕೆ ಇಟ್ಟಿರುವುದು ಸನಾತನ ಧರ್ಮಕ್ಕೆ ಸೇರಿದ ಬ್ರಾಹ್ಮಣ ಧರ್ಮವೇ ಹೊರತು ಹಿಂದೂ ಧರ್ಮವಲ್ಲ ಎಂದು ಸ್ಪಷ್ಟವಾಗಿಯೇ ಹೇಳಿಕೊಳ್ಳುತ್ತದೆ. ಚುನಾವಣೆಗೆ ಒಂದು ಬ್ಯಾನರ್ ಬರೆದರೂ ಅದರಲ್ಲಿ ಹೋಮ, ಧೂಮ, ವಿಷ್ಣು ಚಕ್ರ, ಬಿಲ್ಲು ಬಾಣಗಳೇ ಮೆರೆಯುತ್ತವೆ. ಹಾಗಾದರೆ ದಲಿತ ಬಹು ಜನರು ಹಿಂದೂ ಧರ್ಮದಲ್ಲಿಯೇ ಉಳಿದುಕೊಳ್ಳಬೇಕೆ ? ಹಿಂದೂ ಧರ್ಮಕ್ಕೆ ಒಂದು ಸುಸಂಸ್ಕೃತ ಧರ್ಮ ಎಂದು ಹೇಳಿಕೊಳ್ಳಲು ಅರ್ಹತೆ ಇದೆಯೆ ? ಈ ಕಾರಣದಿಂದಲೇ ಐಲಯ್ಯ 'ನಾನೇಕೆ ಹಿಂದೂ ಅಲ್ಲ' ಎಂದಿರುವುದು. ಹಿಂದೂ ಧರ್ಮದ ಮಹಾಗ್ರಂಥಗಳೆಲ್ಲ ಶೂದ್ರ ವಿಮರ್ಶೆಯ ಕೆಳಗೆ ಪುನರ್ ಪರಿಶೀಲನೆಯಾಗುವುದು ಅತ್ಯಗತ್ಯವಾದ ಕೆಲಸವಾಗಿದೆ.

ಐಲಯ್ಯನವರ ಈ ಕೃತಿ ಕೆಲವು ಕಡೆ ಗಂಭೀರ ಚಿಂತನೆಗಳನ್ನು ಒಳಗೊಂಡಿದೆ. ವಿಜ್ಞಾನ-ತಂತ್ರಜ್ಞಾನ ಕೇಂದ್ರಗಳು, ದಲಿತ ಬಹುಜನ ಮತ್ತು ಮೇಲ್ಜಾತಿ ಮಾರುಕಟ್ಟೆ ವ್ಯವಸ್ಥೆ, ಮಾರ್ಕ್ಸ್‌ವಾದದಂತಹ ಕ್ರಾಂತಿಕಾರಿ ತತ್ವಗಳೂ ಸಹ ಬ್ರಾಹ್ಮಣ ಮೇಲ್ಜಾತಿ ಕೈಗಳ ವಶವಾಗಿರುವ ವಿಶ್ಲೇಷಣೆ, ನವಕ್ಷತ್ರಿಯರು ಹಿಂದುತ್ವದೊಂದಿಗೆ ಮಾಡಿಕೊಂಡಿರುವ ಒಪ್ಪಂದ, ಲಿಂಗಾಧಾರಿತ ವಿಭಜನೆ, ಜಾತಿ ಆಧಾರಿತ ವಿಭಜನೆ, ಜಾತಿ ಪದ್ಧತಿ ಇತ್ಯಾದಿ ಮಜಲುಗಳನ್ನು ಆಳವಾಗಿ ತಮ್ಮ ಒಳನೋಟದಿಂದ ವಿಶ್ಲೇಷಣೆ ಮಾಡಿದ್ದಾರೆ. ಬ್ರಾಹ್ಮಣ - ಬನಿಯಾರದು ಅನುತ್ಪಾದಕ ಹಾಗೂ ವಿಧಿ-ವಿಧಾನಗಳಾಧಾರಿತ ಜೀವನವಾದರೆ ದಲಿತ ಬಹುಜನರದ್ದು ವಿಧಿ-ವಿಧಾನಗಳಾಧಾರಿತ ವಲ್ಲದ ಉತ್ಪಾದಕ ಶ್ರಮಿಕ ಜೀವನ. ಹಿಂದೂ ಮಾರುಕಟ್ಟೆಯ ಅಡಿಪಾಯ ಸುಳ್ಳುಗಳ ಸರಮಾಲೆಯಾದರೆ ಹಿಂದೂಯೇತರ ಮಾರುಕಟ್ಟೆ ಯಾವುದೇ ಸುಳ್ಳಿನ ಮಂಡನೆಯನ್ನು ಗ್ರಾಹಕರ ಮುಂದಿಡುವುದಿಲ್ಲ.

ಗ್ರಾಮೀಣ ಪ್ರದೇಶಗಳಲ್ಲಿ ಮೂರು ವಿಭಾಗಗಳನ್ನು ಕಾಣಬಹುದು. ರಾಜಕೀಯ ಆರ್ಥಿಕವಾಗಿ ಒಂದು ಗುಂಪು (ರೆಡ್ಡಿ, ಗೌಡ, ಕಾಪ, ಲಿಂಗಾಯಿತ ಇತ್ಯಾದಿ) ಬಲಾಢ್ಯವಾಗುತ್ತಾ ಸಾಗುತ್ತಿರುವ ಇನ್ನೊಂದು ಗುಂಪು (ಬಡಿಗ, ಅಗಸ, ಕಂಬಾರ ಇತ್ಯಾದಿ). ಎರಡನೆಯದು ಉತ್ಪಾದಕ ಜಾತಿಗಳ ಜ್ಯಾಮಿತಿಯಲ್ಲೇ ಇದ್ದರೂ ಆರ್ಥಿಕವಾಗಿ ಹಿಂದಕ್ಕೆ ಸಾಗುತ್ತಿದೆ. ಇವುಗಳ ನಡುವೆ ಅಸ್ಪೃಶ್ಯರ ಗುಂಪು ಆರ್ಥಿಕ ಮತ್ತು ಸಾಮಾಜಿಕವಾಗಿ ಏಳಲಾರದಷ್ಟು ಹಿನ್ನಡೆಯಲ್ಲಿ ಸಿಲುಕಿಕೊಂಡಿದೆ. ಈ ಗುಂಪುಗಳ ನಡುವೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘರ್ಷ ಮತ್ತು ಭಿನ್ನಾಭಿಪ್ರಾಯಗಳಿವೆ. ಇವರನ್ನೆಲ್ಲ ಒಟ್ಟುಗೂಡಿಸಿ ದಲಿತ - ಬಹುಜನರೆಂದು ಕರೆದಿರುವ ಐಲಯ್ಯನವರು ಪ್ರಸ್ತುತ ಉತ್ತರ ಪ್ರದೇಶದಲ್ಲಿ ದಲಿತ - ಬಹುಜನರ ರಾಜಕೀಯ ಬೆಳವಣಿಗೆಯನ್ನು ಬೆರಳುಮಾಡಿ ತೋರಿಸಿ ಇದು ಮುಂದಿನ ದಿನಗಳಲ್ಲಿ ಒಂದು ದೊಡ್ಡ ರಾಜಕೀಯ ಶಕ್ತಿಯಾಗಿ ಹೊರಬರಬೇಕೆಂಬುದಾಗಿ ಆಗ್ರಹಪಡಿಸಿದ್ದಾರೆ. ದಲಿತ ಬಹುಜನರಿಗಾಗಿ ಪರ್ಯಾಯ ನಿರ್ವಚನವನ್ನು ರೂಪಿಸುವುದು ಅತ್ಯಂತ ಅಪೇಕ್ಷಣೀಯ ಹಾಗೂ ಅವಶ್ಯಕ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಅದಕ್ಕೆ ತನ್ನದೇ ಆದ ವೈಫಲ್ಯಗಳಿದ್ದು ಅದರ ದಾರಿ ಇನ್ನೂ ಬಹಳ ದೂರವೇ ಇದೆ ಎನ್ನುವುದು ಸತ್ಯ.

ಮೇಲ್ಜಾತಿಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸ್ಥಿರವಾಗಿ ಬೆಳದುನಿಂತಿವೆ. ಆರ್ಯ (ಬ್ರಾಹ್ಮಣ) ಸಂಸ್ಕೃತಿ ಸಾವಿರಾರು ವರ್ಷಗಳಿಂದ ದಲಿತ ಬಹುಜನರ ಸಂಸ್ಕೃತಿಯನ್ನು ಅಳಿಸಿ ಹಾಕಲು ಹುನ್ನಾರಗಳನ್ನು ನಡೆಸುತ್ತಲೇ ಬಂದಿದ್ದರೂ ಬ್ರಾಹ್ಮಣ ಸಂಸ್ಕೃತಿಯ ಎದುರು ದ್ರಾವಿಡ/ಶೂದ್ರ ಸಂಸ್ಕೃತಿ ಉಳಿದುಕೊಂಡು ಬಂದಿರುವುದು ಗಮನಾರ್ಹ. ಸೈದ್ಧಾಂತಿಕ, ಸಾಂಸ್ಕೃತಿಕ ಕತೆ, ಸ್ವರೂಪಗಳ ಮಹತ್ವ ಹೊಂದಿರುವ ಅಸಂಖ್ಯ ಗ್ರಾಮೀಣ ದೇವತೆಗಳು ತಮ್ಮ ಪ್ರತ್ಯೇಕತೆಯನ್ನು ಹೊಂದಿದ್ದು ಮೇಲ್ಜಾತಿಗಳ ಪ್ರಾಬಲ್ಯವನ್ನು ತಿರಸ್ಕರಿಸುವ ಸಾಮಾಜಿಕ ಹಿನ್ನೆಲೆಯನ್ನು ಹೊಂದಿವೆ. ಈ ವಿಚಾರದಲ್ಲಿ ಇನ್ನೂ ಹೆಚ್ಚಿನ ಅಧ್ಯಯನ, ವಿಶ್ಲೇಷಣೆಗಳು ನಡೆಯಬೇಕಾಗಿದೆ.

ದೇಶದ ಉನ್ನತ ಸ್ಥಾನದಲ್ಲಿರುವವರು ರಾಷ್ಟ್ರಪತಿಯೇ ಆಗಲಿ, ಎಂತಹ ಪಂಡಿತನೇ ಆಗಿರಲಿ ಬ್ರಾಹ್ಮಣನಲ್ಲದ ಪಕ್ಷದಲ್ಲಿ ಅವನು ಸಾರ್ವಜನಿಕವಾಗಿ ಬ್ರಾಹ್ಮಣರ ಕಾಲು ತೊಳೆಯಲು ಹಿಂದೆಮುಂದೆ ನೋಡುವುದಿಲ್ಲ. ಆ ವ್ಯಕ್ತಿಯಿಂದ ಕಾಲು ತೊಳೆಸಿಕೊಳ್ಳಲು ಬ್ರಾಹ್ಮಣರು ಹಿಂಜರಿಯುವುದಿಲ್ಲ ಎನ್ನುವುದನ್ನು ಚರಿತ್ರೆ ನಮಗೆ ತೋರಿಸಿದೆ. ಇದು ಈ ಧರ್ಮದ ವೈಶಿಷ್ಟ್ಯ. ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳಾದರೂ ಅಸ್ಪೃಶ್ಯತೆ, ಅನಾಗರಿಕತೆ, ಜಾತಿ ಆಧಾರಿತ ಗುಡಿಗಳು, ಬೀದಿಗಳು ಕಾಲೋನಿಗಳು ಎಲ್ಲವೂ ಹಾಗೇ ಉಳಿದುಕೊಂಡು ಇನ್ನಷ್ಟು ಗಟ್ಟಿಯಾಗಿ ಬೆಳೆಯುತ್ತಿವೆ. ಜಾತಿಯ ವರ್ಗೀಕೃತ ಶ್ರೇಣಿಯಲ್ಲಿ ಪ್ರತಿಯೊಬ್ಬನೂ ತನ್ನ ಮೇಲಿರುವವರಿಗೆ ಹತ್ತಿರವಾದವನಂತೆ, ಅವರಿಗೆ ಸರಿಸಮಾನ ಎನ್ನುವ ಭ್ರಮೆಯಿಂದಲೇ ಓಲಾಡುತ್ತಿರುವುದು ಸುಳ್ಳಲ್ಲ. ಅತ್ಯಂತ ಕೆಳಮಟ್ಟದಲ್ಲಿರುವ ಅಸ್ಪೃಶ್ಯರಲ್ಲೂ ಎಡಬಲ ಎನ್ನುವ ಭೇದ ಭಾವನೆಗಳು ಹುಟ್ಟಿಕೊಂಡು ಸಂಘರ್ಷದಲ್ಲಿ ತೊಡಗಿರುವುದನ್ನು ನಾವು ನೋಡುತ್ತಿದ್ದೇವೆ. ಅಂಬೇಡ್ಕರ್ ಅವರ ಶ್ರಮದಿಂದ ರಾಷ್ಟ್ರೀಯ ಮುಖ್ಯವಾಹಿನಿಯಲ್ಲಿ ರಾಜಕೀಯ ಮತ್ತು ಸರಕಾರದ ಕೆಲಸಗಳಲ್ಲಿ ಸೇರಿಕೊಂಡಿರುವ ಒಂದಿಷ್ಟು ದಲಿತರು ಆ ಸಮುದಾಯಕ್ಕೆ ಪ್ರಯೋಜನವೇನೂ ಆಗಿಲ್ಲ. ಹಳ್ಳಿಗಳಿಂದ ನಗರಗಳಿಗೆ ಬಂದು ಸೇರಿಕೊಂಡಿರುವ ಇವರ ಬದುಕು ಸಾಮಾಜಿಕವಾಗಿ ತೊಂದರೆಯಲ್ಲಿ ಸಿಲುಕಿಕೊಂಡಿದೆ. ಇವರು ತಮ್ಮ ತೊಂದರೆಗಳನ್ನು ಅತ್ತ ಹೇಳಿಕೊಳ್ಳಲೂ ಆಗದೆ ಇತ್ತ ನುಂಗಿಕೊಳ್ಳಲೂ ಆಗದೆ ಬ್ರಾಹ್ಮಣರ ದೇವರುಗಳನ್ನು ಪೂಜಿಸುತ್ತಾ ಧನ್ಯರಾಗಲು ಶ್ರಮಿಸುತ್ತಿದ್ದಾರೆ.

ಒಟ್ಟಾರೆಯಾಗಿ ಹಿಂದೂ ಸಂಸ್ಕೃತಿಯ ಒಳಮಜಲುಗಳನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳ ಬಯಸುವವರಿಗೆ ಈ ಕೃತಿ ಸಹಾಯಕವಾಗುತ್ತದೆ. ಮಂಗ್ಳೂರ ವಿಜಯ ಅವರ ಎರಡು ದಶಕಗಳ ಸಾಹಿತ್ಯದ ಅನುಭವ ಈ ಪುಸ್ತಕದ ಕನ್ನಡ ಅನುವಾದವನ್ನು ಗಟ್ಟಿಯಾಗಿಸಿದೆ.

ಎಂ. ವೆಂಕಟಸ್ವಾಮಿ
ನಂ. ೫೭ 'ಎ', 'ಸಾಯಿ ಲೋಟಸ್ ಲೇಔಟ್', ಚನ್ನಸಂದ್ರ ವಿಲೇಜ್ ಎದುರು
ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

# ಶಂಕರಾಚಾರ್ಯರ ಒಗಟುಗಳು

ಬಿ. ವಿ. ವೀರಭದ್ರಪ್ಪ

**ಭಾ**ರತೀಯ ದಾರ್ಶನಿಕ ಇತಿಹಾಸದಲ್ಲಿ ಶಂಕರಾಚಾರ್ಯರಿಗೆ (ಕ್ರಿ. ಶ. ೭೮೮-೮೨೦) ವಿಶಿಷ್ಟ ಸ್ಥಾನವಿದೆ. ನಶಿಸಿಹೋಗುತ್ತಿದ್ದ ಹಿಂದು ಧರ್ಮವನ್ನು ಪುನರುತ್ಥಾನ ಮಾಡಿದ ಧೀರ ಸನ್ಯಾಸಿ ಎಂದು ಅವರನ್ನು ಸ್ತುತಿಸಲಾಗುತ್ತಿದೆ. ಪ್ರಸ್ಥಾನತ್ರಯವೆಂದು ಕರೆಯಲ್ಪಡುವ ಬ್ರಹ್ಮಸೂತ್ರಗಳು, ಉಪನಿಷತ್ತುಗಳು ಮತ್ತು ಗೀತೆಯನ್ನು ಕುರಿತ ಅವರ ಭಾಷ್ಯಗಳು ಅವರ ಮೇರುಕೃತಿಗಳಾಗಿವೆ. ಶಂಕರರು ಒಟ್ಟು ೨೦೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ ಎಂದು ಅವರ ಜೀವನ ಚರಿತ್ರೆಗಳು ಸಾರುತ್ತವೆ. ಅವುಗಳಲ್ಲಿ ಕೆಲವು ಶಂಕರರಿಂದ ರಚಿತವಾದ ಬಗ್ಗೆ ಸಂದೇಹಗಳಿದ್ದರೂ ಉಳಿದವು ನಿಸ್ಸಂದೇಹವಾಗಿ ಶಂಕರರಿಂದಲೇ ರಚಿತವಾದುವೆಂದು ಶಂಕರಮಠಗಳ ಪರಂಪರೆಯ ವಿದ್ವಾಂಸರೇ ಅಭಿಪ್ರಾಯಪಡುತ್ತಾರೆ. 'ಮನೀಷಾ ಪಂಚಕ' ಎಂಬ ಕೃತಿಯು ನಿಸ್ಸಂದೇಹವಾಗಿ ಶಂಕರಾಚಾರ್ಯರು ರಚಿಸಿದುದೇ ಎಂದು ಶೃಂಗೇರಿ ಪೀಠ ಪ್ರಕಟಿಸಿರುವ ಮಾಧವೀಯ 'ಶಂಕರ ವಿಜಯ'ದಿಂದ ತಿಳಿದುಬರುತ್ತದೆ. 'ಮನೀಷಾ ಪಂಚಕ' ಸ್ತೋತ್ರವನ್ನು ರಚಿಸಿದ ಸಂದರ್ಭವು ಗಮನಾರ್ಹವಾಗಿದೆ.

ಪರಶಿವನೇ ತನ್ನ ಮಾಯೆಯಿಂದ ಕೇರಳದ ಒಂದು ನಂಬೂದಿರಿ ಬ್ರಾಹ್ಮಣ ಕುಟುಂಬದಲ್ಲಿ ಶಂಕರನಾಗಿ ಜನಿಸಿದನೆಂಬ ನಂಬಿಕೆ ಶಂಕರರ ಅನುಯಾಯಿಗಳಲ್ಲಿದೆ. ಅವರು ತಮ್ಮ ಐದನೆಯ ವಯಸ್ಸಿನಲ್ಲಿಯೇ ನಾಲ್ಕು ವೇದಗಳನ್ನು ಮತ್ತು ಷಡಂಗಗಳನ್ನು ಕಲಿತು ಪಂಡಿತರನ್ನು ಬೆರಗುಗೊಳಿಸಿದರೆಂದೂ, ಎಂಟನೇ ವಯಸ್ಸಿನಲ್ಲಿ ಸನ್ಯಾಸ ಸ್ವೀಕರಿಸಿದ ಶಂಕರರು ಬ್ರಹ್ಮಜ್ಞಾನಿಯಾದ ಗುರುವನ್ನು ಹುಡುಕುತ್ತಾ ಹೊರಟಾಗ ನರ್ಮದಾ ನದಿಯ ತೀರದ ಒಂದು ಗುಹೆಯಲ್ಲಿ ತಪಸ್ಸು ಮಾಡುತ್ತಾ ಕುಳಿತಿದ್ದ ಗೋವಿಂದ ಭಗವತ್ಪಾದರನ್ನು ಸಂಧಿಸಿದರೆಂದೂ ಹೇಳಲಾಗುತ್ತದೆ. ಪ್ರತಿಭಾವಂತನಾದ ಈ ಶಿಷ್ಯನ ಆಗಮನದಿಂದ ಹರ್ಷಿತರಾದ ಗೋವಿಂದ ಗುರುಗಳು ಶಂಕರರಿಗೆ ಮೂರು ವರ್ಷಗಳ ಕಾಲ ಅದ್ವೈತ ವೇದಾಂತವನ್ನು ಧಾರೆ ಎರೆದು ಅವರನ್ನು ಅದ್ವೈತ ಶಿಖಾಮಣಿಯನ್ನಾಗಿ ಮಾಡಿದರಂತೆ.

ಅನಂತರ ಶಂಕರರು ಕಾಶಿಯತ್ತ ಪ್ರಯಾಣ ಮಾಡಿದರು. ಅಲ್ಲಿ ಒಂದು ದಿನ ಗಂಗೆಯಲ್ಲಿ ಮಿಂದು ಹಿಂದಿರುಗುತ್ತಿದ್ದಾಗ ನಾಲ್ಕು ನಾಯಿಗಳ ಜೊತೆಗೆ ಒಬ್ಬ ಚಂಡಾಲ ಅವರಿಗೆ ಎದುರಾದ. ಆ ಚಂಡಾಲನು ಮತ್ತಾರೂ ಆಗಿರದೆ ಸಾಕ್ಷಾತ್ ಪರಮೇಶ್ವರನೇ ಚಂಡಾಲ ವೇಷಧಾರಿಯಾಗಿದ್ದನೆಂದೂ, ನಾಲ್ಕು ವೇದಗಳು ನಾಲ್ಕು ನಾಯಿಗಳಾಗಿ ರೂಪಾಂತರ ಹೊಂದಿದ್ದುವೆಂದೂ 'ಶಂಕರ ವಿಜಯ'ಗಳು ಸಾರುತ್ತವೆ. ಅಂದರೆ ಶಿವನಿಗೆ ಚಂಡಾಲವೇಷ ಅತ್ಯಂತ ಪ್ರಿಯವಾದುದಾಗಿರಬೇಕು ! ಆದರೆ ಸಾಕ್ಷಾತ್ ಪರಶಿವನೇ ಶಂಕರನಾಗಿ ಅವತರಿಸಿರುವಾಗ ಆತನಿಗೆ ಎದುರಾಗಿ ಮತ್ತೊಬ್ಬ ಪರಶಿವ ಎಲ್ಲಿಂದ ಬಂದನೋ ತಿಳಿಯದು ! ಆ ಚಂಡಾಲನನ್ನು ನೋಡಿ ಶಂಕರರು 'ದೂರ ಸರಿ', 'ದೂರ ಸರಿ', ಎಂದರಂತೆ. ಆಗ ಆ ಚಂಡಾಲ ಈ ರೀತಿ ಪ್ರಶ್ನಿಸಿದನಂತೆ :




೧. ಅನ್ನಮಯಾದನ್ನಮಯಮಥವಾ ಚೈತನ್ಯಮೇವ ಚೈತನ್ಯಾತ್ / ದ್ವಿಜವರ ದೂರೀಕರ್ತುಂ ವಾಂಛಸಿ ಕಿಂ ಬ್ರೂಹಿ ಗಚ್ಛಗಚ್ಛೇತಿ ॥

೨. ಕಿಂ ಗಂಗಾಂಬುನಿ ಬಿಂಬಿತೋಂಬುರಮಣೌ ಚಂಡಾಲವಾಟೀ ಪಯಃ
ಪೂರೇ ಚಾಂತರಮಸ್ತಿ ಕಾಂಚನಘಟೀ ಮೃತ್ಕುಂಭಯೋರ್ವಾಂಬರೇ ॥

೩. ಪ್ರತ್ಯಗ್ವಸ್ತುನಿ ನಿಸ್ತರಂಗ ಸಹಜಾನಂದಾವಬೋಧಾಂಬುಧೌ ।
ವಿಪ್ರೋಽಯಂ ಶ್ವಪಚೋಽಯಮಿತ್ಯಪಿ ಮಹಾನ್ ಕೋಽಯಂ ವಿಭೇದಭ್ರಮಃ ॥

"ಓ ದ್ವಿಜವರಾ, 'ದೂರ ಸರಿ, ದೂರ ಸರಿ' ಎಂದು ನೀನು ಅನ್ನಮಯ ಶರೀರವನ್ನು ದೂರಮಾಡಬೇಕೆಂದುಕೊಳ್ಳುತ್ತಿದ್ದೀಯೋ ಇಲ್ಲವೇ ಚೈತನ್ಯದಿಂದ ಚೈತನ್ಯವನ್ನು ದೂರ ಮಾಡಬೇಕೆಂದಿರುವೆಯೋ ? ಗಂಗಾಜಲದಲ್ಲಿ ಮತ್ತು ಚಂಡಾಲ ಕೇರಿಯ ನೀರಿನಲ್ಲಿ ಸೂರ್ಯಬಿಂಬ ಬೇರೆ ಬೇರೆಯಾಗಿರುತ್ತದೆಯೇ ? ಚಿನ್ನದ ಪಾತ್ರೆಯಲ್ಲಿ ಮತ್ತು ಮಣ್ಣಿನ ಮಡಿಕೆಯಲ್ಲಿ ಇರುವ ಖಾಲಿ-ಪ್ರದೇಶ ಬೇರೆ ಬೇರೆಯಾಗಿರುತ್ತದೆಯೇ ? ನಿಸ್ತರಂಗವೂ, ಸಹಜಾನಂದ ರೂಪವೂ, ಜ್ಞಾನ ಸಾಗರವೂ ಆದ ಪ್ರತ್ಯಗಾತ್ಮದಲ್ಲಿ ಇವನು ದ್ವಿಜ, ಇವನು ಹೊಲೆಯ ಎಂಬ ಭೇದ ಭಾವನೆ ನಿನಗೆ ಹೇಗೆ ಉಂಟಾಯಿತು ?"

ಈ ಪ್ರಶ್ನೆ ಶಂಕರರ ತಲೆಯನ್ನು ಗಿರಗಿರನೆ ತಿರುಗಿಸಿತಂತೆ. ಅಲ್ಲಿಯವರೆಗೆ ತಾನು ಬೋಧಿಸುತ್ತಿದ್ದ ಅದ್ವೈತ ತನಗೇ ಅರ್ಥವಾಗದಿರಲು ಆ ಪ್ರಶ್ನೆ ಅವರ ಮನಸ್ಸಿನ ಆಳವನ್ನು ತಟ್ಟಿತು. ಅದ್ವೈತ ಸಿದ್ಧಾಂತ ಬೋಧನೆಗೂ ವರ್ಣ ವ್ಯವಸ್ಥೆಯ ಆಚರಣೆಗೂ ಮಧ್ಯೆ ಇರುವ ವೈರುಧ್ಯ ಆಗ ಶಂಕರರಿಗೆ ಮನವರಿಕೆಯಾಗಿರಬೇಕು. ಕೂಡಲೇ ಅವರು ಚಂಡಾಲನ ಕಾಲ ಮೇಲೆ ಬಿದ್ದು 'ಮನೀಷಾ ಪಂಚಕ' ಎಂದು ಪ್ರಸಿದ್ಧವಾದ ಐದು ಶ್ಲೋಕಗಳನ್ನು ಹೇಳಿದರಂತೆ. ಅವುಗಳಿಗೆ ಪಾಠಾಂತರಗಳಿವೆ ಎಂದು ಹೇಳುತ್ತಾರೆ. ಅವುಗಳಲ್ಲಿ ಒಂದು ಪಾಠ ಹೀಗಿದೆ :

೧. ಜಾಗ್ರತ್ಸ್ವಪ್ನ ಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ
ಯಾ ಬ್ರಹ್ಮಾದಿ ಪಿಪೀಲಿಕಾಂತ ತನುಷು ಪ್ರೋತಾ ಜಗತ್ಸಾಕ್ಷಿಣೀ
ಸೈವಾಹಂ ನ ಚ ದೃಶ್ಯವಸ್ತ್ವಿತಿ ದೃಢಪ್ರತಿಜ್ಞಾಪಿ ಯಸ್ಯಾಸ್ತಿ ಚೇತ್
ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ ॥

೨. ಬ್ರಹ್ಮೈವಾಹಮಿದಂ ಜಗಚ್ಚ ಸಕಲಂ ಚಿನ್ಮಾತ್ರ ವಿಸ್ತಾರಿತಂ
ಸರ್ವಂಚೈತದವಿದ್ಯಯಾ ತ್ರಿಗುಣಯಾಽ ಶೇಷಂ ಮಯಾ ಕಲ್ಪಿತಂ
ಇತ್ಥಂ ಯಸ್ಯ ದೃಢಾ ಮತಿಃ ಸುಖತರೇ ವಿತ್ತೇಪರೇ ನಿರ್ಮಲೇ
ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ॥

೩. ಶಶ್ವನ್ನಶ್ವರಮೇವ ವಿಶ್ವಮಖಿಲಂ ನಿಶ್ಚಿತ್ಯ ವಾಚಾ ಗುರೋಃ
ನಿತ್ಯಂ ಬ್ರಹ್ಮ ನಿರಂತರಂ ವಿಮೃಶತಾ ನಿರ್ವ್ಯಾಜಶಾಂತಾತ್ಮನಾ
ಭೂತಂ ಭಾವಿ ಚ ದುಷ್ಕೃತಂ ಪ್ರದಹತಾ ಸಂವಿನ್ಮಯೇ ಪಾವಕೇ
ಪ್ರಾರಬ್ಧಾಯ ಸಮರ್ಪಿತಂ ಸ್ವವಪುರಿತ್ಯೇಷಾ ಮನೀಷಾ ಮಮ॥

೪. ಯಾ ತಿರ್ಯಙ್ನರ ದೇವತಾಭಿರಹಮಂತಃಸ್ಫುಟಾ ಗೃಹ್ಯತೇ
ಯದ್ಭಾಸಾ ಹೃದಯಾಕ್ಷ ದೇಹವಿಷಯಾ ಭಾಂತಿ ಸ್ವತೋಽ ಚೇತನಾಃ
ತಾಂ ಭಾಸ್ಯೈಃ ಪಿಹಿತಾರ್ಕ ಮಂಡಲನಿಭಾಂ ಸ್ಫೂರ್ತಿಂ ಸದಾ ಭಾವಯನ್
ಯೋಗೀ ನಿರ್ವೃತಮಾನಸೋ ಹಿ ಗುರುರಿತ್ಯೇಷಾ ಮನೀಷಾ ಮಮ॥

೫. ಯತ್ಸೌಖ್ಯಾಂಬುಧಿ ಲೇಶಲೇಶತ ಇಮೇ ಶಕ್ರಾದಯಾ ನಿರ್ವೃತಾಃ
ಯಚ್ಚಿತ್ತೇ ನಿತರಾಂ ಪ್ರಶಾಂತ ಕಲನೇ ಲಬ್ಧ್ವಾ ಮುನಿರ್ನಿರ್ವೃತಃ
ಯಸ್ಮಿನ್ನಿತ್ಯ ಸುಧಾಂಬುಧೌ ಗಲಿತಧೀರ್ಬ್ರಹ್ಮೈವ ನ ಬ್ರಹ್ಮವಿದ್
ಯಃ ಕಶ್ಚಿತ್ ಸ ಸುರೇಂದ್ರ ವಂದಿತಪದೋ ನೂನಂ ಮನೀಷಾ ಮಮ॥

"ಎಲ್ಲೆಲ್ಲೂ ವ್ಯಾಪಿಸಿರುವ ಚೈತನ್ಯ ಸ್ವರೂಪವನ್ನು ತಾನೇ ಎಂದು ಯಾರು ಭಾವಿಸುತ್ತಾನೋ ಅವನು ಚಂಡಾಲನಾದರೂ ದ್ವಿಜನಾದರೂ ಅವನೇ ನನ್ನ ಗುರು. ಈ ಜಗತ್ತೆಲ್ಲಾ ಚಿನ್ಮಾತ್ರದಿಂದ ವಿಸ್ತರಿಸುತ್ತದೆ ಎಂಬ ವಿಶ್ವಾಸವುಳ್ಳವನು ಚಂಡಾಲನಾದರೂ ದ್ವಿಜನಾದರೂ ನನಗೆ ಗುರು. ವಿಶ್ವ

ಅನಿತ್ಯ, ಬ್ರಹ್ಮ ಸತ್ಯ ಎಂದು ತಿಳಿದು ಚಿದಗ್ನಿಯಲ್ಲಿ ಈ ಶರೀರವನ್ನು ಹೋಮ ಮಾಡುವುದು ನನ್ನ ದೃಢ ನಿಶ್ಚಯವಾಗಿದೆ. ಅಹಂ ಎಂಬುದನ್ನು ಯಾರು ಅರಿತಿರುವನೋ ಅವನೇ ನನ್ನ ಗುರು. ಆನಂದ ಬ್ರಹ್ಮನಿಗೆ ದೇವೇಂದ್ರನಾದರೂ ನಮಸ್ಕರಿಸುತ್ತಾನೆ.''

ಶಂಕರ ದಿಗ್ವಿಜಯಗಳ ಪ್ರಕಾರ 'ಮನೀಷಾ ಪಂಚಕ'ವನ್ನು ರಚಿಸಿದ ನಂತರವೇ ಶಂಕರಾಚಾರ್ಯರು ಪ್ರಸ್ಥಾನ ತ್ರಯಗಳಿಗೆ ಭಾಷ್ಯಗಳನ್ನು ರಚಿಸಿದಂತೆ ತಿಳಿದುಬರುತ್ತದೆ. ಆ ಭಾಷ್ಯಗಳಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' - ಎಲ್ಲಾ ಬ್ರಹ್ಮನಿಂದಲೇ ಆವರಿಸಿದೆ, 'ಪ್ರಜ್ಞಾನ ಬ್ರಹ್ಮ' - ಶುದ್ಧ ಚೈತನ್ಯವೇ ಬ್ರಹ್ಮ, 'ಅಹಂ ಬ್ರಹ್ಮಾಸ್ಮಿ' - ನಾನು ಬ್ರಹ್ಮಸ್ವರೂಪಿ, 'ತತ್ತ್ವಮಸಿ' - ಅದು ನೀನೇ ಆಗಿದ್ದೀಯ, 'ಅಯಮಾತ್ಮಾ ಬ್ರಹ್ಮ' - ಈ ಆತ್ಮವೇ ಬ್ರಹ್ಮ, ಇತ್ಯಾದಿ ಉಪನಿಷತ್ ವಾಕ್ಯಗಳನ್ನು ಮೇಲಿಂದ ಮೇಲೆ ಉಲ್ಲೇಖಿಸುತ್ತಾ ತಮ್ಮ ಅದ್ವೈತ ಸರಣಿಯನ್ನು ಮುಂದುವರಿಸುತ್ತಾರೆ. ಜೊತೆಗೆ ವಸಿಷ್ಠ ಸ್ಮೃತಿ, ಮನುಸ್ಮೃತಿ ಮತ್ತು ಗೌತಮ ಸ್ಮೃತಿಗಳಿಂದಲೂ ಉಲ್ಲೇಖ ಮಾಡುತ್ತಾರೆ. ''ಶೂದ್ರನಿಗೆ ಜ್ಞಾನದ ಹಕ್ಕು ಇಲ್ಲವೆನ್ನಲು ಕಾರಣವಿದೆ. ವೇದಗಳನ್ನು ಕೇಳುವುದನ್ನು, ಪಠನ ಮಾಡುವುದನ್ನು ಮತ್ತು ಅರ್ಥ ಮಾಡಿಕೊಳ್ಳುವುದನ್ನು ಸ್ಮೃತಿಗಳು ಶೂದ್ರನಿಗೆ ನಿಷೇಧಿಸಿವೆ. ಅಷ್ಟೇ ಅಲ್ಲ, ಶೂದ್ರನು ವೇದಗಳನ್ನು ಉಚ್ಚರಿಸಿದರೆ ಅವನ ನಾಲಗೆಯನ್ನು ಕತ್ತರಿಸಬೇಕು. ಆದ್ದರಿಂದ ವೇದಾರ್ಥವನ್ನು ಗ್ರಹಿಸುವುದು ಮತ್ತು ಆ ಪ್ರಕಾರ ಆಚರಿಸುವುದು ಅವನಿಗೆ ನಿಷಿದ್ಧ''. - ಇವು ಬ್ರಹ್ಮಸೂತ್ರಕ್ಕೆ (೧.೩.೩೮) ಭಾಷ್ಯ ಬರೆಯುತ್ತ ಸ್ವತಃ ಶಂಕರರೇ ಹೇಳಿದ ಮಾತುಗಳು.

ಶಂಕರರು ಚಂಡಾಲನನ್ನು ತಮ್ಮ ಗುರುವೆಂದು ಕರೆದುದನ್ನು ಮತ್ತು ತಾವು ಪ್ರತಿಪಾದಿಸುತ್ತಿರುವ ಅದ್ವೈತ ಸಿದ್ಧಾಂತವನ್ನು ಆಚರಣೆಯಲ್ಲಿ ತರುವುದನ್ನು ಮರೆತು ವರ್ಣವ್ಯವಸ್ಥೆಯನ್ನು ಪುನರುದ್ಧರಿಸಲು ಕಂಕಣಬದ್ಧರಾಗುತ್ತಾರೆ. ಭರತ ಭೂಮಿಯನ್ನು ನಾಲ್ಕು ಭಾಗವಾಗಿ ವಿಭಾಗಿಸಿ ಪ್ರತಿಯೊಂದು ಭಾಗಕ್ಕೂ ಒಂದೊಂದು ಪೀಠವನ್ನು ಸ್ಥಾಪಿಸಿ, ಒಂದೊಂದು ಪೀಠಕ್ಕೆ ಒಬ್ಬೊಬ್ಬ ಆಚಾರ್ಯರನ್ನು ನೇಮಿಸುತ್ತಾರೆ. ಅವರವರ ವಿಭಾಗಗಳಲ್ಲಿ ಅವರು ವರ್ಣಾಶ್ರಮಗಳ ಆಚರಣೆಗಳನ್ನು ಸಂರಕ್ಷಿಸಲು ಏರ್ಪಾಟು ಮಾಡುತ್ತಾರೆ. ಈ ಕಟ್ಟುಪಾಡನ್ನೇ 'ಮಹಾನುಶಾಸನ' ಎಂದು ಕರೆದಿದ್ದಾರೆ. ೨೬ ಶ್ಲೋಕಗಳುಳ್ಳ ಆ 'ಮಹಾನುಶಾಸನ' ಕೃತಿಯಲ್ಲಿ ಈ ಕೆಳಗಿನ ಅಂಶಗಳು ಗಮನಾರ್ಹವಾಗಿವೆ :

೧. ವರ್ಣಾಶ್ರಮಾ ಸದಾಚಾರಾ ಅಸ್ಮಾಭಿರ್ಯೇ ಪ್ರಸಾದಿತಾಃ
ರಕ್ಷಣೀಯಾಸ್ತು ಏವೈತೇ ಸ್ವೇ ಸ್ವೇ ಭಾಗೇ ಯಥಾ ವಿಧಿ ॥೫॥

೨. ಸುಧನ್ವಾ ಹಿ ಮಹಾರಾಜಸ್ತದನ್ಯೇ ಚ ನರೇಶ್ವರಾಃ
ಧರ್ಮಪಾರಂಪರಾಮೇತಾಂ ಪಾಲಯಂತು ನಿರಂತರಮ್ ॥೧೭॥

೩. ಚಾತುರ್ವರ್ಣ್ಯಂ ಯಥಾ ಯೋಗ್ಯಂ ವಾಙ್ಮನಃ ಕಾರ್ಯಕರ್ಮಭಿಃ
ಗುರೋಃ ಪೀಠಂ ಸಮರ್ಚೇತ ವಿಭಾಗಾನುಕ್ರಮೇಣ ವೈ ॥೧೮॥

೪. ಆಚಾರ್ಯಾಕ್ಷಿಪ್ತ ದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ
ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ॥೨೨॥

೫. ಧರ್ಮಸ್ಯ ಪದ್ಧತಿರ್ಹ್ಯೇಷಾ ಜಗತಃ ಸಿದ್ಧಿಹೇತವೇ
ಸರ್ವಂ ವರ್ಣಾಶ್ರಮಾಣಾಂ ಹಿ ಯಥಾಶಾಸ್ತ್ರಂ ವಿಧೀಯತೇ ॥೨೫॥

''ಆಯಾ ಮಠಾಚಾರ್ಯರು ತಮ್ಮ ತಮ್ಮ ಭಾಗಗಳಲ್ಲಿ ವರ್ಣಾಶ್ರಮ ಧರ್ಮವನ್ನು ಸರಿಯಾಗಿ ಸಂರಕ್ಷಿಸಬೇಕು. ರಾಜ ಸುಧನ್ವ ಮತ್ತು ಇತರ ರಾಜರು ಆ ಧರ್ಮ ರಕ್ಷಣೆಯಲ್ಲಿ ಪಾಲ್ಗೊಳ್ಳಬೇಕು. ನಾಲ್ಕು ವರ್ಣಗಳ ಪ್ರಜೆಗಳು ತ್ರಿಕರಣಪೂರ್ವಕವಾಗಿ ಗುರುಪೀಠಗಳನ್ನು ಪೂಜಿಸಬೇಕು. ಆಚಾರ್ಯರು ವಿಧಿಸುವ ದಂಡನೆಗಳನ್ನು ಅನುಭವಿಸಿದ ಪಾಪಿಯೂ ಸಹ ಪರಿಶುದ್ಧನಾಗುತ್ತಾನೆ. ಧರ್ಮ ನಿರ್ವಹಣೆಯಲ್ಲಿ ಆಚಾರ್ಯರಿಗೆ ಯಾರೂ ಅಡ್ಡಿಯನ್ನುಂಟು ಮಾಡಬಾರದು. ಸರ್ವ ವರ್ಣೀಯರೂ ಶಾಸ್ತ್ರ ನಿರ್ದೇಶಿಸಿದ ಆಚಾರ ಧರ್ಮಗಳನ್ನು ಪಾಲಿಸುವಂತೆ ನೋಡಿಕೊಳ್ಳುವ ಬಾಧ್ಯತೆ ರಾಜ ಮತ್ತು ಆಚಾರ್ಯರ ಮೇಲಿರುತ್ತದೆ.'' ಇದು ಶಂಕರರ ಅದ್ವೈತ ಮಹಾನುಶಾಸನ.

ಉಪನಿಷತ್ತುಗಳಿಂದ ಶಂಕರರು ವ್ಯಾಖ್ಯಾನಿಸಲು ಆರಿಸಿಕೊಂಡ ಮೊದಲಿನ 'ಮಹಾವಾಕ್ಯ'ಗಳಿಗೂ 'ಮನೀಷಾ ಪಂಚಕ'ದ ವಾಕ್ಯಗಳಿಗೂ ಒಂದು ಬಗೆಯ

ಸಾಮರಸ್ಯವಿದೆ. ಆದರೆ ಅವು 'ಮಹಾನುಶಾಸನ'ದ ವಾಕ್ಯಗಳೊಡನೆ ಸಾಮರಸ್ಯ ಹೊಂದುವುದಿಲ್ಲ. ಒಂದು ರೀತಿಯಲ್ಲಿ ಅವುಗಳೆರಡರ ನಡುವೆ ಒಂದು ದೊಡ್ಡ ಕಂದಕವೇರ್ಪಟ್ಟಿದೆ. ಈ ವಿರೋಧಾಭಾಸ ಹೇಗುಂಟಾಯಿತು ಎಂಬುದು ಒಂದು ನಿಗೂಢ ಒಗಟಾಗಿದೆ. ಶಂಕರಾನುಯಾಯಿಗಳು ಯಾರೂ ಆ ಒಗಟನ್ನು ಬಿಡಿಸುವ ಸಾಹಸಕ್ಕೆ ಕೈಹಾಕಿಲ್ಲ. ಆದರೆ ಭಾರತೀಯ ವಿಚಾರವಾದಿ ಸಂಘದ ಅಧ್ಯಕ್ಷರೂ ತೆಲುಗು ಮತ್ತು ಇಂಗ್ಲಿಷ್‌ನಲ್ಲಿ ಪ್ರಸಿದ್ಧ ಲೇಖಕರೂ ಆದ ರಾವಿಪೂಡಿ ವೆಂಕಟಾದ್ರಿ ಅವರು ಆ ಒಗಟಿನ ಬೇರುಗಳನ್ನು ಬಿಡಿಸುವ ಸಾಹಸಕ್ಕೆ ಕೈಹಾಕಿದ್ದಾರೆ.

ಶಂಕರಾಚಾರ್ಯರು ಅದ್ವೈತ ಸಿದ್ಧಾಂತದ ಮಹಾಪ್ರತಿಪಾದಕರೆಂದು ಪ್ರಖ್ಯಾತರಾಗಿದ್ದರೂ ಅವರ ಮುಖ್ಯ ಕೃತಿಗಳೆಲ್ಲ ಭಾಷ್ಯಗಳೇ ಹೊರತು ಸ್ವಂತ ಕೃತಿಗಳಲ್ಲ. ಉಪನಿಷತ್ತುಗಳಲ್ಲಿ ಬೀಜರೂಪದಲ್ಲಿದ್ದ ಅದ್ವೈತ ಸಿದ್ಧಾಂತವನ್ನು ಶಂಕರರು ತಮ್ಮ ತರ್ಕ, ಪಾಂಡಿತ್ಯ ಮತ್ತು ಕಾವ್ಯ ಶೈಲಿಯಿಂದ ಮನಮೋಹಕವಾದ ರೀತಿಯಲ್ಲಿ ಪ್ರತಿಪಾದನೆ ಮಾಡಿದರೇ ಹೊರತು ಅದನ್ನು ಜೀವನದಲ್ಲಿ ಆಚರಣೆಗೆ ತರುವ ಬಗ್ಗೆ ಕೊನೆಯ ಗಳಿಗೆಯವರೆಗೂ ಅವರಿಗೆ ಯಾವ ಆಸಕ್ತಿಯೂ ಇದ್ದಂತೆ ಕಾಣಲಿಲ್ಲ. ಅದಕ್ಕೆ ಬದಲಾಗಿ ಬೌದ್ಧ ಧರ್ಮದ ಉಚ್ಛ್ರಾಯ ಸ್ಥಿತಿಯ ಎದಿರು ಕುಸಿದುಬಿದ್ದಿದ್ದ ವೈದಿಕ ಧರ್ಮವನ್ನು ಪುನರುದ್ಧರಿಸುವಲ್ಲಿ ಮತ್ತು ವರ್ಣಾಶ್ರಮ ವ್ಯವಸ್ಥೆಯನ್ನು ಎತ್ತಿಹಿಡಿಯುವಲ್ಲಿ ಅವರಿಗೆ ವಿಶೇಷ ಆಸಕ್ತಿ ಇದ್ದಂತೆ ಕಾಣುತ್ತದೆ. ಹಾಗಾದರೆ ಶಂಕರರು 'ಮನೀಷಾ ಪಂಚಕ'ವನ್ನು ಅವರ ಜೀವನದ ಯಾವ ಹಂತದಲ್ಲಿ ರಚಿಸಿದರು ? ಈ ಪ್ರಶ್ನೆಗೆ ರಾವಿಪೂಡಿ ವೆಂಕಟಾದ್ರಿಯವರು ಒಂದು ಸಮಾಧಾನಕರ ವಿವರಣೆಯನ್ನು ನೀಡಿದ್ದಾರೆ (ಆದಿ ಶಂಕರಾಚಾರ್ಯ : ವ್ಯಕ್ತಿತ್ವಂ, ತತ್ವಂ, ೧೯೯೧).

ಈಗ 'ಶಂಕರ ವಿಜಯ'ಗಳು ನಿರೂಪಿಸುವಂತೆ 'ಮನೀಷಾ ಪಂಚಕ'ವನ್ನು ರಚಿಸಿದ ನಂತರ ಶಂಕರರು ಪ್ರಸ್ಥಾನ ತ್ರಯಗಳಿಗೆ ಭಾಷ್ಯಗಳನ್ನು ರಚಿಸಿರದೆ, ಭಾಷ್ಯಗಳನ್ನು ರಚಿಸಿದ ನಂತರ ತಮ್ಮ ಜೀವನದ ಅಂತ್ಯಕಾಲದಲ್ಲಿ 'ಮನೀಷಾ ಪಂಚಕ'ವನ್ನು ರಚಿಸಿರಬೇಕು. ಚಂಡಾಲನೊಬ್ಬನನ್ನು ತಮ್ಮ ಗುರುವೆಂದು ಕೊಂಡಾಡುವ ಆಚಾರ್ಯರನ್ನು ಕಂಡು ಆ ವೇಳೆಗಾಗಲೇ ಶಂಕರರಿಂದಲೇ ಸ್ಥಾಪಿತವಾಗಿದ್ದ ನಾಲ್ಕು ಮಠಗಳ ಆಚಾರ್ಯರಿಗೆ ಮತ್ತು ಸಂಪ್ರದಾಯ ಪ್ರಿಯರಿಗೆ ಸಹಿಸುವುದು ಕಷ್ಟವಾಗಿರಬೇಕಲ್ಲವೇ ? ಆಚಾರ್ಯರ ಮಾತನ್ನು ಗೌರವಿಸುವುದಾದರೆ ತಮ್ಮ ಬುಡಕ್ಕೇ ಕೊಡಲಿ ಪೆಟ್ಟು ಬಿದ್ದೀತೆಂಬ ಭೀತಿ ಅವರನ್ನು ಆವರಿಸಿರಬಹುದಲ್ಲವೆ ? ಆದ್ದರಿಂದಲೇ 'ಮಾಯಾವಾದಂ ಅಸಚ್ಛಾಸ್ತ್ರಂ, ಪ್ರಚ್ಛನ್ನಂ ಬೌದ್ಧಮೇವ ಚ' ಎಂದು ಅವರನ್ನು ಪ್ರಚ್ಛನ್ನ ಬೌದ್ಧ, ನಾಸ್ತಿಕ ಎಂಬ ಆಪಾದನೆಗೆ ಗುರಿಪಡಿಸಿದಂತೆ ಕಾಣುತ್ತದೆ. ವಾಸ್ತವವಾಗಿ ಎಂ. ಎನ್. ರಾಯ್ ಅವರು ಹೇಳುವಂತೆ ಶಂಕರರ ಅದ್ವೈತವಾದ ಹಿಂದುಮುಂದಾದ ಭೌತಿಕವಾದವೇ ಆಗಿದೆ. ಶಂಕರರಲ್ಲಿ ಜ್ಞಾನೋದಯವಾದುದನ್ನು ಕುರಿತು ಹೇಳುವ ಈ ಅಂತಿಮ ಘಟನೆಯಿಂದ ಅದಕ್ಕೆ ಮುಂಚೆ ಅವರು ಸಾಧಿಸಿದ ದಿಗ್ವಿಜಯಗಳೆಂದು ಹೇಳಲಾದುವುಗಳೆಲ್ಲಾ ಅಪಜಯಗಳೆಂದೇ ತಿಳಿಯಬೇಕಾಗುತ್ತದೆ. ಆದರೆ ಈ ಘಟನೆಯು ಅವರ ಪ್ರಾಣಕ್ಕೇ ಸಂಚಕಾರ ತಂದಿರಬಹುದೇ ? ಜ್ಞಾನೋದಯ ಪೂರ್ವದಲ್ಲಿ ಬರೀ ಪಂಡಿತರಾದ ಶಂಕರರು ಬೌದ್ಧಾದಿ ನಾಸ್ತಿಕರನ್ನು ಹೆದರಿಸಿ, ಬೆದರಿಸಿ, ಓಡಿಸಿ ವರ್ಣವ್ಯವಸ್ಥೆಯನ್ನು ಗಟ್ಟಿ ಬುನಾದಿಯ ಮೇಲೆ ನೆಲೆ ನಿಲ್ಲಿಸಿದಂತೆ, ನಂತರ ಜ್ಞಾನೋದಯ ಹೊಂದಿದ ಶಂಕರರು ತಿರುಗಿ ಆ ವ್ಯವಸ್ಥೆಯನ್ನು ಸಮೂಲವಾಗಿ ನಾಶಮಾಡಲಾರರೇ ಎಂಬ ಸಂಶಯ ಆ ಮಠಗಳ ಸಂಪ್ರದಾಯವಾದಿ ಅನುಯಾಯಿಗಳಿಗೆ ಬಂದಿರಬಹುದೇ ?

ಈ ಸಾಧ್ಯತೆಯನ್ನು ದುರುದ್ದೇಶ ಪೂರ್ವಕವಾದ ಊಹೆಯೆಂದು ತಳ್ಳಿಹಾಕಲಾಗದೇನೋ ! ಏಕೆಂದರೆ ಜನನದ ಬಗ್ಗೆ ಇರುವಂತೆಯೇ ನಿಧನದ ಬಗ್ಗೆ ಸಹ ಶಂಕರರ ಮಠಗಳಲ್ಲಿಯೇ ವಾದ ವಿವಾದಗಳಿವೆ. ಪ್ರಸ್ತುತ ಅವರ ಜನನ ಸಮಾಚಾರವನ್ನು ಬದಿಗೆ ಸರಿಸಿ, ಅವರ ಅಂತ್ಯ ಹೇಗೆ ಸಂಭವಿಸಿತು ಎಂಬ ಬಗ್ಗೆ ಶಂಕರ ಮಠಗಳು ಏನು ಹೇಳುತ್ತವೆ ಎಂಬುದನ್ನು ನೋಡೋಣ.

ಚಿದ್ವಿಲಾಸಯತಿಯ 'ಶಂಕರ ವಿಜಯ'ದ ಪ್ರಕಾರ 'ದತ್ತಾತ್ರೇಯ ಗುಹಾದ್ವಾರಾತ್ ಕೈಲಾಸಗಮನಂ ಗುರೋಃ'. ಅಂದರೆ ಶಂಕರರು ಬದರಿಕಾಶ್ರಮದೊಳಗಿನ ದತ್ತಾತ್ರೇಯ ಗುಹಾದ್ವಾರವನ್ನು ಪ್ರವೇಶಿಸಿ ಅಲ್ಲಿಂದ ಕೈಲಾಸಕ್ಕೆ ಹೋದರು. ಸದಾನಂದ ವ್ಯಾಸರ 'ಶಂಕರ ವಿಜಯಸಾರ'ದಲ್ಲಿ ಶಂಕರರು ಶಿವನ ವಾಹನ ನಂದಿಯನ್ನೇರಿ ತಮ್ಮ ಸ್ವಸ್ಥಾನವಾದ ಕೈಲಾಸಕ್ಕೆ ತೆರಳಿದರೆಂದು ಹೇಳಲಾಗಿದೆ. ಮಾಧವೀಯ 'ಶಂಕರ ವಿಜಯ'ದಲ್ಲಿ ಶಂಕರರು ಶಿಷ್ಯರನ್ನು ಕೂಡಿಕೊಂಡು ಬದರಿಗೆ ಹೋಗಿ ಅಲ್ಲಿಂದ ೮೦ ಮೈಲಿ ದೂರದಲ್ಲಿರುವ ಕೇದಾರ ಕ್ಷೇತ್ರದ ಮಾರ್ಗವಾಗಿ ಕೈಲಾಸ ಸೇರಿದರೆಂದು ಹೇಳಿದೆ.

ಶೃಂಗೇರಿ ಗುರುಪರಂಪರೆಯನ್ನು ಹೇಳುವ ಲಕ್ಷ್ಮಣಾಚಾರ್ಯರ 'ಗುರುವಂಶ ಕಾವ್ಯ' ಮೇಲಿನ ಕಥೆಗಳಿಗಿಂತ ಭಿನ್ನವಾದ ಮತ್ತೊಂದು ಕಥೆಯನ್ನು ಹೇಳುತ್ತದೆ. ಕೊನೆಯ ದಿನಗಳಲ್ಲಿ ಶಂಕರಾಚಾರ್ಯರು ನೇಪಾಳದ ಸಿದ್ಧೇಶ್ವರದಿಂದ ದತ್ತಾತ್ರೇಯ ಆಶ್ರಮಕ್ಕೆ ಹೋಗಿ ಅಲ್ಲಿ ದಂಡಕಮಂಡಲಗಳನ್ನು ತ್ಯಜಿಸಲಾಗಿ ದಂಡವು ಮರವಾಗಿಯೂ, ಕಮಂಡಲವು ಕೆರೆಯಾಗಿಯೂ ಮಾರ್ಪಟ್ಟುವಂತೆ ! ಅವರು ಮರಾಠವಾಡದ ಮಾಹುರೀಪುರಿಯಲ್ಲಿ ದತ್ತಾತ್ರೇಯ ಆಶ್ರಮದಲ್ಲಿ ದತ್ತಾತ್ರೇಯನೊಡನೆ ಕುಳಿತು ಚರ್ಚೆಯಲ್ಲಿ ತೊಡಗಿದ್ದಾರಂತೆ. ಅಂದರೆ ಆ ಚರ್ಚೆ ಇನ್ನೂ ನಡೆಯುತ್ತಲೇ ಇದೆ ಎಂದಾಯಿತು !

ಗೋವಿಂದನಾಥನ 'ಶಂಕರಾಚಾರ್ಯ ಚರಿತ' ಅಥವಾ 'ಕೇರಳೀಯ ಶಂಕರ ವಿಜಯ' ಇನ್ನೊಂದು ಕಥೆಯನ್ನು ಹೇಳುತ್ತದೆ. ಶಂಕರರು ತಿರುಚೂರಿನ ವೃಷಾಚಲದ ಮೇಲಿಂದ ದೇವಾಲಯದ ಗರ್ಭಗುಡಿಯ ಛಾವಣಿಯಲ್ಲಿ ತೂತು ಕೊರೆದು ಸೂರ್ಯಮಂಡಲವನ್ನು ಪ್ರವೇಶಿಸಿದರಂತೆ.

ಇನ್ನು, ಕಂಚಿ ಕಾಮಕೋಟಿ ಪೀಠದವರು ಉತ್ತರಾದಿಯವರದೆಲ್ಲಾ ಮೋಸ, ಅವರ ಕಥೆಗಳೆಲ್ಲಾ ಕಟ್ಟುಕಥೆಗಳು ಎನ್ನುತ್ತಾರೆ. ಶಂಕರರ ಸಮಾಧಿ ಕಂಚಿಯಲ್ಲೇ ಇದೆ ಅನ್ನುವುದನ್ನು ರುಜುವಾತುಪಡಿಸಲು ಗ್ರಂಥಗಳನ್ನು ರಚಿಸುತ್ತಲೇ ಇದ್ದಾರೆ. ಈ ಕೆಲಸವನ್ನು ಎಲ್ಲಾ ಪೀಠಗಳವರೂ ಮಾಡಿದರೂ ಕಂಚಿಯವರ ಉತ್ಸಾಹ ಉಳಿದವರಲ್ಲಿ ಇಲ್ಲ. ತಮ್ಮದೇ ಆದಿ ಪೀಠವೆಂದು ಕಂಚಿಯವರ ವಾದ. ಮಠಾಮ್ನಾಯದ ಪ್ರಕಾರ ಅದು ಪೀಠವೇ ಅಲ್ಲ, ಅವರಿಗೆ ಮಹಾನುಶಾಸನವೂ ಅನ್ವಯಿಸುವುದಿಲ್ಲ ಎಂದು ಉಳಿದ ಮಠಗಳ ನಿಲುವು. ಬಹಳ ವಿಷಯಗಳಲ್ಲಿ ಕಂಚಿ ಪೀಠವು ಶೃಂಗೇರಿ ಪೀಠದವರಿಗೆ ಪ್ರತಿಸ್ಪರ್ಧಿಯಂತೆ ಕಾಣಿಸುತ್ತದೆ. ಶಂಕರರ ಮರಣದ ವಿಷಯದಲ್ಲಿ ಕಂಚಿ ಪೀಠದವರು ಆನಂದಗಿರಿಯ 'ಶಂಕರ ವಿಜಯ'ವನ್ನು ಪ್ರಮಾಣವನ್ನಾಗಿ ತೆಗೆದುಕೊಳ್ಳಬೇಕೆನ್ನುತ್ತಾರೆ. ಅದರ ಪ್ರಕಾರ ಶಂಕರರು ಕಂಚಿಯಲ್ಲೇ ದೇಹತ್ಯಾಗ ಮಾಡಿದ್ದಾರೆ. ಅದಕ್ಕೆ ಆಧಾರವಾಗಿ ಅವರು ಕಂಚಿಯ ಕಾಮಾಕ್ಷಿ ದೇವಾಲಯದೊಳಗಿನ ಶಂಕರರ ವ್ಯಕ್ತಿಗಾತ್ರದ ಶಿಲಾ ವಿಗ್ರಹವನ್ನು ತೋರಿಸುತ್ತಾರೆ. ಅದು ಪದ್ಮಾಸನದಲ್ಲಿರುವ ಮೂರ್ತಿಯಾದ್ದರಿಂದ ಬುದ್ಧನ ವಿಗ್ರಹವಿರಬೇಕೆಂದೂ, ಶಂಕರರ ವಿಗ್ರಹವಾಗಿದ್ದರೆ ಯೋಗ ಪದ್ಮಾಸನ ಭಂಗಿಯಲ್ಲಿರುತ್ತಿತ್ತೆಂದೂ, ಆದ್ದರಿಂದ ಅದು ಶಂಕರರ ವಿಗ್ರಹವಲ್ಲವೆಂದೂ ಇತರ ಪೀಠಗಳವರ ವಾದ. ಆ ದೇವಾಲಯದ ಪ್ರಾಂಗಣದಲ್ಲಿ ಇನ್ನೂ ಅನೇಕ ಬೌದ್ಧ ವಿಗ್ರಹಗಳು ದೊರಕಿವೆ. ಅಲ್ಲಿ ಇದ್ದ ಬೌದ್ಧ ಸ್ತೂಪವನ್ನು ಧ್ವಂಸ ಮಾಡಿ ಅದರ ಮೇಲೆ ದೇವಾಲಯವನ್ನು ನಿರ್ಮಿಸಿರಬಹುದು ! ಶಂಕರ ಪ್ರೇರಿತ ದಾಳಿಗಳಿಗೆ ಗುರಿಯಾಗುವ ಮೊದಲು ಕಂಚಿ ಒಂದು ಪ್ರಸಿದ್ಧವಾದ ಬೌದ್ಧ ಕ್ಷೇತ್ರವಾಗಿತ್ತು ಎಂದು ತಿಳಿದುಬರುತ್ತದೆ.

ಹೀಗೆ ಪ್ರತಿ ಶಂಕರ ಪೀಠದವರೂ ತಮ್ಮ ವಾದವೇ ಸರಿ ಎಂದು ಉಳಿದ ಮಠಗಳೊಡನೆ ವಿವಾದಗಳಲ್ಲಿ ತೊಡಗಿದ್ದಾರೆ. ವಾಸ್ತವವಾಗಿ ಶಂಕರರು ಸ್ವಾಭಾವಿಕ ಸಾವಿಗೀಡಾಗಿದ್ದರೆ ಈ ಗೊಂದಲ ಉಂಟಾಗುತ್ತಿರಲಿಲ್ಲ. ಅವರು ಹಿತಶತ್ರುಗಳಿಗೇ ಬಲಿಯಾಗಿರಬಹುದೆಂಬ ಅನುಮಾನವನ್ನು ಇವು ಬಲಗೊಳಿಸುತ್ತವೆ. ಹಂತಕರು ಎಂದಾದರೂ ತಾವು ಹತ್ಯೆ ಮಾಡಿದೆವು ಎಂದು ಒಪ್ಪಿಕೊಳ್ಳುತ್ತಾರೆಯೇ ? ಶಂಕರ ಪೀಠಗಳನ್ನು ಸ್ಥಾಪಿಸಿದವರು ಶಂಕರರೇ ಎಂದು ಎಲ್ಲ ಪೀಠದವರೂ ಒಪ್ಪಿಕೊಳ್ಳುತ್ತಾರೆ. ಅವುಗಳಿಗೆ ಮೊದಲ ಪೀಠಾಧಿಪತಿಗಳನ್ನು ಸಹ ಶಂಕರರೇ ನೇಮಿಸಿದರೆಂದು ಹೇಳುತ್ತಾರೆ. ಶಂಕರರ ಕಾಲದಿಂದ ಇಂದಿನವರೆಗೂ ಶಂಕರಮಠಗಳೂ, ಪೀಠಗಳೂ ಕಾರ್ಯ ನಿರ್ವಹಿಸುತ್ತಲೇ ಇವೆ ಎಂದು ಸಹ ಅವರೇ ಹೇಳುತ್ತಾರೆ. ಪಾರಂಪರ್ಯವಾಗಿ ಪೀಠಾಧಿಪತಿಗಳ ನೇಮಕ ನಡೆಯುತ್ತಲೇ ಇದೆ ಎನ್ನುತ್ತಾರೆ. ಇದೆಲ್ಲಾ ನಿಜವಾದರೆ ಅವರು ಎಲ್ಲಿ, ಯಾವಾಗ, ಹೇಗೆ ನಿಧನರಾದರು ಎಂಬ ಬಗ್ಗೆ ಇಷ್ಟು ವೈರುಧ್ಯಗಳು ಉಂಟಾಗಲು ಹೇಗೆ ಸಾಧ್ಯ ?

ಅದೇನೇ ಇರಲಿ, ಜ್ಞಾನಿ ಶಂಕರರ 'ಮನೀಷಾ ಪಂಚಕ'ವನ್ನು ಸರಿಯಾಗಿ ಗ್ರಹಿಸಿ ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ ಶಂಕರಾಚಾರ್ಯರ ಅದ್ವೈತ ವೇದಾಂತ ಇಂದಿಗೂ ಪ್ರಸ್ತುತವಾಗುತ್ತದೆ. ಇಲ್ಲವಾದಲ್ಲಿ ಅದೊಂದು ಕೇವಲ ಉಪಾಯ ವೇದಾಂತವಾಗಿಯೇ ಉಳಿಯುತ್ತದೆ.

ಬಿ. ವಿ. ವೀರಭದ್ರಪ್ಪ
೨೭-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

# ಸವಕಲು ಶೀತ ಯುದ್ಧದ ಹಾದಿಯಲ್ಲಿ ಅಮೆರಿಕ

**ಸೀಯಾರ್ಕೆ**

ಹಣಬಲ, ಸೇನಾಬಲಗಳ ಮದದಿಂದ ಮೆರೆಯುತ್ತಿರುವ ಅಮೆರಿಕದ ಆಡಳಿತಗಾರರು ಜಗತ್ತಿನಲ್ಲಿ ತಮಗೆ ಬೇಕೆನಿಸಿದಾಗ, ಅವಶ್ಯವೆನಿಸಿದಾಗ ಉದ್ರಿಕ್ತ ವಾತಾವರಣ ನಿರ್ಮಿಸುವ ಪರಿಪಾಠ ಬೆಳೆಸಿಕೊಂಡಿದ್ದಾರೆ. ಅಂದರೆ ತಮ್ಮ ಹಿತಾಸಕ್ತಿಗಳಿಗೆ ಅನುಕೂಲವಲ್ಲದ, ಸವಾಲಾಗಿರುವ ದೇಶಗಳ ಜೊತೆ ಕಾಲು ಕೆರೆದು ಜಗಳಕ್ಕೆ ನಿಲ್ಲುತ್ತಾರೆ. ಇದು ಅಮೆರಿಕದ ವಿದೇಶಾಂಗ ನೀತಿಯ ಒಂದು ಭಾಗವೇ ಆಗಿಬಿಟ್ಟಿದೆ. ಶೀತಲ ಯುದ್ಧದ ಕಾಲದಲ್ಲಿನ ಅಮೆರಿಕದ ವರ್ತನೆ ನೆನಪಿಸಿಕೊಂಡರೆ ಅದು ವೇದ್ಯವಾಗುತ್ತದೆ. ಈಗ ಏಕಶಕ್ತಿ ಕೇಂದ್ರದ ಅಧಿಪತಿಯಾಗಿದ್ದರೂ ಅಮೆರಿಕ ಶೀತ ಯುದ್ಧದ ತಂತ್ರಗಳನ್ನು ಕೈಬಿಟ್ಟಿಲ್ಲ.

ಕಳೆದ ಏಪ್ರಿಲ್ ೧ರಂದು ಚೀಣಾದ ವಾಯುಪ್ರದೇಶದಲ್ಲಿ ಸಂಭವಿಸಿದ ಘಟನೆ ಅದಕ್ಕೆ ಸಾಕ್ಷಿ. ಮಹಾಮೂರ್ಖರ ದಿನ ಎಂದು ಪ್ರಸಿದ್ಧವಾಗಿರುವ ಆ ದಿನದಂದು ಅಮೆರಿಕದ ನೂತನ ಅಧ್ಯಕ್ಷ ಜಾರ್ಜ್ ವಾಕರ್ ಬುಷ್ ಅವರ ಮೂರ್ಖತನವೂ ಬಯಲಾಯಿತು. ಚೀಣಾದ ವಾಯು ಪ್ರದೇಶವನ್ನು ಅತಿಕ್ರಮಿಸಿ ಗೂಢಚರ್ಯೆಯಲ್ಲಿ ತೊಡಗಿದ್ದ ಅಮೆರಿಕದ ಗೂಢಚರ್ಯೆ ವಿಮಾನ ಸಿಕ್ಕಿಬಿದ್ದು ಗಾಬರಿಯಿಂದ ಚೀಣಾದ ಯುದ್ಧ ವಿಮಾನಕ್ಕೆ ಡಿಕ್ಕಿ ಹೊಡೆಯಿತು. ಪರಿಣಾಮವಾಗಿ ಚೀಣೀ ವಿಮಾನ ಕೆಳಗುರುಳಿ ಚಾಲಕ ಸಾವಿಗೀಡಾದ. ಅಮೆರಿಕದ ಗೂಢಚರ್ಯೆ ವಿಮಾನವನ್ನು ಬಲವಂತವಾಗಿ ಚೀಣೀಯ ವಿಮಾನ ನಿಲ್ದಾಣದಲ್ಲಿ ಇಳಿಸಿ ಅದರ ಇಪ್ಪತ್ತನಾಲ್ಕು ಸಿಬ್ಬಂದಿಯವರನ್ನು ಬಂಧಿಸಲಾಯಿತು. ಹಾಗಾಗಿ ಎರಡೂ ದೇಶಗಳ ಮಧ್ಯೆ ರಾಜತಾಂತ್ರಿಕ ಸೆಣಸಾಟ ಪ್ರಾರಂಭವಾಯಿತು. ಯಾವತ್ತಿನಂತೆ ಅಮೆರಿಕ ಘಟನೆ ಜರುಗಿದ್ದು ಅಂತರರಾಷ್ಟ್ರೀಯ ವಾಯುಪ್ರದೇಶದಲ್ಲಿಯೇ ಹೊರತು ಚೀಣೀ ಪ್ರದೇಶದಲ್ಲಿ ಅಲ್ಲ ಎಂದು ಹೇಳಿಕೊಂಡಿತು. ಹತ್ತು ಹನ್ನೊಂದು ದಿನಗಳು ಎರಡೂ ದೇಶಗಳ ಮಧ್ಯೆ ವಾದವಿವಾದಗಳು ಜರುಗಿ ಕೊನೆಗೂ ಒಂದು ಬಗೆಯ ಸಮಜಾಯಿಷಿ ಆಗಿ, ಚೀಣಾ ಬಂಧಿತ ಅಮೆರಿಕದ ಸಿಬ್ಬಂದಿಯನ್ನು ಬಿಡುಗಡೆ ಮಾಡಲು ಒಪ್ಪಿದೆ. ಅಮೆರಿಕ ಈ ದುಷ್ಕೃತ್ಯಕ್ಕೆ ಕ್ಷಮೆ ಕೋರಬೇಕೆಂದು ಚೀಣಾದ ಅಪೇಕ್ಷೆ. ಅದು ನ್ಯಾಯಸಮ್ಮತವಾದ್ದೂ ಕೂಡ. ಪರಿಸ್ಥಿತಿ ಬಿಗಡಾಯಿಸದೆ ಈ ಪ್ರಕರಣ ಇಲ್ಲಿಗೆ ಅಂತ್ಯಗೊಂಡಿದೆ. ಆದರೆ ಇದು ಕೊನೆಯೇನಲ್ಲ.

ಈ ವರ್ಷಾರಂಭದಲ್ಲಿ ಅಮೆರಿಕದ ಅಧ್ಯಕ್ಷಪಟ್ಟ ವಹಿಸಿಕೊಂಡಿರುವ ಜಾರ್ಜ್ ವಾಕರ್ ಬುಷ್ ಅಪ್ಪನ ಹಾದಿಯಲ್ಲೇ ದರ್ಪದ ಧೋರಣೆಯ ಹೆಜ್ಜೆ ಇರಿಸಿದ್ದಾರೆ. ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳ ನಂತರ ಹಳೆಯ ಸೇಡು ತೀರಿಸಿಕೊಳ್ಳಲು ವಿನಾಕಾರಣ ಇರಾಕಿನ ನಗರಗಳ ಮೇಲೆ ಬಾಂಬು ದಾಳಿ ನಡೆಸಿದರು. ಅನಂತರ ಇದ್ದಕ್ಕಿದ್ದಂತೆಯೇ ಗೂಢಚರ್ಯೆ ಆಪಾದನೆ ಹೊರಿಸಿ ಐವತ್ತು ಮಂದಿ ರಷ್ಯಾ ರಾಯಭಾರಿ ಕಚೇರಿ ಸಿಬ್ಬಂದಿಯನ್ನು ಹೊರ ಹಾಕಿಸಿದರು. ಇದಕ್ಕೆ ಪ್ರತೀಕಾರವಾಗಿ ರಷ್ಯಾ ಕೂಡ ಅಮೆರಿಕದ ರಾಯಭಾರಿ ಕಚೇರಿಯ ಸಿಬ್ಬಂದಿಯನ್ನು ಹೊರಹಾಕಿತು. ಅದರ ಹಿಂದೆಯೇ ಸಂಭವಿಸಿದ್ದು ಈ ಚೀಣೀ ಗಡಿಯ ಘಟನೆ. ಈ ಘಟನೆಗಳ ಸರಣಿಯಲ್ಲಿ ಒಂದು ವ್ಯವಸ್ಥಿತ ನೆಲೆಯನ್ನು ಕಾಣಬಹುದು. ಅಂದರೆ ಈ ದೇಶಗಳೊಂದಿಗೆ ಸಂಬಂಧಗಳಲ್ಲಿ ಬಿಗಿ ವಾತಾವರಣವನ್ನು ಕಲ್ಪಿಸುವುದು. ಚೀಣಾ ಆಗಲಿ, ರಷ್ಯ ಆಗಲಿ, ಬೇರಾವುದೇ ದೇಶವೇ ಆಗಲಿ ಅಮೆರಿಕದ ಆಕಾಂಕ್ಷೆಗಳಿಗೆ ಅಡ್ಡಬಾರದ ಹಾಗೆ ನೋಡಿಕೊಳ್ಳುವುದಕ್ಕಾಗಿಯೇ ಅಮೆರಿಕ ಈ ಕುತಂತ್ರಗಳನ್ನು ನಡೆಸುತ್ತಿರುತ್ತದೆ. ಸಂಬಂಧಗಳು ಬೆಳೆಯಬೇಕೆಂದರೆ ಅದು ಅಮೆರಿಕದ ಅಪೇಕ್ಷೆಗೆ, ಮರ್ಜಿಗೆ ಅನುಸಾರವಾಗಿರಬೇಕು ಎಂಬುದೇ ಅಮೆರಿಕದ ಧೋರಣೆ. ಹಾಗಿಲ್ಲದೆ ಹೋದರೆ ಇಲ್ಲ, ಅಮೆರಿಕ ಸಂಬಂಧಗಳನ್ನು ಅತಂತ್ರಗೊಳಿಸಲು ಕಿತಾಪತಿ ನಡೆಸುತ್ತಿರುತ್ತದೆ.




ಮುಂದೆ ಚೀಣಾ, ರಷ್ಯಾ ಅಥವಾ ಬೇರಾವುದೇ ದೇಶ ಬಲಗೊಂಡು ಸವಾಲಾಗುವುದು ಅಮೆರಿಕದ ವರಿಷ್ಠರಿಗೆ ಸಹಿಸದು. ತನ್ನ ಹಿತಾಸಕ್ತಿಗಳಿಗೆ ಕಿಂಚಿತ್ ಬಾಧಕವಾದರೂ ಅಮೆರಿಕ ಒಡನೆಯೇ ಎಚ್ಚರಗೊಳ್ಳುತ್ತದೆ. ಇದೊಂದು ಕಡೆಯಾದರೆ ದೇಶದ ಆಂತರಿಕ ಸಮಸ್ಯೆಗಳು ಬಿಗಡಾಯಿಸಿದಾಗಲೂ ಅಮೆರಿಕ ಜನರ ಮನಸ್ಸನ್ನು ಬೇರೆಡೆಗೆ ತಿರುಗಿಸಲು ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಇಂಥ ಸನ್ನಿವೇಶಗಳನ್ನು ಸೃಷ್ಟಿಸುತ್ತದೆ. ಶೀತ ಯುದ್ಧದ ಕಾಲದಲ್ಲಿ ಅಮೆರಿಕ ಸೋವಿಯೆತ್ ಒಕ್ಕೂಟದ ಭೀತಿಯ ಬೆದರುಗುಮ್ಮ ಹಿಡಿದು ನಿಲ್ಲಿಸಿ ಬೇಕಾದ್ದು ಮಾಡಿಕೊಂಡು ಹೋಗುತ್ತಿತ್ತು. ಜನರ ಗಮನವನ್ನು ಬೇರೆಡೆಗೆ ಹರಿಸುತ್ತಿತ್ತು. ಈಗಲೂ ಹಾಗೆಯೇ. ಇಪ್ಪತ್ತೊಂದನೆಯ ಶತಮಾನದ ಪ್ರಾರಂಭ ಅಮೆರಿಕಾಗೆ ಅಷ್ಟು ಹಿತಕರವಾಗಿಲ್ಲ. ಅಮೆರಿಕದ ಆರ್ಥಿಕ ಪ್ರಗತಿಯಲ್ಲಿ ಹಿಂಜರಿತ ಉಂಟಾಗಿದೆ. ಅದರ ಪರಿಣಾಮ ಇತರ ದೇಶಗಳ ಮೇಲೂ ಆಗಿದೆ. ಅಮೆರಿಕದ ಹಲವು ಉದ್ಯಮಗಳು ಮುಚ್ಚಲ್ಪಟ್ಟಿವೆ. ಷೇರು ಮಾರುಕಟ್ಟೆ ಕುಸಿದಿದೆ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಜನ ದಿನಂಪ್ರತಿ ಉದ್ಯೋಗಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಕಳೆದ ಶತಮಾನದ ಪ್ರಾರಂಭದಲ್ಲಿ ಸಂಭವಿಸಿದ ಪ್ರಮಾಣದಲ್ಲಿ ಆರ್ಥಿಕ ಕುಸಿತ ಇಲ್ಲದೆ ಇರಬಹುದು. ಆದರೂ ಈಗ ಸಂಭವಿಸಿರುವ ಮಂದಗತಿಯ ಆರ್ಥಿಕ ಪ್ರಗತಿ ಅಮೆರಿಕಾದ ವರಿಷ್ಠರಿಗೆ ಆತಂಕ ಉಂಟುಮಾಡಿದೆ. ಮುಖ್ಯವಾಗಿ ಅಮೆರಿಕದ ಶಸ್ತ್ರಾಸ್ತ್ರ ಉದ್ಯಮ ಸ್ಥಗಿತಗೊಂಡಿದೆ. ಅಮೆರಿಕದ ಆರ್ಥಿಕದಲ್ಲಿ ಶಸ್ತ್ರಾಸ್ತ್ರಗಳ ಮಾರಾಟ ಅತಿ ಮುಖ್ಯವಾದ ಭಾಗ ಎಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕು. ಅದರಿಂದಲೇ ಈ ಚೀಣೀ ಗೂಢಚರ್ಯೆ ಪ್ರಕರಣವೂ ಕೂಡ ಜನರ ಗಮನವನ್ನು ಬೇರೆಡೆ ಸೆಳೆಯುವ ತಂತ್ರ ಎಂದು ಹೇಳಬಹುದು.

ಅಮೆರಿಕ ಚೀಣಾ ಸಂಬಂಧಗಳು ಸ್ಥಾಪನೆಗೊಂಡಿದ್ದೂ ಕೂಡ ಸಂದರ್ಭವಾದಿ ರಾಜಕಾರಣದಿಂದ. ಇಪ್ಪತ್ತು ವರ್ಷಗಳಿಗೂ ಹೆಚ್ಚು ಕಾಲ ಚೀಣೀ ಜನತಾ ಗಣರಾಜ್ಯದ ಅಸ್ತಿತ್ವವನ್ನೇ ಕಡೆಗಣಿಸಿದ್ದ ಅಮೆರಿಕ ಚೀಣಾದೊಂದಿಗೆ ಸಂಬಂಧ ಬೆಳೆಸಿದ್ದು ಅಂದಿನ ಸೋವಿಯೆತ್ ಒಕ್ಕೂಟದೊಂದಿಗೆ ಚೀಣಾದ ಸಂಬಂಧಗಳು ಹಳಸಿಕೊಂಡಾಗ. ಈಗಲೂ ಕೂಡ ಅಮೆರಿಕ - ಚೀಣಾ ಸಂಬಂಧಗಳು ಅನುಕೂಲ ಸಿಂಧುವೇ ಹೊರತು ಶಾಶ್ವತವಾದ ತಾತ್ವಿಕ ನೆಲೆಗಳ ಮೇಲೇನಲ್ಲ. ಚೀಣಾವನ್ನು ತನ್ನ ಅಪೇಕ್ಷೆಗಳಿಗೆ ವಿರುದ್ಧವಾಗಿ ಹೋಗದಂತೆ ನೋಡಿಕೊಳ್ಳಲು ಅಮೆರಿಕ ಆರ್ಥಿಕ ಸಂಬಂಧಗಳ ಜೊತೆಗೆ ತೈವಾನ್ ಬೆದರುಗೊಂಬೆಯನ್ನು ಹೊಂದಿದೆ. ತೈವಾನ್ ಆಡಳಿತಕ್ಕೆ ಚೀಣಾದ ಪ್ರತಿಭಟನೆ ನಿರ್ಲಕ್ಷಿಸಿ ಅತ್ಯಾಧುನಿಕ ಆಯುಧ ಸಾಮಗ್ರಿಗಳನ್ನು ಒದಗಿಸಲು ಅಮೆರಿಕ ಸನ್ನಾಹ ನಡೆಸುತ್ತಿದೆ. ಒಟ್ಟಿನಲ್ಲಿ ಅಮೆರಿಕ ಈ ಗೂಢಚರ್ಯೆ ವಿಮಾನ ಪ್ರಕರಣದಿಂದ ತಾನು ಶೀತಯುದ್ಧದ ತಂತ್ರಗಳನ್ನು ಬಿಟ್ಟಿಲ್ಲ ಎಂಬುದನ್ನು ಜಗತ್ತಿಗೆ ತೋರಿಸಿದೆ.

ಅಮೆರಿಕ ಇಂಥ ಗೂಢಚರ್ಯೆ ಕೃತ್ಯಗಳನ್ನು ಯಾವುದೇ ಮಹತ್ತರವಾದ ಬೆಳವಣಿಗೆಗಳನ್ನು ಬುಡಮೇಲು ಮಾಡಲು ಬಳಸಿಕೊಳ್ಳುತ್ತದೆ. ನಲವತ್ತು ವರ್ಷಗಳ ಹಿಂದೆ ೧೯೬೦ರಲ್ಲಿ ಶೀತಲಯುದ್ಧ ಉತ್ತುಂಗದಲ್ಲಿದ್ದಾಗ ಪ್ರಪಂಚದಲ್ಲಿ ಮೂರನೇ ಮಹಾಯುದ್ಧ ತಡೆದು ಶಾಂತಿ ಸ್ಥಾಪನೆಗೊಳಿಸಲು ಮಹತ್ತರವಾದ ಶೃಂಗಸಭೆಯೊಂದು ನಿಗದಿಯಾಗಿತ್ತು. ಸೋವಿಯೆತ್ ಒಕ್ಕೂಟದ ನಾಯಕ ನಿಕಿಟ ಕ್ರುಶ್ಚೇವ್, ಬ್ರಿಟನ್ನಿನ ಪ್ರಧಾನಿ ಮ್ಯಾಕ್‌ಮಿಲನ್, ಫ್ರಾನ್ಸ್‌ನ ಅಧ್ಯಕ್ಷ ಚಾರ್ಲ್ಸ್ ದ ಗಾಲ್ ಮತ್ತು ಅಮೆರಿಕದ ಅಧ್ಯಕ್ಷ ಐಸನ್‌ಹೋವರರು ಈ ಸಭೆಯಲ್ಲಿ ಪಾಲ್ಗೊಳ್ಳಬೇಕಿತ್ತು. ಅಮೆರಿಕದ ಗೂಢಚರ್ಯೆ ವಿಮಾನ ಯು-೨ ಸೋವಿಯೆತ್ ವಾಯುಪ್ರದೇಶದಲ್ಲಿ ಗೂಢಚರ್ಯೆ ನಡೆಸುತ್ತಿದ್ದಾಗ ಸಿಕ್ಕಿಬಿದ್ದು ಈ ಶೃಂಗಸಭೆ ನಡೆಯದೇ ಹೋಯಿತು. ಅದರ ಚಾಲಕ ಗ್ಯಾರಿ ಪವರ್ಸ್‌ನನ್ನು ಸೋವಿಯೆತ್ ಒಕ್ಕೂಟ ಬಂಧಿಸಿತು. ಅಮೆರಿಕ ಈ ಕೃತ್ಯವನ್ನು ನಡೆಸಿದ್ದು ಉದ್ದೇಶಪೂರ್ವಕವಾಗಿಯೇ ಶೃಂಗಸಭೆಯನ್ನು ಭಗ್ನಗೊಳಿಸಲು. ಇಂಥ ಹೀನಕೃತ್ಯವನ್ನು ಅಮೆರಿಕ ನಡೆಸುತ್ತಲೇ ಬಂದಿದೆ. ಬಾಂಡುಂಗ್‌ನಲ್ಲಿ ಜರುಗಿದ ಆಫ್ರೋ-ಏಷ್ಯಾ ರಾಷ್ಟ್ರಗಳ ಸಮ್ಮೇಳನವನ್ನೂ ಭಂಗಗೊಳಿಸಲು ಅಮೆರಿಕ ಪ್ರಯತ್ನಿಸಿತ್ತು. ಚೀಣೀ ನಿಯೋಗ ಪಯಣಿಸಿದ್ದ ವಿಮಾನಾಪಘಾತ ವಿಧ್ವಂಸ

(೫೬ನೇ ಪುಟಕ್ಕೆ)

# ಸಿಂಹಗಳ ಒಡ್ಡೋಲಗ




ನಿನ್ನೆ ಮೊನ್ನೆಯವರೆಗೂ ಸಂಜೆ ಸೂರ್ಯಾಸ್ತವಾದ ಮೇಲೆ ಬೆಳಗುತ್ತಿದ್ದ ಗ್ರಹಗಳು ಈಗ ಪಶ್ಚಿಮದ ಅಂಚನ್ನು ತಲುಪಿರುವುದರಿಂದ ಕಾಣುತ್ತಿಲ್ಲ ಎಂದೇ ಹೇಳಬಹುದು. ಅಷ್ಟೇ ಅಲ್ಲ, ಸಿರಿಯಸ್ ಮುಂತಾದ ಪ್ರಕಾಶಮಾನ ನಕ್ಷತ್ರಗಳೂ ಈಗ ಹೀಗೆಯೇ ಕಾಣದಂತಾಗಿರುವುದರಿಂದ ಆಕಾಶವೇ ಖಾಲಿ ಆಗಿಬಿಟ್ಟದೆಯೋ ಅಥವಾ ಮೋಡ ಮುಸುಕಿದೆಯೋ ಎಂಬ ಅನುಮಾನ ಉಂಟಾಗುವುದು. ಇದರ ಪರಿಹಾರಕ್ಕೆ ನಮಗೆ ದೊರಕುವ ನಕ್ಷತ್ರಪುಂಜಗಳಲ್ಲಿ ಮುಖ್ಯವಾದದ್ದು ಸಿಂಹ. ನೆತ್ತಿಯ ಮೇಲೆ ಒಡ್ಡೋಲಗ ನಡೆಸುವ ಈ ರಾಶಿಯ ನಕ್ಷತ್ರಗಳ ವಿನ್ಯಾಸ ಪ್ರಶ್ನಾರ್ಥಕ ಚಿಹ್ನೆಯನ್ನು ಹೋಲುತ್ತದೆ. ಲೇಖನದ ತಲೆಬರಹದಲ್ಲಿ 'ಗಳು' ಪ್ರತ್ಯಯ ಸೇರಿಸಿರುವುದಕ್ಕೆ ಕಾರಣವಿದೆ. ಸಿಂಹರಾಶಿಯ ಉತ್ತರಕ್ಕಿರುವ ಕ್ಷೀಣ ಪುಂಜವೇ ಲಘು ಸಿಂಹ ಅಥವಾ ಲಿಯೋ ಮೈನರ್. ಅಲ್ಲಿರುವ ನಕ್ಷತ್ರಗಳ ವಿನ್ಯಾಸದಲ್ಲಿ ಸಿಂಹವನ್ನು ಕಲ್ಪಿಸಿಕೊಳ್ಳುವುದು ಒಂದು ಸವಾಲು ಎನ್ನಲು ಅಡ್ಡಿಯಿಲ್ಲ.

ಸಿಂಹರಾಶಿಯಲ್ಲಿ ಸಿಂಹದ ಹೃದಯದ ಭಾಗದಲ್ಲಿರುವ ನಕ್ಷತ್ರವೇ ಮಘ ಅಥವಾ ರೆಗ್ಯುಲಸ್. ಅದರ ಬಾಲದ ಕುಚ್ಚು ಫಾಲ್ಗುಣ ಅಥವಾ ದೆನೆಬೊಲ. ದುರ್ಬೀನಿನ ಸಹಾಯದಿಂದ ಒಂದೊಂದು ನಕ್ಷತ್ರವನ್ನೂ ಪರಿಶೀಲಿಸಿ. ಗಾಮಾ ಅಥವಾ ಆಲ್‌ಜೈಬಾ ಎಂಬ ನಕ್ಷತ್ರ (ಸಿಂಹದ ಕುತ್ತಿಗೆಯ ಭಾಗದಲ್ಲಿರುವುದು) ಜೋಡಿ ಗಮನಿಸಿದಾಗ ಅವೆರಡರ ನಡುವಿನ ಬಣ್ಣದ ವ್ಯತ್ಯಾಸವೂ ತಿಳಿಯುವುದು - ಒಂದು ಹಳದಿ ಇನ್ನೊಂದು ಕಿತ್ತಳೆ.

ಗುರು ಮತ್ತು ಶನಿ ಗ್ರಹಗಳು ಕಾಣುವುದೇ ಇಲ್ಲ ಎನ್ನಬಹುದಾದರೂ ಗುರುಗ್ರಹವನ್ನು ಆಕಾಶ ಶುಭ್ರವಾಗಿದ್ದಾಗ ಸೂರ್ಯಾಸ್ತದ ನಂತರ ಸ್ವಲ್ಪ ಹೊತ್ತು ಮಾತ್ರ ನೋಡಬಹುದು. ಬುಧ ಗ್ರಹವೂ ಅದರ ಆಸುಪಾಸಿನಲ್ಲಿ ಕಾಣುತ್ತದೆ. ಮೇ ೧೦ರಂದು ಬುಧ ಗ್ರಹ ಗುರುಗ್ರಹಕ್ಕಿಂತ ಪಶ್ಚಿಮಕ್ಕೆ ಅಂದರೆ ದಿಗಂತಕ್ಕೆ ಸಮೀಪವಾಗಿ ಕಾಣುತ್ತದೆ.

ಮೇ ೧೫ರಂದು ಅವೆರಡರ ನಡುವಿನ ಅಂತರ ಕೇವಲ ಎರಡೂವರೆ ಡಿಗ್ರಿಗಳಷ್ಟಿದ್ದು ಹುಡುಕುವುದು ಸುಲಭವಾಗುತ್ತದೆ. ಆ ಮುಂದೆ ಅವುಗಳ ಸ್ಥಾನ ಅದಲು ಬದಲಾದಂತೆ ಕಾಣುತ್ತದೆ. ಗುರುಗ್ರಹ ಕೆಳಗೆ (ದಿಗಂತದ ಅಂಚಿಗೆ); ಬುಧ ಗ್ರಹ ಮೇಲೆ, ಹೀಗೆ. ವಾಸ್ತವವಾಗಿ ಗುರುಗ್ರಹ ವೃಷಭದಲ್ಲೇ ಉಳಿದಿರುತ್ತದೆ; ಬುಧ ಗ್ರಹ ಮಾತ್ರ ಚುರುಕಾಗಿ ವೃಷಭದಿಂದ ಮಿಥುನಕ್ಕೆ ಓಡಿಬಿಡುತ್ತದೆ. ೨೧ರಂದು ಅದನ್ನು ಗರಿಷ್ಠ ಎತ್ತರದಲ್ಲಿ ಕಾಣಬಹುದು. ಮುಂದೆ ಅದು ದಿಗಂತದ ಅಂಚಿಗೆ ಜಾರುತ್ತದೆ. ೨೪ರಂದು ಎಳೆಯ ಚಂದ್ರ ಬುಧಗ್ರಹದ ಪಕ್ಕ ಕಾಣುತ್ತದೆ.

ಬೆಳಗಿನ ಝಾವ ಶುಕ್ರಗ್ರಹವನ್ನು ಪೂರ್ವದಲ್ಲಿ ಗುರುತಿಸಲು ಯಾವುದೇ ನಕ್ಷೆ ಬೇಕಿಲ್ಲ. ಅದರ ಸಹಾಯದಿಂದ ಹಿನ್ನೆಲೆಯ ಮೀನರಾಶಿ ಹಾಗೂ ಪೆಗಸಸ್ ಚೌಕವನ್ನು ಗುರುತಿಸುವುದು ಸುಲಭ.

ಕಳೆದ ತಿಂಗಳು ಪ್ರಕಾಶಮಾನವಾಗತೊಡಗಿದ ಮಂಗಳ ಈ ತಿಂಗಳಲ್ಲಿ ಇನ್ನೂ ಪ್ರಖರವಾಗುತ್ತದೆ. ರಾತ್ರಿ ಸುಮಾರು ೯ ಗಂಟೆಯ ಹೊತ್ತಿಗೆ ಆಗ್ನೇಯ ದಿಕ್ಕಿನತ್ತ ಕಣ್ಣು ಹಾಯಿಸಿ. ಕೆಂಪು ಚುಕ್ಕೆಯೊಂದರ

**ಡಾ|| ಬಿ. ಎಸ್. ಶೈಲಜಾ**

## ಅತಿ ಸಮೀಪದ ನಕ್ಷತ್ರ

ನಭಾವಲೋಕನದಲ್ಲಿ ಮೊದಲ ಬಾರಿಗೆ ಅತಿ ಸಮೀಪದ ನಕ್ಷತ್ರ, ಸೂರ್ಯನ ಬಗ್ಗೆ ಬರೆಯುವ ಸಂದರ್ಭ ಒದಗಿಬಂದಿದೆ. ಸಾಮಾನ್ಯವಾಗಿ ೧೧ ವರ್ಷಗಳಿಗೊಮ್ಮೆ ಹೆಚ್ಚಾಗಿ ಕಾಣುವ ಸೌರಕಲೆಗಳು ಈಗ ಗರಿಷ್ಠ ಸಂಖ್ಯೆಯನ್ನು ಮುಟ್ಟಿವೆ. ೨೦೦೦-೨೦೦೧ ಈ ಅವಧಿಯಲ್ಲಿ ಈ ಬಗೆಯ ಚಟುವಟಿಕೆ ನಿರೀಕ್ಷಿಸಿದ್ದೇ ಆದರೂ ಆರು ತಿಂಗಳ ಕೆಳಗೆ ಸೌರಕಲೆಗಳ ಸಂಖ್ಯೆ ಇಳಿಮುಖವಾಗಿ ಸೌರ ವಿಜ್ಞಾನಿಗಳಿಗೆ ಆಶ್ಚರ್ಯವನ್ನುಂಟುಮಾಡಿತ್ತು. ಕ್ರಮೇಣ ಹೆಚ್ಚಾದ ಈ ಕಲೆಗಳ ಚಟುವಟಿಕೆ ಮತ್ತೊಂದು ಬಾರಿ ವಿಜ್ಞಾನಿಗಳನ್ನು ಚಕಿತರನ್ನಾಗುವಂತೆ ಮಾಡಿತು. ಮಾರ್ಚ್ ಕೊನೆಯ ವಾರದಲ್ಲಿ ದೊಡ್ಡದೊಂದು ಸೌರಕಲೆ ಕಾಣಿಸಿಕೊಂಡಿತು. ಬರಿಗಣ್ಣಿಗೇ ಕಾಣುವಷ್ಟು ದೊಡ್ಡದಾಗಿದ್ದ ಇದರ ಅಗಲ ಸುಮಾರು ೧೨೦,೦೦೦ ಕಿ.ಮೀ. ಗಳಷ್ಟಿತ್ತು. ಸೌರಜ್ವಾಲೆಗಳು, ಜ್ವಾಲೋನ್ನತಿಗಳು ಪುಂಖಾನು ಪುಂಖವಾಗಿ ಚಿಮ್ಮಿದವು. ಉತ್ತರ ಭೂಭಾಗದವರಿಗೆ ಧ್ರುವಪ್ರಭೆಗಳ ನೋಟದ ಸುಗ್ಗಿಯೇ ಸುಗ್ಗಿ. ಏಪ್ರಿಲ್ ಮೊದಲ ವಾರದವರೆಗೂ ಭೂಮಿಯತ್ತ ತಿರುಗಿದ್ದುದು (ಸೂರ್ಯನ) ಪಶ್ಚಿಮದ ಅಂಚಿನಲ್ಲಿ ಮರೆಯಾಗುತ್ತಿದ್ದಂತೆ ಪೂರ್ವದಲ್ಲಿ ಇನ್ನೊಂದು ದೊಡ್ಡ ಕಲೆ ಗೋಚರಿಸಿತು.



*(ಸೋಹೋ ಎಂಬ ಬಾಹ್ಯಾಕಾಶನೌಕೆ ತೆಗೆದ ಚಿತ್ರ. ಚಿತ್ರಕೃಪೆ : ನಾಸಾ)*

ಪುನಃ ಜ್ವಾಲೋನ್ನತಿಗಳ ಭರಾಟೆ ಆರಂಭವಾಯಿತು. ಉತ್ತರದ ದೇಶಗಳಾದ ರಷಿಯಾ, ಅಲಾಸ್ಕಗಳಲ್ಲಿ ವಿದ್ಯುತ್ ಪ್ರಸರಣಕ್ಕೆ ಧಕ್ಕೆ ಉಂಟಾಗಬಹುದೆಂಬ ಎಚ್ಚರಿಕೆಯ ಸಂದೇಶಗಳು ಬಿತ್ತರವಾದವು.

ಸೌರಕಲೆಗಳ ಬಗ್ಗೆ ತಿಳುವಳಿಕೆ ಮೂಡಿಸಲು ನಮಗೆ ಇದು ಒಳ್ಳೆಯ ಅವಕಾಶವಾಗಿದೆ. ದೂರದರ್ಶಕ ಇರುವವರು ಗೋಡೆಯ ಮೇಲೆ ಬಿಂಬ ಮೂಡಿಸಿ ಆಸಕ್ತರನ್ನು ಆಕರ್ಷಿಸಬಹುದು. ಸೂರ್ಯಗ್ರಹಣದ ಸಮಯದಲ್ಲಿ ಸೌರಕನ್ನಡಕಗಳನ್ನು ಕೊಂಡಿದ್ದವರು ಈಗ ಅವನ್ನು ಬಳಸಬಹುದು (ಆದರೆ ನಿಮಿಷಗಟ್ಟಲೆ ನೋಡಬಾರದು). ದಿನದಿಂದ ದಿನಕ್ಕೆ ಕಲೆಗಳ ಚಲನೆಯನ್ನು ಗುರುತಿಸಿ ಸೂರ್ಯನ ಭ್ರಮಣಾವಧಿಯನ್ನು ಲೆಕ್ಕ ಹಾಕಬಹುದು.

*ಎಚ್ಚರಿಕೆ : ಬರಿಗಣ್ಣಿನಿಂದ ಸೂರ್ಯನನ್ನು ನೋಡಬೇಡಿ.*

ಸೂರ್ಯೋದಯ ಮತ್ತು ಸೂರ್ಯಾಸ್ತಗಳಲ್ಲಿ ಕೆಂಪು ಬಣ್ಣದ ಸೂರ್ಯನನ್ನು ಮಾತ್ರ ಬರಿಗಣ್ಣಿನಿಂದ ನೋಡಬಹುದು.

*– ಡಾ|| ಬಿ. ಎಸ್. ಶೈಲಜಾ*




ಉದಯ ಗೋಚರಿಸುತ್ತದೆ. ಸುಮಾರು ಅರ್ಧ ಗಂಟೆಯ ನಂತರ ಅದೇ ದಿಕ್ಕಿನಲ್ಲಿ ಇನ್ನೊಂದು ಇನ್ನೂ ಪ್ರಕಾಶಮಾನವಾದ ಕೆಂಪು ಚುಕ್ಕೆ ಉದಯಿಸುತ್ತದೆ. ಅದೇ ಮಂಗಳ. ಇದರ ಚಲನೆ ಮತ್ತು ಪ್ರಕಾಶದ ಹೆಚ್ಚಳವನ್ನು ಗುರುತಿಸಲು ಮೊದಲು ಉದಯಿಸುವ ಜ್ಯೇಷ್ಠಾ ನಕ್ಷತ್ರವನ್ನೇ ಆಧಾರವನ್ನಾಗಿ ಇಟ್ಟುಕೊಳ್ಳಬಹುದು. ಮೇ ೧೧ರ ಹೊತ್ತಿಗೆ ಮಂಗಳದ ಚಲನೆ ತಟಸ್ಥವಾಗುತ್ತದೆ. ಆಮೇಲೆ ಧನುರಾಶಿಯಿಂದ ವೃಶ್ಚಿಕ ರಾಶಿಯತ್ತ ಚಲಿಸಲು ಆರಂಭಿಸುತ್ತದೆ. ಇದು ಗ್ರಹಗಳ ಚಲನೆಯ ಅನುಕ್ರಮಣಿಕೆಯ ವಿರುದ್ಧ ದಿಕ್ಕು. (ಅಂದರೆ ಸಾಮಾನ್ಯವಾಗಿ ಎಲ್ಲ ಗ್ರಹಗಳೂ ವೃಶ್ಚಿಕದಿಂದ ಧನುವಿಗೆ ಚಲಿಸುತ್ತವೆ). ಆದ್ದರಿಂದ ಈ ನಡೆಗೆ ಹಿನ್ನಡೆ ಎಂಬ ಹೆಸರಿದೆ.

ದುರ್ಬೀನಿನಿಂದ ಮಂಗಳ ಗ್ರಹವನ್ನು ವೀಕ್ಷಿಸಿ. ಅದರ ಆಚೀಚೆ ಧನುರಾಶಿಯ ಸುಂದರ ನೆಬ್ಯುಲಗಳು, ನಕ್ಷತ್ರ ಗುಚ್ಛಗಳು ಕಾಣುವುವು. ಲಗೂನ್ ನೆಬ್ಯುಲ ಎಂಬುದು ಎರಡೇ ಡಿಗ್ರಿಗಳ ಅಂತರದಲ್ಲಿ ಕಾಣುವುದು. ಸಣ್ಣ ದೂರದರ್ಶಕದಿಂದ ಗ್ರಹದ ಕೋನೀಯ ಗಾತ್ರ ಹೆಚ್ಚುತ್ತಿರುವುದನ್ನೂ ಕಾಣಬಹುದು. ಮೇ ೧೦ರಂದು ಚಂದ್ರ ಮಂಗಳದ ಪಕ್ಕದಲ್ಲಿಯೇ ಕಾಣುವುದು. ಮೇ ೭ರಂದು ಹುಣ್ಣಿಮೆಯಂದು ಚಂದ್ರನ ಸಮೀಪ ಕಾಣುವ ಕ್ಷೀಣ ನಕ್ಷತ್ರವೇ ವಿಶಾಖಾ. ಈ ವೈಶಾಖ ಪೂರ್ಣಿಮೆ ಬುದ್ಧನ ಜನ್ಮದಿನವೂ ಹೌದು. ಜನವರಿ ವಿಶೇಷ ಸಂಚಿಕೆಯಲ್ಲಿ ಸಾಂಚಿಸ್ತೂಪದ ವಿನ್ಯಾಸ ಈ ದಿನಕ್ಕಾಗಿ ವಿಶೇಷವಾಗಿ ರಚಿತವಾದದ್ದು ಎಂಬ ಅಂಶವನ್ನು ಸೂಚಿಸಿದ್ದೆ. ಇದನ್ನು ಪ್ರಾಯೋಗಿಕವಾಗಿ ಪರಿಶೀಲಿಸುವ ಪ್ರಯತ್ನ ಮಾಡಬಹುದು.

ಈ ತಿಂಗಳಲ್ಲಿ ಲೀನಿಯರ್ ಎಂಬ ಧೂಮಕೇತು ಪ್ರಕಾಶಮಾನವಾಗುತ್ತಿದೆ. ಒರೈಯನ್ ನಕ್ಷತ್ರ ಪುಂಜದಲ್ಲಿ (ಬೇಟೆಗಾರನ ಬಲಗಾಲಿನ ಬಳಿ) ದುರ್ಬೀನಿನಿಂದ ಇದನ್ನು ಹುಡುಕಬಹುದು. ಹತ್ತಿಯ ತುಣುಕಿನ ಹಾಗೆ ಕಾಣುತ್ತಿದೆ.

ಈಟಾ ಅಕ್ವಾರಿಡ್ ಎಂಬ ಉಲ್ಕಾವೃಷ್ಟಿ ಮೊದಲ ವಾರದಲ್ಲಿ ಗರಿಷ್ಠ ಮುಟ್ಟಲಿದೆ. ಗಂಟೆಗೆ ಸುಮಾರು ೪೦ ಉಲ್ಕೆಗಳು ಕಾಣಬಹುದು.

ಸೂರ್ಯನೊಡನೆ ಅಸ್ತಮಿಸುವ ಗುರು, ಶನಿ ಮತ್ತು ಬುಧ ಹಾಗೂ ಬೆಳಗಿನ ಝಾವ ಕಾಣುವ ಶುಕ್ರ ಭೂಮಿಯ ಒಂದು ಪಕ್ಕದಲ್ಲಿವೆ. ಮಂಗಳ (ಮತ್ತು ಪ್ಲುಟೋ) ಇನ್ನೊಂದು ಪಕ್ಕದಲ್ಲಿವೆ. **ಇದು ಯಾವುದೇ ಮಹತ್ತ್ವದ ಘಟನೆ ಅಲ್ಲ. ಈ ಕಾರಣದಿಂದ ಯಾವುದೇ ಬಗೆಯ ಪರಿಣಾಮ ಉಂಟಾಗುವುದಿಲ್ಲ.** ಆದರೆ ಅವಕಾಶವಾದಿಗಳು ಗುಲ್ಲು ಎಬ್ಬಿಸಿಯಾರು ಜಾಗ್ರತೆ ! ಶೋಷಣೆಗೆ ಒಳಗಾಗದಿರಿ.

**ಡಾ॥ ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಶ್ರೀ ಟಿ. ಚೌಡಯ್ಯ ರಸ್ತೆ
ಹೈ ಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

---

*(೫೪ನೇ ಪುಟದಿಂದ)*

ಚರ್ಯೆಯಿಂದಾದದ್ದು ಎಂದು ಅನಂತರ ಸಾಬೀತಾಯಿತು. ಗೂಢಚರ್ಯೆ ಹಾರಾಟ ನಡೆಸುವುದು, ಮಾಹಿತಿ ಸಂಗ್ರಹಿಸುವುದು ಅಮೆರಿಕ ತನ್ನ ಹಕ್ಕು ಎಂದು ಪರಿಗಣಿಸಿರುವಂತೆ ತೋರುತ್ತದೆ. ಆದರೆ ಅದು ಸಾಧ್ಯವಾಗದ ಮಾತು ಎಂಬುದನ್ನು ಚೀಣೀ ಪ್ರಕರಣ ರುಜುವಾತು ಮಾಡಿದೆ. ಆದರೂ ಅಮೆರಿಕದ ಇಂಥ ದುಶ್ಚರ್ಯೆಗಳ ವಿಚಾರದಲ್ಲಿ ಎಲ್ಲ ಸ್ವತಂತ್ರ ರಾಷ್ಟ್ರಗಳೂ ಎಚ್ಚರ ವಹಿಸಬೇಕಾಗಿದೆ.

ಅಧಿಕಾರದಲ್ಲಿದ್ದಾಗ ಅಮೆರಿಕಾದ ಅಧ್ಯಕ್ಷರುಗಳ ದರ್ಪ ಒಂದು ರೀತಿಯದು. ಅವರಲ್ಲಿ ಶ್ರೀಮಂತಿಕೆಯ ಅಟ್ಟಹಾಸ, ಗಾಂಭೀರ್ಯ, ಗತ್ತು, ದುರಹಂಕಾರ ಮುಂತಾದ ಗುಣವನ್ನೆಲ್ಲ ಕಾಣಬಹುದು. ಅಧಿಕಾರ ಕಳೆದುಕೊಂಡ ಮೇಲೆ ಮಾಜಿ ಮಹಾರಾಜರುಗಳಂತೆ ಮಾಜಿ ಅಧ್ಯಕ್ಷರುಗಳು ಹಲ್ಲುದುರಿಹೋಗಿರುವ ಅರಣ್ಯ ರಾಜರಂತಾಗಿಬಿಡುತ್ತಾರೆ. ಈ ಮಾಜಿ ಅಧ್ಯಕ್ಷರುಗಳು ಕರುಣಾಮಯಿಗಳಾಗಿಬಿಡುತ್ತಾರೆ. ಬಡರಾಷ್ಟ್ರಗಳ ಜನತೆಯ ಬಗ್ಗೆ ಪೂರ್ಣ ಅನುಕಂಪವಿರುವವರಾಗಿ ವರ್ತಿಸುತ್ತಾರೆ. ಪ್ರಪಂಚದ ವಿವಿಧ ಕಡೆಗಳಲ್ಲಿ ಪ್ರಕೃತಿ ವಿಕೋಪಕ್ಕೀಡಾದ ಜನರ ಬಗ್ಗೆ ಕಣ್ಣೀರು ಸುರಿಸಿ, ನೆರವಿನ ಆಶ್ವಾಸನೆ ನೀಡಿ ಹೋಗುತ್ತಾರೆ. ಆದರೆ ಅದು ಹೆಚ್ಚಿನಮಟ್ಟಿಗೆ ಆಶ್ವಾಸನೆಯಾಗೇ ಉಳಿಯುತ್ತದೆ. ಅಧಿಕಾರದಲ್ಲಿದ್ದಾಗ ಅಧ್ಯಕ್ಷ ಬಿಲ್ ಕ್ಲಿಂಟನ್ ಭಾರತಕ್ಕೆ ಭೇಟಿ ನೀಡಿದ ನೆನಪು ಇನ್ನೂ ಹಸಿರಾಗಿಯೇ ಇದೆ. ಆಗ ಆಡಳಿತದಲ್ಲಿರುವವರು ಇಲ್ಲದವರು ತೋರಿದ ವಿಪರೀತ ಉತ್ಸಾಹ ಮುಜುಗರ ಉಂಟುಮಾಡಿತ್ತು. ಹೇಸಿಗೆ ತಂದಿತ್ತು. ಈಗ ಮಾಜಿ ಆಗಿರುವ ಕ್ಲಿಂಟನ್ ಗುಜರಾತ್‌ನಲ್ಲಿ ಸಂಭವಿಸಿದ ಭೂಕಂಪ ಸಂತ್ರಸ್ತರನ್ನು ಸಂತೈಸಲು ಆಗಮಿಸಿದ್ದಾಗಿನ ನಡವಳಿಕೆಯೇ ಬೇರೆ. ವ್ಯತ್ಯಾಸ ಕಣ್ಣಿಗೆ ರಾಚುವಂತಿತ್ತು. ಪತ್ರಿಕೆಗಳಲ್ಲಿ ಪ್ರಚಾರವೇನೋ ಇತ್ತು, ಆದರೆ ಆತ ಬಂದು ಮಾಡಿದ್ದೇನು ? ಪ್ರಾಯಶಃ ಅಮೆರಿಕಾಗೆ ಪ್ರಚಾರ ಗಿಟ್ಟಿಸಲೆಂದೇ ಈ ರೀತಿಯ ಪ್ರವಾಸ ಇರಬೇಕು. ಕ್ಲಿಂಟನ್ ಭೇಟಿಯಿಂದ ಗುಜರಾತ್‌ನ ಸಂತ್ರಸ್ತ ಜನರಿಗೆ ಹಣದ ಹೊಳೆಯೇನೂ ಹರಿಯದು. ಬರುವ ಆದಾಯಕ್ಕಿಂತ ವೆಚ್ಚವೇ ಅಧಿಕವಾದೀತು – ಈ ಮಾಜಿ ಅಧ್ಯಕ್ಷನಿಗೆ ನೀಡಿದ ಆತಿಥ್ಯದಿಂದ. ❑❑❑

---

*(೪೬ನೇ ಪುಟದಿಂದ)*

ದರ್ಶನ್ : ನನ್ಕಿವಿಗೂ ಬಿತ್ತು. ಅದೇನೋ ಗುರು ಡಾಟ್ ಕಾಮ್ ಅಂತ ಹೊಸ ಕಂಪೆನಿನಂತೆ. ಅವರಿಗೆ ಈ ಮೇಷ್ಟ್ರುಗಳ ಕಾಂಟ್ರಾಕ್ಟ್ ಎಲ್ಲಾ ಕೊಡಬೇಕು ಅಂತ ಎಜುಕೇಷನ್ ಡಿಪಾರ್ಟ್‌ಮೆಂಟ್‌ನಲ್ಲಿ ಡಿಸೈಡ್ ಆಗಿದೆಯಂತೆ ! ನಿಜಾನೇನೋ ?

ಸದ್ಗುರು : ಇನ್ನೂ ಅನುಮಾನ ಯಾಕೆ ? ಆ ಗುರು ಡಾಟ್ ಕಾಮ್ ಇಂಥದೇ ವ್ಯವಹಾರಾನ ಎಷ್ಟೋ ದೇಶಗಳಲ್ಲಿ ನಡೆಸ್ತಿದ್ದಾರಂತೆ. ನಮ್ಮ ದೇಶದಲ್ಲಿ ಅವರ ಹೆಸರು ಗುರು ಡಾಟ್ ಕಾಮ್. ಬೇರೆ ಬೇರೆ ದೇಶಗಳಲ್ಲಿ ಅದಕ್ಕೆ ಬೇರೆ ಬೇರೆ ಹೆಸರಿಡ್ತಾರೆ. ಹೇಗಾದ್ರೂ, ವಿದೇಶೀ ಬಂಡವಾಳ ಹೂಡಿಕೆ ಅಂತ ಸರ್ಕಾರದ ಲೆಕ್ಕಾಚಾರ. ಅದಕ್ಕೆ ಈ ವರ್ಷ ಮುಗಿದು, ಮುಂದಿನ ವರ್ಷ ಶುರು ಆಗೋ ಹೊತ್ತಿಗೆ ಈಗಿರೋ ನಮ್ಮಂಥಾ ಕಂಪನಿಗಳೆಲ್ಲಾ ಮುಚ್ಚಿಹೋಗಿ ಅವುಗಳ ಜಾಗದಲ್ಲಿ ಈ ದೊಡ್ಡ ಕಂಪೆನಿ ಬರುತ್ತೆ. ಅವ್ರಿಗೇ ಎಲ್ಲಾ ಕಾಂಟ್ರಾಕ್ಟುಗಳೂನು.

ದರ್ಶನ್ : ಹಾಗಾದ್ರೆ, ನಮ್ಗತಿ ? ಇದುವರೆಗೂ ಹೇಗೋ ಈ ದಂಧೆ ನಡೆಸ್ಕೊಂಡು ಚೆನ್ನಾಗಿದ್ವಿ. ಇನ್ಮೇಲೇನೋ ಮಾಡೋದು ?

ಸದ್ಗುರು : ಮಾಡೋದೇನಿದೆ ? ಸದ್ಯಕ್ಕಂತೂ ಏನೂ ತೋಚ್ತಾ ಇಲ್ಲ. ನಾವೂ ಆ ಡಾಟ್ ಕಂಪನಿ ಹತ್ರ ಮೇಷ್ಟ್ರುಗಳಾಗಿ ಸೇರೋಣ. ಆಮೇಲೆ ಅಲ್ಲೇನೇ ಏನೋ ಒಂದು ದಾರಿ ಸಿಗದೇ ಹೋಗೋದಿಲ್ಲ. ಆಗ ನಾವೆ ಮತ್ತೊಂದೇನಾದ್ರೂ ಶುರು ಮಾಡೋಣ. ಬೇರೆ ಇನ್ನೊಬ್ಬ ದೊಡ್ಡ ಮೀನು ನುಂಗೋವರ್ಗೂ ಇರೋಣ. ಸದ್ಯಕ್ಕಂತೂ ಈ ನಮ್ಮ 'ಸದ್ಗುರು ದರ್ಶನ' ಬೋರ್ಡ್‌ಗೆ ಆಯಸ್ಸು ಮುಗೀತು. ಸರಿ ! ಇವತ್ತಿಗೆ ಅಂಗಡಿ ಮುಚ್ಚಿ ಹೊರಡೋಣ ನಡಿ !!

**ನಗರಗೆರೆ ರಮೇಶ್**
೩೬೬, ೮ನೇ ಅಡ್ಡರಸ್ತೆ ೮ನೇ ಮುಖ್ಯರಸ್ತೆ ಪದ್ಮನಾಭನಗರ, ಬೆಂಗಳೂರು - ೭೦

# ಜಿಹ್ವಾ ಪ್ರಪಂಚ

ಎಮ್. ಆರ್. ಎನ್. ಮೂರ್ತಿ



**ಹೊ**ಟ್ಟೆಬಾಕತನ ಅನೇಕರ ಗೀಳು ಆಗಿಲ್ಲದಿದ್ದಲ್ಲಿ ನಮ್ಮ ಹಿರಿಯರು 'ಬದುಕುವುದಕ್ಕೆ ಉಣ್ಣಬೇಕೇ ಹೊರತು ಉಣ್ಣುವುದಕ್ಕೆ ಬದುಕಬಾರದು' ಎಂದು ನಮಗೆ ಬುದ್ಧಿ ಹೇಳುತ್ತಿರಲಿಲ್ಲ. ನಾಲಿಗೆಯ ಚಪಲ ತಡೆದುಕೊಳ್ಳುವುದು ಬಲು ಕಷ್ಟ. ನಮ್ಮಲ್ಲಿ ಮೊದಲಿನಿಂದಲೂ ಏನೂ ಕೆಲಸವಿಲ್ಲದಿದ್ದಾಗ ವೀಳ್ಯ ಮೇಯುತ್ತಿದ್ದರು. ಕೊಲಂಬಸ್ ಅಮೆರಿಕಾ ಕಂಡನಂತರ ವೀಳ್ಯದೊಟ್ಟಿಗೆ ಹೊಗೆಸೊಪ್ಪು ಹಾಸುಹೊಕ್ಕಾಗಿ ಬೆರೆತಿತು. ಇಂದು ಅನೇಕರು ವೀಳ್ಯದ ಜಾಗದಲ್ಲಿ ಗುಟಕಾ ಮೇಯುತ್ತಾರೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ, ಅದೂ ಹೆಚ್ಚಾಗಿ ಅಲ್ಲಿಯ ಹೆಂಗಸರು, ಒಂದೇ ಸಮನೆ ಚೂಯಿಂಗ್ ಗಂ ಜಗಿಯುತ್ತಿರುತ್ತಾರೆ. ಇನ್ನೇನೂ ಸಿಕ್ಕದಿದ್ದರೆ, ನಮ್ಮ ಉಗುರನ್ನೇ ಪದರ ಪದರವಾಗಿ ಬಿಡಿಸಿಕೊಂಡು ಮೆಲ್ಲಬಹುದು. ಒಟ್ಟಿನಲ್ಲಿ ಬಾಯಿಗೆ, ನಾಲಿಗೆಗೆ ಏನಾದರೂ ಕೆಲಸ ಇರಲೇಬೇಕು. ಪಶ್ಚಿಮದ ದೇಶಗಳಲ್ಲಿ ಒಬ್ಬ ವ್ಯಕ್ತಿ ತನ್ನ ಜೀವಿತದ ಅವಧಿಯಲ್ಲಿ ಸರಾಸರಿ ೮ ಪೂರ್ಣ ಬೆಳೆದ ದನ, ೩೫ ಕುರಿ, ೭೫೦ ಕೋಳಿಗಳನ್ನು ನುಂಗುತ್ತಾನಂತೆ. ನಮ್ಮಲ್ಲಿ ಎಲ್ಲರ ಹೊಟ್ಟೆಯನ್ನೂ ಸಾಧಾರಣವಾಗಿ ತುಂಬುವುದು ಅನ್ನವೇ. ಬಹುಶಃ ನಮ್ಮ ಜೀವಿತದ ಅವಧಿಯಲ್ಲಿ ನಾವು ೧೫,೦೦೦ ಕಿಲೋಗ್ರಾಂ ಅಕ್ಕಿ ಅಥವಾ ಇತರ ಧಾನ್ಯಗಳನ್ನು ಕಬಳಿಸಿರುತ್ತೇವೆ.

ನಾಲಿಗೆಯ ತೃಪ್ತಿಗಾಗಿ ನಾವು ಮಾಡಿರುವ ಆವಿಷ್ಕಾರಗಳು ಲೆಕ್ಕವಿಲ್ಲದಷ್ಟು. ದಿನನಿತ್ಯ ಉಣ್ಣುವ ಅನೇಕ ಬಗೆಯ ಖಾರ, ಹುಳಿ, ಸಿಹಿ ತಿನಿಸುಗಳು ಹಾಗಿರಲಿ, ನಾವು ಕಂಡುಕೊಂಡಿರುವ, ಬದುಕಲು ಅನಗತ್ಯವಾಗಿರುವ, ಇತರ ಖಾದ್ಯಗಳ ಪಟ್ಟಿಯನ್ನು ಗಮನಿಸಿದರೆ ನಿಜಕ್ಕೂ ಆಶ್ಚರ್ಯವಾಗುತ್ತದೆ. ಜನ ತಿಂದು ತೇಗುವ ಸಸ್ಯ ಹಾಗೂ ಪ್ರಾಣಿಗಳ ಪಟ್ಟಿ ಮಾಡುವುದು ಸುಲಭ ಸಾಧ್ಯವಲ್ಲ. ಮರ ಕಡಿದಾಗ ಹೊರಬರುವ ಗೋಂದನ್ನು ತುಪ್ಪದಲ್ಲಿ ಹುರಿದು, ಬೆಲ್ಲ, ಹುರಿದ ದ್ರಾಕ್ಷಿ, ಗಸಗಸೆ, ಗೋಡಂಬಿಗಳ ಜೊತೆ ಉಂಡೆಮಾಡಿ ಮೆಲ್ಲುವ ನಮ್ಮ ಚಾತುರ್ಯ ಹೊಗಳಿ ಮುಗಿಯುವಂತಹದ್ದಲ್ಲ. ಚೀನಾ ಮೂಲದ ಕೆಲಜನರಿಗೆ ಹಾವಿನ ಊಟವೆಂದರೆ ಬಲು ಮೋಜಿನದಂತೆ. ನಮ್ಮಲ್ಲಿಯೂ ಕೇರಳದ ಕಡೆ ಹಾವನ್ನುಂಡು ತೇಗುವವರಿದ್ದಾರೆ ಎಂದು ಕೇಳಿದ್ದೇನೆ. ತಮಿಳುನಾಡಿನ ಕೆಲ ಬಡ ಜನ ಗದ್ದೆಗಳಲ್ಲಿರುವ ಇಲಿಗಳನ್ನು ತಿನ್ನುತ್ತಾರಂತೆ. ಹಸಿವು ಅರ್ಧ ಮಾತ್ರ ಕಾರಣ. ಇನ್ನರ್ಧ ಕಾರಣ ಸುಟ್ಟ ಇಲಿ ಮಾಂಸದ ರುಚಿಯೇ. ನಮ್ಮ ರಾಜ್ಯದ ಮಲೆನಾಡು ಪ್ರದೇಶಗಳಲ್ಲಿ ಬಿದಿರು ಕುಡಿ ಎಂದರೆ ಜನರಿಗೆ ಬಲು ಹುಚ್ಚು. ಬಿದಿರು ಕುಡಿಯನ್ನು ಚೆನ್ನಾಗಿ ತೊಳೆಯದೇ ಬಳಸಿದರೆ ಅಪಾಯ ತಪ್ಪಿದ್ದಲ್ಲ. ಹಾಗೆಯೇ, ಕೆಲವು ಜಾತಿಯ ಕೆಸವಿನ ಗಡ್ಡೆಗಳನ್ನು ಚೆನ್ನಾಗಿ ತೊಳೆಯದೇ ತಿಂದಾಗ ಬಾಯಿ ಕಡಿತ ಪ್ರಾರಂಭವಾಗುತ್ತದೆ. ಆದರೂ, ಜನ ಇವುಗಳಿಂದಾಗಿ ಆಸೆಪಡುವುದನ್ನು ಬಿಡುವುದಿಲ್ಲ. ಇದೇ ರೀತಿ ಜಪಾನಿನ ಜನರಿಗೆ ಒಂದು ಜಾತಿಯ ಮೀನಿನ ಮೇಲೆ ಬಲು ಪ್ರೀತಿ. ಈ ಮೀನಿನ ಖಾದ್ಯದ ತಯಾರಿಕೆಯಲ್ಲಿ ಸ್ವಲ್ಪ ಎಚ್ಚರ ತಪ್ಪಿದರೂ ತಿಂದವನ ಗತಿ ಮುಗಿಯುತ್ತದೆ. ಪ್ರತಿವರ್ಷ ಕೆಲವರಾದರೂ ಈ ಮೀನನ್ನು ತಿಂದು ಜೀವ ಕಳೆದುಕೊಳ್ಳುತ್ತಾರೆ. ಆದರೂ ತಿನ್ನುವುದನ್ನು ಮಾತ್ರ ಬಿಡರು. ಒಮ್ಮೆ ನನಗೆ ಎರಡು ಚೀನೀ ತಿನಿಸುಗಳ ಪರಿಚಯ ಭಾಗ್ಯ ದೊರೆಯಿತು. ಒಂದಕ್ಕೆ 'ಎಂಬ್ರಿಯಾನಿಕ್ ಎಗ್' ಎಂದು ಕರೆಯುತ್ತಿದ್ದರು. ಫಲಿತ ಮೊಟ್ಟೆಯನ್ನು ಇನ್ಕ್ಯುಬೇಟರಿನಲ್ಲಿಟ್ಟು ಶಾಖ ಕೊಡಬೇಕಂತೆ. ಅದು ೨೧ ದಿನಗಳಲ್ಲಿ ಮರಿಯಾಗಿ ಹೊರಬರುತ್ತದಷ್ಟೆ. ಆದರೆ ಇದಕ್ಕೂ ಮೊದಲು, ಎಂದರೆ ಸುಮಾರು ೧೮ ದಿನಗಳ ನಂತರ, ಮೊಟ್ಟೆಯನ್ನು ತೆಗೆದು ಬೇಯಿಸಬೇಕಂತೆ. ಅದೇ ಮೊಟ್ಟೆಯೂ ಅಲ್ಲದ, ಕೋಳಿಯೂ ಅಲ್ಲದ ವಿಶಿಷ್ಟ ಸ್ವಾದದ 'ಎಂಬ್ರಿಯಾನಿಕ್ ಎಗ್.' ಇನ್ನೊಂದು ತಿನಿಸೂ ಮೊಟ್ಟೆಯದೇ. ಇದನ್ನು ಗಳಿಸಲು, ಹೊಸದಾಗಿ ಸಂಪಾದಿಸಿದ ಮೊಟ್ಟೆಯನ್ನು ಮಣ್ಣಿನಲ್ಲಿ ಹುಗಿಯುತ್ತಾರೆ. ೪೦ ದಿನ ಕೊಳೆಸುತ್ತಾರೆ. ಹೊರ ತೆಗೆದ ನಂತರ ಸಹಿಸಲಸಾಧ್ಯವಾದ ವಾಸನೆಯಿದ್ದರೂ, ನಾಲಿಗೆಗೆ ತಡೆಯಲಾರದ ಬಯಕೆ ಹುಟ್ಟಿಸುವಷ್ಟು ರುಚಿಯಂತೆ ! ನಮ್ಮ ಆವಿಷ್ಕಾರಗಳ ಪಟ್ಟಿ, ಖಾದ್ಯ ವಸ್ತುಗಳಿಗೇ ಸೀಮಿತವಾಗಿಲ್ಲ. ಉದಾಹರಣೆಗೆ, ದ್ರಾಕ್ಷಾರಸವನ್ನೇ ತೆಗೆದುಕೊಳ್ಳಿ. ಅದೆಷ್ಟು ವಾಸನೆಯ, ರುಚಿಯ, ಬಣ್ಣದ ದ್ರಾಕ್ಷಾರಸವನ್ನು ತಯಾರಿಸಲು ಕಲಿತಿದ್ದೇವೆ ! ದ್ರಾಕ್ಷಾರಸವು ಮತ್ತು ಬರಿಸುವ ನೂರಾರು ದ್ರವ್ಯಗಳಲ್ಲಿ ಒಂದು ಮಾತ್ರ. ಮತ್ತು ಬರಿಸದ ಪಾನೀಯಗಳಿಗೇನೂ ಕೊರತೆಯಿಲ್ಲ. ಬೆಲ್ಲ - ಬೇಲದ ಹಣ್ಣಿನ ಪಾನಕ ಯಾರ ಬಾಯಲ್ಲಿ ನೀರೂರಿಸುವುದಿಲ್ಲ ? ದುಬಾರಿ ಬೆಲೆಯಿಂದಲೇ ಪ್ರಖ್ಯಾತಿ ಪಡೆದಿರುವ, ಯುವ ಜನರನ್ನು ಮರುಳುಮಾಡಿರುವ ಕೋಲಾಗಳಿಗೆ ಮಿತಿಯುಂಟೇ ? ಮಿಕ್ಕ ತಂತ್ರಜ್ಞಾನಗಳ ಆವಿಷ್ಕಾರಕ್ಕೂ ಮೊದಲೇ ಇಂತಹ ಅನೇಕ ಪಾಕತಂತ್ರಗಳನ್ನು ಕರಗತ ಮಾಡಿಕೊಂಡಿದ್ದೇವೆ.

ಜಿಹ್ವಾ ಚಾಪಲ್ಯದ ಪ್ರಬಲತೆಯನ್ನು ಕುರಿತು ಒಂದು ಸ್ವಾರಸ್ಯಕರ ಕಥೆ ಕೇಳಿದ್ದೇನೆ. ಹಿಂದೊಂದು ಕಾಲದಲ್ಲಿ ಹಂದಿಗಳನ್ನು ದೇವರೆಂದು ಪೂಜಿಸುತ್ತಿದ್ದರಂತೆ. ಆದ್ದರಿಂದ ಅವುಗಳನ್ನು ಕೊಲ್ಲುವುದು ಮಹಾ ಪಾತಕವೆನಿಸಿತ್ತು. ಎಲ್ಲರೂ ಅವರವರ ಕೊಟ್ಟಿಗೆಗಳಲ್ಲಿ, ನಮ್ಮಲ್ಲಿ ಹಾಲು ಕೊಡದ ಹಸುಗಳನ್ನು ಪೂಜೆಗಾಗಿ ಕಟ್ಟಿಕೊಳ್ಳುತ್ತಿದ್ದಂತೆ, ಹಂದಿಗಳನ್ನು ಕಟ್ಟಿಕೊಳ್ಳುತ್ತಿದ್ದರಂತೆ. ಒಮ್ಮೆ ಇಂತಹ ಹಂದಿಗಳ ಗುಡಿಸಲಿಗೆ ಬೆಂಕಿ ಬಿದ್ದು, ಹಂದಿಗಳು ಹದವಾಗಿ ಬೆಂದವಂತೆ. ಮನೆಯ ಪುಟ್ಟ ಹುಡುಗ ಕುತೂಹಲಕ್ಕೆ ಒಳಹೊಕ್ಕವನು ತನ್ನ ಬೆರಳನ್ನು ಸುಟ್ಟ ಹಂದಿಯ ದೇಹಕ್ಕೆ ತೂರಿಸಿದ. ಒಳಗೆ ಇನ್ನೂ ಬಿಸಿ ಇದ್ದುದರಿಂದ ಬೆರಳು ಸುಟ್ಟಿತು. ತಕ್ಷಣ ಪರಿಹಾರ ದೊರಕಿಸಿಕೊಳ್ಳಲು ಬಾಯಿಯಲ್ಲಿ ಇಟ್ಟುಕೊಂಡ. ಅದರ ರುಚಿಗೆ ಮರುಳಾಗಿ, ಪದೇ ಪದೇ ಬೆರಳನ್ನು ಚುಚ್ಚುವುದು, ತಿರುಗಿ ಬಾಯಿಗೆ ತುರುಕಿ ಕೊಳ್ಳುವುದು ಇದನ್ನೇ ಮಾಡಲು ಪ್ರಾರಂಭಿಸಿದ. ಸ್ವಲ್ಪ ಸಮಯದ ನಂತರ ಅಲ್ಲಿಗೆ ಆಕಸ್ಮಾತ್ತಾಗಿ ಬಂದ ಅವನ ತಂದೆಗೆ ಸಿಡಿಲು ಬಡಿದಂತಾಯಿತು. ಶಿವ ಶಿವಾ ! ತನ್ನ ಮಗ ಹಂದಿ ಮುಕ್ಕುತ್ತಿದ್ದಾನೆ. ಅಪ್ಪನಿಗೆ ಕೋಪವೇರಿತು. ಒಂದೇ ಸಮನೆ ಮಗನನ್ನು ತದುಕಲು ಪ್ರಾರಂಭಿಸಿದ. ಮಗನಿಗೆ ತನ್ನ ಮೇಲೆ ಬೀಳುತ್ತಿರುವ ಏಟುಗಳ ಪರಿವೆಯೇ ಇಲ್ಲ. ಪೂರ್ಣ ಗಮನ ತಿನ್ನುವುದರಲ್ಲಿಯೇ. ಸಾಕಷ್ಟು ಹೊಡೆದು ಕೈ ನೋಯಲು ಪ್ರಾರಂಭಿಸಿದ ನಂತರ ತಂದೆಯ ಕುತೂಹಲ ಕೆರಳಿತು. ಇದೇನು ಇಷ್ಟು ಹೊಡೆದರೂ ಮಗನ ಗಮನಕ್ಕೇ ಬಾರದಂತಹ ಸ್ವಾರಸ್ಯ ಇದರಲ್ಲಿ ಏನಿರಬಹುದು ? ಪರೀಕ್ಷಿಸಿ ತಿಳಿದುಕೊಳ್ಳಲು ತಂದೆಯೂ ತನ್ನ ಮಗನನ್ನೇ ಅನುಸರಿಸಿದ. ನಂತರ ಜನ ಹಂದಿ ತಿನ್ನಬೇಕಾದಾಗಲೆಲ್ಲಾ ತಮ್ಮ ದೇವರ ಮನೆಗೆ ಬೆಂಕಿ ಹಚ್ಚುತ್ತಿದ್ದರಂತೆ !

ನಮ್ಮ ನಾಲಿಗೆಯ ಗುಣ ಲಕ್ಷಾಂತರ ವರ್ಷಗಳಿಂದ ನಡೆದಿರುವ ವಿಕಾಸದ ಫಲ. ನಾಗರಿಕತೆ ಬೆಳೆಯುವುದಕ್ಕೆ ಮೊದಲು, ಮನುಷ್ಯರಿಗೆ ಸಾಧಾರಣವಾಗಿ ತಿನ್ನಲು ಸಿಕ್ಕುತ್ತಿದ್ದುದು ಹೆಚ್ಚು ಕೊಬ್ಬು ಅಥವಾ ಸಿಹಿ ಇಲ್ಲದ, ಕಡಿಮೆ ಕಲೋರಿಗಳ, ಕಾಡಿನಲ್ಲಿ ಸಹಜವಾಗಿ ದೊರೆಯುತ್ತಿದ್ದ ಕಾಯಿ, ಸೊಪ್ಪು, ಗೆಡ್ಡೆ, ಗೆಣಸು ಇಂತಹ ಆಹಾರಗಳೇ. ಸದಾ ಮೆಲ್ಲುತ್ತಿದ್ದರೆ ಮಾತ್ರ ಇಂತಹ ಆಹಾರಗಳಿಂದ ನಮಗೆ ಸಾಕಷ್ಟು ಶಕ್ತಿ ದೊರೆಯಬಲ್ಲದು. ಇಂದಿಗೂ ಹಸುಗಳು ಸದಾ ಹುಲ್ಲು ಮೇಯದಿದ್ದರೆ ಅವುಗಳ ಹೊಟ್ಟೆ ತುಂಬಲಾರದು. ಅವುಗಳಿಗೆ ಸಾಕಷ್ಟು ಶಕ್ತಿ ಇರದು. ಹುಲ್ಲಿನಿಂದ ಪಡೆಯಬಹುದಾದ ಶಕ್ತಿ, ಕಾಳುಗಳಿಂದಾಗಲಿ, ಮಾಂಸದಿಂದಾಗಲಿ ಪಡೆಯಬಹುದಾದ ಶಕ್ತಿಗೆ ಹೋಲಿಸಿದರೆ ಕಡಿಮೆ. ಇಂತಹ ಕಡಿಮೆ ಕಲೋರಿಯ ಆಹಾರವನ್ನೇ ಹೆಚ್ಚಾಗಿ ತಿನ್ನುತ್ತಿದ್ದ ಮನುಷ್ಯನಿಗೆ ದಿನವಿಡೀ

ತಿನ್ನುವುದು ಅಗತ್ಯವಿತ್ತು. ಅದೇ ಅಭ್ಯಾಸ ಇಂದು ನಮಗೆ ಅಗತ್ಯವಿಲ್ಲದಿದ್ದರೂ ಬಿಡಲು ಕಷ್ಟವೆನಿಸುವುದು ಸಹಜವೇ. ಆದ್ದರಿಂದಲೇ ನಮ್ಮ ಬಾಯಿ ಯಾವಾಗಲೂ ಏನನ್ನಾದರೂ ತಿನ್ನಲು ಕೇಳುತ್ತಲೇ ಇರುತ್ತದೆ. ಇದು ಇತ್ತೀಚಿನ ದುರಭ್ಯಾಸವಲ್ಲ.

ನಾಲಿಗೆ ಹರಿದಾಡುವ ಹಾಗೆ ನಮ್ಮ ದೇಹದ ಇನ್ನಾವ ಭಾಗವೂ ಚಲಿಸಲಾರದು. ಇದು ಒಮ್ಮೆ ದಪ್ಪವಾಗಿ, ಮತ್ತೊಮ್ಮೆ ತೆಳ್ಳಗೆ ಉದ್ದವಾಗಿ, ಇನ್ನೂ ಅನೇಕ ನೃತ್ಯ ಭಂಗಿಗಳಲ್ಲಿ ತನ್ನ ಗಾತ್ರವನ್ನು, ಆಕಾರವನ್ನು ಬದಲಾವಣೆ ಮಾಡಿಕೊಳ್ಳಬಲ್ಲದು. ಆದ್ದರಿಂದಲೇ ಬಾಯಿ ತುಂಬಾ ತುಂಬಿಕೊಂಡ ಆಹಾರವನ್ನು ಹಲ್ಲುಗಳು ಚಟ್ನಿ ಮಾಡುತ್ತಿದ್ದಂತೇ, ನಾಲಿಗೆ ಒಂದೇ ಸಮನೆ ರುಬ್ಬಿ ಕೊಡುತ್ತದೆ. ಜೊತೆಗೇ ಬಾಯಿಯಲ್ಲಿರುವ ಗ್ರಂಥಿಗಳು ಜೊಲ್ಲು ಸುರಿಸುತ್ತವೆ. ಜೊಲ್ಲಿನಲ್ಲಿ ಅನೇಕ ಪ್ರೋಟೀನ್ ಕಿಣ್ವಗಳಿದ್ದು, ಆಹಾರ ಪಚನ ಕ್ರಿಯೆಯನ್ನು ಪ್ರಾರಂಭಿಸುತ್ತವೆ. ಹೊಟ್ಟೆ ತಲುಪುವುದರೊಳಗೇ ಆಹಾರ ಭಾಗಶಃ ಪಚನವಾಗಿರುತ್ತದೆ.

ನಮ್ಮ ಜಿಹ್ವಾಗ್ರಂಥಿಗಳ ಕಾರ್ಯಕ್ಷೇತ್ರ ನಮ್ಮ ಬಾಯಿಗೆ ಮಾತ್ರ ಸೀಮಿತ. ಆದರೆ ವಿಷಜಂತುಗಳಾದ ಹಾವುಗಳು ಇದಕ್ಕೂ ಹೆಚ್ಚಿನ ಸಾಧನೆ ಮಾಡಿವೆ. ಇವುಗಳು ಕಚ್ಚಿದಾಗ ಇಲಿಯ ಇಲ್ಲವೇ ಕಪ್ಪೆಯ ದೇಹವನ್ನು ಪ್ರವೇಶಿಸುವ ವಿಷ, ಹಾವು ಅದನ್ನು ಕಬಳಿಸುವ ಮೊದಲೇ ಪಚನಕ್ರಿಯೆ ಪ್ರಾರಂಭಿಸಿರುತ್ತದೆ. ವಿಷವೇರಿ ಸತ್ತ ಪ್ರಾಣಿಯನ್ನು ಹಾವು ನುಂಗಲು ಪ್ರಾರಂಭಿಸುವುದರೊಳಗೇ ಜೀರ್ಣಕ್ರಿಯೆ ಸುಮಾರು ದೂರ ಸಾಗಿರುತ್ತದೆ.

ಬಾಡ್ಮರ್ ಎಂಬ ವಿಜ್ಞಾನಿ ದಕ್ಷಿಣ ಅಮೆರಿಕಾದ ಕಾಡಿನಲ್ಲಿ ವಾಸಿಸುತ್ತಿದ್ದು, ಇತ್ತೀಚಿನವರೆಗೂ ನಾಗರಿಕ ಸಮಾಜದ ಸಂಪರ್ಕ ಹೊಂದಿರದಿದ್ದ ಬುಡಕಟ್ಟು ಜನರ ಆಹಾರಾಭ್ಯಾಸವನ್ನು, ಅದರಿಂದ ಈ ಜನರ ದೇಹಾರೋಗ್ಯದ ಮೇಲಾಗುವ ಪರಿಣಾಮಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಈ ಜನ, ತಮಗೆ ಸಿಕ್ಕುವ ಖಾದ್ಯಯೋಗ್ಯವಾದ ಎಲ್ಲವನ್ನೂ ತಿನ್ನುತ್ತಾರೆ. ಇವರ ಊಟದೆಲೆಗೆ ಗೆಡ್ಡೆ, ಗೆಣಸು, ಹಣ್ಣು, ಕೀಟ, ಪಕ್ಷಿ, ಪ್ರಾಣಿ, ಎಲ್ಲಕ್ಕೂ ಸ್ವಾಗತ. ಇವರಿಗೆ ಉಪ್ಪಿನ ಇಲ್ಲವೇ ಸಕ್ಕರೆಯ ಪರಿಚಯವೇ ಇರಲಿಲ್ಲ. ನಮ್ಮ ಊಟದಲ್ಲಿ ಉಪ್ಪಿಲ್ಲದಿದ್ದರೆ ಸ್ವಲ್ಪ ದಿನಗಳಲ್ಲೇ ನಿತ್ರಾಣಗೊಳ್ಳುತ್ತೇವೆ. ಈ ಜನ ಉಪ್ಪಿಲ್ಲದ ಊಟವನ್ನೇ ಜೀವನಪರ್ಯಂತ ಉಂಡು ಆರೋಗ್ಯದಿಂದಿರುತ್ತಿದ್ದರು. ಆಹಾರದಲ್ಲಿ ಸಹಜವಾಗಿ ದೊರಕುವ ಅಲ್ಪ ಪ್ರಮಾಣದ ಉಪ್ಪನ್ನೇ ನಿಶ್ಶೇಷವಾಗಿ ಹೀರಿಕೊಳ್ಳುವ ವ್ಯವಸ್ಥೆ (ಪ್ರೋಟೀನ್ ಕಿಣ್ವಗಳು) ಈ ಜನರ ಪಚನಾಂಗಗಳಲ್ಲಿ ಸದಾ ಜಾಗೃತವಾಗಿರುತ್ತದೆ. ಜೊತೆಗೆ, ತಿನ್ನಬಹುದಾದ ಆಹಾರದಲ್ಲಿ ನಿಷೇಧವೇ ಇಲ್ಲದುದರಿಂದ, ಇವರು ತಿನ್ನುವ ಒಂದಲ್ಲ ಒಂದು ತಿನಿಸಿನಲ್ಲಿ ಉಪ್ಪಿನಂಶ ಸ್ವಲ್ಪ ಹೆಚ್ಚಿದ್ದು, ಉಪ್ಪಿನ ಅಭಾವ ಇವರಲ್ಲಿ ಕಾಣಿಸುತ್ತಿರಲಿಲ್ಲ. ಸಕ್ಕರೆ ತಿನ್ನದಿದ್ದುದರಿಂದ, ಇವರಲ್ಲಿ ಹುಳುಕು ಹಲ್ಲುಗಳು ಬಲು ಅಪರೂಪ. ಹಲವಾರು ದಶಕಗಳ ಹಿಂದೆ ಈ ಜನರನ್ನು ಸ್ವರ್ಗಕ್ಕೆ ಕಳಿಸಲು ಕ್ರಿಶ್ಚಿಯನ್ ಪಾದ್ರಿಗಳು ಪಣತೊಟ್ಟು ಅವರ ಕೆಲವು ಹಳ್ಳಿಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ತಮ್ಮೊಡನೆ ಸಕ್ಕರೆಯನ್ನೂ ಕಾಡಿಗೆ ಕೊಂಡೊಯ್ದರು. ಈ ಪಾದ್ರಿಗಳ ಸಂಪರ್ಕ ಬೆಳೆಸಿದ ಜನರ ಹಲ್ಲುಗಳು ಡೊಗರು ಕೊರೆಯುವ ಬ್ಯಾಕ್ಟೀರಿಯಾಗಳಿಗೆ ಒಳ್ಳೆಯ ತಾಣಗಳಾದವು. ನಾಗರಿಕ ಜನಾಂಗಕ್ಕೆ ಮೀಸಲಾದ ಶಾಪ ಇವರಿಗೂ ತಟ್ಟಿತು. ನಮ್ಮಲ್ಲಿಯೂ ಹಾಲು ಕಡಿಮೆಯಿದ್ದ ಹಿಂದಿನ ಕಾಲದಲ್ಲಿ, ಇಂದು ದೊರೆಯುವ ಚಾಕೊಲೇಟುಗಳು, ಪೆಪ್ಪರ್ ಮಿಂಟುಗಳು ಧಾರಾಳವಾಗಿ ದೊರೆಯುತ್ತಿರಲಿಲ್ಲ. ಇಂದು ಪುಟ್ಟ ಮಕ್ಕಳಿಗೆ ಚಾಕೊಲೇಟ್ ಗೀಳು ಬಹಳ. ಇದರ ಪ್ರತಿಫಲ, ಇನ್ನೂ ಯೌವನಾವಸ್ಥೆಯನ್ನು ತಲುಪುವ ಮೊದಲೇ ದಂತವೈದ್ಯರಲ್ಲಿಗೆ ಓಡಬೇಕಾಗುತ್ತದೆ, ಹಲ್ಲಿನ ಹಲವಾರು ಸಂದಿ, ಗೊಂದಿಗಳನ್ನು ಮುಚ್ಚಿಸಿಕೊಳ್ಳಬೇಕಾಗುತ್ತದೆ.

ನಮ್ಮ ನಾಲಿಗೆಯ ಸ್ಪರ್ಶ ಸಂವೇದನೆ ಬಹಳ ಸೂಕ್ಷ್ಮ. ಇದನ್ನು ನಿಯಂತ್ರಿಸಲೆಂದೇ ಮಿದುಳಿನ ದೊಡ್ಡ ಭಾಗ ಮೀಸಲಾಗಿದೆ. ಬಾಯಿಯಲ್ಲಿ ಅಲ್ಪ ವ್ಯತ್ಯಾಸವಾದರೂ ನಾಲಿಗೆಗೆ ತಕ್ಷಣ ತಿಳಿಯುತ್ತದೆ. ಬಾಯೊಳಗೆಲ್ಲಾ ಹೊರಳಾಡಿ ನಾಲಿಗೆ ಅಲ್ಲಿ ಇರಬಹುದಾದ ಎಲ್ಲ ಉಬ್ಬು ತಗ್ಗುಗಳನ್ನೂ ಗೊತ್ತು ಹಚ್ಚಿ, ಅತಿ ಸಣ್ಣ ಗುಳ್ಳೆ ಇದ್ದರೂ, ಅದನ್ನೇ ಉತ್ಪ್ರೇಕ್ಷೆ ಮಾಡಿ ನಮ್ಮ ಅರಿವಿಗೆ ಬರಿಸುತ್ತದೆ. ಆದ್ದರಿಂದಲೇ ನಮ್ಮ ನಾಲಿಗೆ ಬಾಯಲ್ಲಿ ಅಡ್ಡಾಡಿ, ಅಲ್ಲಿ ದೊಡ್ಡ ಹುಣ್ಣೊಂದಿದೆ ಎಂದು ನಮಗೆ ತಿಳಿಸಿದಾಗ, ಪಕ್ಕದಲ್ಲಿರುವವರ ಸಹಾನುಭೂತಿ ದೊರಕಿಸಿಕೊಳ್ಳಲು ನಾವು ಬಾಯಿ ತೆಗೆದು ತೋರಿಸಿದರೆ ಅವರಿಗೆ ಹುಣ್ಣು ಕಾಣಿಸುವುದೇ ಇಲ್ಲ.

ಅನೇಕ ಪ್ರಾಣಿಗಳು ನಾಲಿಗೆಯನ್ನು ಇನ್ನೂ ಅನೇಕ ಬಗೆಗಳಲ್ಲಿ ಬಳಸಲು ಕಲಿತುಕೊಂಡಿವೆ. ಕಪ್ಪೆ ತನ್ನ ನಾಲಿಗೆಯನ್ನು ಬಹು ಉದ್ದಕ್ಕೆ ಚಾಚಿ, ಗಾಳಿಯಲ್ಲಿ ಹಾರುತ್ತಿರುವ ಕೀಟಗಳನ್ನು ನಾಲಿಗೆಯ ಮೇಲಿರುವ ಗೋಂದಿಗೆ ಅಂಟಿಸಿಕೊಂಡು ಬಾಯೊಳಗೆ ಸೆಳೆದುಕೊಳ್ಳುತ್ತದೆ. ಅನೇಕ ಪ್ರಾಣಿಗಳು ಆಗತಾನೆ ಹುಟ್ಟಿದ ಮರಿಯನ್ನು ನೆಕ್ಕಿ ಶುದ್ಧ ಮಾಡುತ್ತವೆ. ಇದರಿಂದ ಮರಿಯ ವಾಸನೆ ತಾಯಿಗೆ ತಿಳಿಯುವುದೇ ಅಲ್ಲದೆ, ಮರಿಯ ಮೈಮೇಲಿರುವ ಕೀಟಗಳ ನಿವಾರಣೆಯಾಗುತ್ತದೆ. ಹುಲಿ, ಸಿಂಹ ಮುಂತಾದ ಪ್ರಾಣಿಗಳ ನಾಲಿಗೆಯಲ್ಲಿ ಗರಗಸದಂತೆ ಉಬ್ಬು ತಗ್ಗುಗಳಿದ್ದು, ಮಾಂಸವನ್ನು ಕತ್ತರಿಸಿಕೊಳ್ಳಲು ಯೋಗ್ಯವಾಗಿವೆ. ಸಿಂಹದ ಹಿಂಡು ದೊಡ್ಡ ಬೇಟೆಯನ್ನು ತಿಂದಾದ ಬಳಿಕ, ಮುಖಕ್ಕೆಲ್ಲಾ ಮೆತ್ತಿಕೊಂಡಿರುವ ರಕ್ತ, ಮಾಂಸಗಳ ತುಂಡುಗಳನ್ನು ಪರಸ್ಪರ ನೆಕ್ಕಿ ಶುದ್ಧಿ ಮಾಡಿಕೊಳ್ಳುತ್ತವೆ. ಇದರಿಂದ ಚರ್ಮವ್ಯಾಧಿ ತಪ್ಪಿಸಿಕೊಳ್ಳುತ್ತವೆ.




ನಮ್ಮ ನಾಲಿಗೆಯ ತೀಟೆ ಮಿತಿಯಿಲ್ಲದ್ದಾದರೂ, ಅದು ಅನುಭವಿಸಲು ಶಕ್ತವಾದ ರುಚಿಗಳು ಮಾತ್ರ ಹೆಚ್ಚಿಲ್ಲ. ನಾವು ತುಂಬ ರುಚಿಯೆಂದು ತಿನ್ನುವ ಪದಾರ್ಥಗಳು ರುಚಿಗಿಂತಲೂ ವಾಸನೆಯಿಂದಲೇ ನಮ್ಮನ್ನು ಹೆಚ್ಚು ತೃಪ್ತಿಪಡಿಸುತ್ತವೆ. ನಾವು ಅನುಭವಿಸುವ ರುಚಿಗಳನ್ನೆಲ್ಲಾ ಸುಲಭವಾಗಿ ಪಟ್ಟಿ ಮಾಡಿ ಬಿಡಬಹುದು. ಹುಳಿ, ಸಿಹಿ, ಖಾರ, ಕಹಿ ಎಂದರೆ ಮುಗಿಯಿತು ನಮ್ಮ ಜಿಹ್ವಾ ಸಾಮರ್ಥ್ಯ. ನಾಲಿಗೆಯ ಬೇರೆ ಬೇರೆ ಭಾಗಗಳು ಬೇರೆ ಬೇರೆ ರುಚಿಗಳನ್ನು ಸವಿಯುವುದಕ್ಕೇ ಮೀಸಲಾಗಿವೆ. ನಾಲಿಗೆಯ ತುದಿಯಲ್ಲಿ ಸಿಹಿ, ಎರಡೂ ಬದಿಗಳಲ್ಲಿ ಉಪ್ಪು, ನಾಲಿಗೆಯ ಮಧ್ಯಭಾಗದ ತುದಿಗಳಲ್ಲಿ ಹುಳಿ, ನಾಲಿಗೆಯ ಹಿಂಬದಿಯಲ್ಲಿ ಕಹಿ ಅನುಭವಿಸುತ್ತೇವೆ. ರುಚಿಗಳ ಈ ಹಂಚಿಕೆಯಿಂದ ಕಹಿ ಮಾತ್ರೆ ನುಂಗಲು ಜಾಣರು ಒಂದು ಸುಲಭ ತಂತ್ರ ಅನುಸರಿಸುತ್ತಾರೆ. ನಾಲಿಗೆಯ ಹಿಂಬದಿಗೆ ತಗುಲದಂತೇ ಮಾತ್ರೆಯನ್ನು ನಾಲಿಗೆಯ ತುದಿಯಲ್ಲೋ, ಮಧ್ಯದಲ್ಲೋ ಇರಿಸಿ, ಬಾಯಿಗೆ ನೀರು ಹುಯ್ದು, ಮಾತ್ರೆ ನಾಲಿಗೆಯ ಹಿಂಬದಿಗೆ ತಾಗದಂತೆ ನುಂಗಬೇಕು. ಆದರೆ ಕೆಲವೊಮ್ಮೆ, ಅದೂ ಮಾತ್ರೆ ದೊಡ್ಡದಾಗಿದ್ದರೆ, ಗಂಟಲಿನಲ್ಲಿ

ಇಳಿಯದೇ, ನಾಲಿಗೆಯ ಹಿಂಬದಿಯಲ್ಲಿ ಕೂತು ಕಹಿ ಅನುಭವ ಕೊಡದಂತೆ ಮುತವರ್ಜಿ ವಹಿಸಬೇಕು.

ನೀರಿನಲ್ಲಿ ಕರಗುವ ವಸ್ತುಗಳು ಮಾತ್ರ ನಮಗೆ ರುಚಿಯ ಅನುಭವ ಕೊಡಬಲ್ಲವು. ಸಕ್ಕರೆಯ ದ್ರಾವಣದ ರುಚಿ ತಿಳಿಯಬೇಕಾದರೆ, ಕಡೆಯ ಪಕ್ಷ ಒಂದು ಲೀಟರ್ ನೀರಿನಲ್ಲಿ ೭ ಗ್ರಾಂ. (ಸುಮಾರು ಒಂದೂವರೆ ಚಮಚ) ಸಕ್ಕರೆ ಕರಗಿರಬೇಕು. ಇದಕ್ಕಿಂತ ದುರ್ಬಲ ದ್ರಾವಣ ನಮಗೆ ಸಿಹಿ ಎನಿಸದು. ಇದಕ್ಕೆ ಹೋಲಿಸಿದರೆ, ಕೆಲವು ಕೀಟಗಳ ಜಿಹ್ವಾ ಸಾಮರ್ಥ್ಯ ಬಹು ಹೆಚ್ಚು. ಅವು ದ್ರಾವಣದಲ್ಲಿ ಇನ್ನೂ ಇನ್ನೂರು ಪಟ್ಟು ಕಡಿಮೆ ಸಕ್ಕರೆಯಿದ್ದರೂ ಸಿಹಿಯನ್ನು ಗ್ರಹಿಸಬಲ್ಲವು. ಕೀಟಗಳಲ್ಲಿ ಇನ್ನೂ ಒಂದು ವಿಶೇಷವಿದೆ. ನಮ್ಮ ಜಿಹ್ವಾಗ್ರಂಥಿಗಳೆಲ್ಲಾ ನಮ್ಮ ನಾಲಿಗೆಯಲ್ಲೇ ಇವೆ. ಕೀಟಗಳು ಅವುಗಳ ಸೊಂಡಿಲಿನಿಂದಲೂ, ಕಾಲುಗಳಿಂದಲೂ ರುಚಿ ತಿಳಿಯಬಲ್ಲವು. ಈ ಅಂಗಾಂಗಗಳಲ್ಲಿರುವ ರೋಮಗಳಲ್ಲಿ ರುಚಿ ಗ್ರಹಿಸುವ ಕೋಶಗಳಿರುತ್ತವೆ.

ಸಕ್ಕರೆಯ ಅಣುಗಳು ಕಾರ್ಬನ್ ಮತ್ತು ನೀರಿನ ಅಣುಗಳಿಂದಾದ ಸಂಯುಕ್ತ ರಾಸಾಯನಿಕಗಳು. ಬೆಲ್ಲ, ಸಕ್ಕರೆಗಳಲ್ಲಿ ಮುಖ್ಯವಾಗಿ 'ಸುಕ್ರೋಸ್' ಎಂಬ ಸಕ್ಕರೆಯಿದೆ. ಇದೊಂದು 'ಡೈ-ಸಾಕರೈಡ್'; ಎಂದರೆ, ಎರಡು ಸಕ್ಕರೆಯ ಅಣುಗಳ ರಾಸಾಯನಿಕ ಬಂಧದಿಂದ ಬಂದದ್ದು. ನಾವು ಬಳಲಿದವರಿಗೆ ಕೊಡುವ ಗ್ಲೂಕೋಸ್ ಒಂದು 'ಮಾನೋ-ಸಾಕರೈಡ್.' ಇದರಲ್ಲಿ ಆರು ಕಾರ್ಬನ್, ಹನ್ನೆರಡು ಹೈಡ್ರೋಜನ್, ಆರು ಆಕ್ಸಿಜನ್ ಪರಮಾಣುಗಳಿರುತ್ತವೆ. ಸುಕ್ರೋಸಿಗೆ ಹೋಲಿಸಿದರೆ, ಗ್ಲೂಕೋಸಿನ ಸಿಹಿ ಶೇಕಡಾ ೭೦. ಹಾಲಿನಲ್ಲಿರುವ 'ಲಾಕ್ಟೋಸ್' ಎಂಬ ಡೈ-ಸಾಕರೈಡಿನ ಸಿಹಿ ಸಕ್ಕರೆಯ ಶೇಕಡಾ ೩೦ರಷ್ಟು. ಜೇನು ಇಂತಹ ಅನೇಕ ಸರಳ ಸಕ್ಕರೆಗಳ ಮಿಶ್ರಣ. ಆದರೆ ಇವುಗಳಿಗಿಂತ ಇನ್ನೂ ಅತಿ ಸಿಹಿಯಾದ ವಸ್ತುಗಳು ಲಭ್ಯವಿವೆ. ಜೊತೆಗೆ, ಪ್ರಕೃತಿಯಲ್ಲಿ ಸಹಜವಾಗಿ ದೊರೆಯುವ ಸಿಹಿ ವಸ್ತುಗಳಿಗಿಂತ ತುಂಬ ಸಿಹಿ ಎಂದು ತೋರುವ ಅಣುಗಳನ್ನು ರಾಸಾಯನಿಕ ವಿಜ್ಞಾನಿಗಳು ಸೃಷ್ಟಿಸಿದ್ದಾರೆ. ಸಾಕರಿನ್ ಸಕ್ಕರೆಗಿಂತ ೨೦೦ಪಟ್ಟು ಹೆಚ್ಚು ಸಿಹಿ. ಸಕ್ಕರೆಗೆ ಹೋಲಿಸಿದರೆ ೨೦,೦೦೦ ಪಟ್ಟು ಸಿಹಿಯಿರುವ ಅಣುಗಳೂ ಇವೆ. ಇವುಗಳ ಸಿಹಿ ಅಳತೆಮಾಡಲು, ಒಂದು ಚಮಚ ಸಿಹಿ ವಸ್ತುವನ್ನು ಒಂದು ಬಕೆಟ್ಟು ನೀರಿನಲ್ಲಿ ಕರಗಿಸಿ ರುಚಿ ನೋಡಬೇಕು. ಕೆಲವು ವಸ್ತುಗಳು ನಮ್ಮ ನಾಲಿಗೆಯ ಸ್ವಭಾವವನ್ನೇ ಬದಲಿಸಿಬಿಡುತ್ತವೆ. ನೆಲ್ಲಿಕಾಯಿ ನಾಲಿಗೆಗೆ ಮೊದಲು ಹುಳಿಯ ಅನುಭವ ನೀಡುತ್ತದೆ. ತಿಂದ ಬಳಿಕ ರುಚಿಯಿಲ್ಲದ ನೀರು ನಾಲಿಗೆಗೆ ಸಿಹಿ ಎನಿಸುತ್ತದೆ. ಹೀಗೆಯೇ ನಾಲಿಗೆಯ ಎಲ್ಲ ಶಕ್ತಿಯನ್ನೂ ಸ್ವಲ್ಪ ಕಾಲ ಮರೆಮಾಡುವ ರಾಸಾಯನಿಕಗಳೂ ಇವೆ.

ದೈಹಿಕ ಶಕ್ತಿಗೆ ಆಹಾರವೇ ಆಧಾರ. ಶಾಖ ಚಲನ ಶಾಸ್ತ್ರದಲ್ಲಿ (ಥರ್ಮೋಡೈನಮಿಕ್ಸ್) ಎರಡು ಮುಖ್ಯ ನಿಯಮಗಳಿವೆ. ಮೊದಲನೆಯ ನಿಯಮ ಪ್ರಪಂಚದಲ್ಲಿರುವ ಒಟ್ಟು ಶಕ್ತಿಯ ಮೊತ್ತದಲ್ಲಿ ಯಾವುದೇ ಬದಲಾವಣೆಯಾಗುವುದಿಲ್ಲ ಎಂದು ಹೇಳುತ್ತದೆ. ಒಂದು ರೂಪದ ಶಕ್ತಿಯನ್ನು ಇನ್ನೊಂದು ರೂಪಕ್ಕೆ ತಿರುಗಿಸಬಹುದು. ಆದರೆ ಶಕ್ತಿಯನ್ನು ಹೊಸದಾಗಿ ಸೃಷ್ಟಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಜೀವಿಗಳ ಎಲ್ಲ ಕ್ರಿಯೆಗಳಿಗೆ ಹೊರಗಿನಿಂದ ಶಕ್ತಿ ಪೂರೈಕೆಯಾಗಬೇಕು. ಸಸ್ಯಗಳು ಸೂರ್ಯಕಿರಣಗಳಿಂದ ಶಕ್ತಿ ಗಳಿಸಬಲ್ಲವು. ಆದರೆ ಪ್ರಾಣಿಗಳು ಹೀಗೆ ಮಾಡಲಾರವು. ತಾವು ಸೇವಿಸಿದ ಆಹಾರದಲ್ಲಿರುವ ರಾಸಾಯನಿಕ ಶಕ್ತಿಯನ್ನು ತಮ್ಮ ಸಮಸ್ತ ದೈಹಿಕ, ಮಾನಸಿಕ ಚಟುವಟಿಕೆಗಳಿಗೆ ಬಳಸಿಕೊಳ್ಳಬೇಕು. ಸಕ್ಕರೆ ಇಲ್ಲವೇ ಕೊಬ್ಬಿನ ಅಣುಗಳನ್ನು ಆಕ್ಸಿಜನ್ನಿನಲ್ಲಿ ಉರಿಸಿ, ತಮಗೆ ಬೇಕಾದ ಶಕ್ತಿಯನ್ನು ಪ್ರಾಣಿಗಳು ಸಂಪಾದಿಸಿಕೊಳ್ಳುತ್ತವೆ. ಜೀವವಿಶೇಷವಿರುವುದು ಇಂತಹ ದಹನ ಕ್ರಿಯೆಯನ್ನು ದೇಹದ ಸಾಧಾರಣ ಉಷ್ಣತೆಯಲ್ಲೇ ಸಾಧಿಸುವುದು.

ಶಾಖಚಲನ ಶಾಸ್ತ್ರದ ಎರಡನೆಯ ನಿಯಮ ಉಷ್ಣಶಕ್ತಿ ಒಂದೆಡೆಯಿಂದ ಇನ್ನೊಂದೆಡೆಗೆ ಪಸರಿಸುವ ನಿಯಮವನ್ನು ತಿಳಿಸುತ್ತದೆ. ಹೆಚ್ಚಿನ ಉಷ್ಣಾಂಶವಿರುವ ಬಿಂದುವಿನಿಂದ ಕಡಿಮೆ ಉಷ್ಣಾಂಶವಿರುವೆಡೆಗೆ ಉಷ್ಣಶಕ್ತಿ ಸಹಜವಾಗಿ ಹರಿಯುತ್ತದೆ. ಉಷ್ಣಶಕ್ತಿ ಹೀಗೆ ಹರಿದಾಗ, ಅದರ ಒಂದು ಭಾಗವನ್ನು ಚಲನಶಕ್ತಿಯಾಗಿ ಪರಿವರ್ತಿಸಿಕೊಳ್ಳಬಹುದು. ಅದೇ, ಕಡಿಮೆ ಉಷ್ಣಾಂಶವಿರುವ ಬಿಂದುವಿನಿಂದ ಹೆಚ್ಚು ಉಷ್ಣಾಂಶವಿರುವ ಬಿಂದುವಿಗೆ ಉಷ್ಣಶಕ್ತಿಯನ್ನು ರವಾನಿಸಬೇಕಾದರೆ, ಹೊರಗಿನಿಂದ ಶಕ್ತಿಯನ್ನು ಪೂರೈಸಬೇಕಾಗುತ್ತದೆ. ಆದ್ದರಿಂದ, ಎಲ್ಲೆಡೆ ಒಂದೇ ಉಷ್ಣಾಂಶ ಇದ್ದರೆ, ಎಷ್ಟೇ ಉಷ್ಣಶಕ್ತಿ ಇದ್ದರೂ ನಮ್ಮ ಕೆಲಸಕ್ಕಾಗಿ, ಚಾಲನ ಶಕ್ತಿಯ ರೂಪದಲ್ಲಿ, ಅದರ ಬಳಕೆ ಸಾಧ್ಯವಾಗುವುದಿಲ್ಲ.

ಶಾಖಚಲನ ಶಾಸ್ತ್ರದ ಎರಡನೆಯ ನಿಯಮದ ಪ್ರಕಾರ ಪ್ರಪಂಚದಲ್ಲಿರುವ ಅವ್ಯವಸ್ಥೆ ಹೆಚ್ಚುತ್ತಲೇ ಹೋಗಬೇಕು. ವ್ಯವಸ್ಥೆಯಿಂದ ಅವ್ಯವಸ್ಥೆಯ ಕಡೆಗೆ ಸತತ ಸಾಗುತ್ತಿರುವುದೇ ಪ್ರಕೃತಿಯ ಸಹಜ ಸ್ವಭಾವ. ಒಂದೆಡೆ ಹೆಚ್ಚು ಉಷ್ಣಾಂಶವಿರುವುದು, ಇನ್ನೊಂದೆಡೆ ಕಡಿಮೆಯಿರುವುದನ್ನು ವ್ಯವಸ್ಥೆ ಎಂದು ಭಾವಿಸಿದರೆ, ಉಷ್ಣಶಕ್ತಿ ಸಮವಾಗಿ ಹಂಚಿಹೋಗುವುದನ್ನು ಅವ್ಯವಸ್ಥೆಯ ಹೆಚ್ಚಳ ಎನ್ನಬಹುದು. ತಣ್ಣಗಿರುವ ಒಂದು ವಸ್ತುವನ್ನು ಬಿಸಿ ವಾತಾವರಣದಲ್ಲಿಟ್ಟಾಗ, ಅದೂ ವಾತಾವರಣದ ಉಷ್ಣತೆಗೇ ಏರುತ್ತದೆ. ಇದನ್ನು ತಪ್ಪಿಸಲು ಶಕ್ತಿಯನ್ನು ಸತತ ವ್ಯಯಿಸಬೇಕಾಗುತ್ತದೆ. ಆದ್ದರಿಂದಲೇ, ನಮ್ಮ ಮನೆಗಳಲ್ಲಿರುವ ರೆಫ್ರಿಜರೇಟರನ್ನು ವಿದ್ಯುತ್ ಸಂಪರ್ಕದಿಂದ ತೆಗೆದರೆ, ಸ್ವಲ್ಪ ಕಾಲದಲ್ಲೇ ಅದು ವಾತಾವರಣದ ಉಷ್ಣತೆಗೆ ಏರಿಬಿಡುತ್ತದೆ. ತಣ್ಣಗೆ ಉಳಿಯಲು ರೆಫ್ರಿಜರೇಟರಿಗೆ ಸತತ ವಿದ್ಯುತ್ ಶಕ್ತಿ ದೊರೆಯುತ್ತಿರಬೇಕು. ಇದೇ ತತ್ವದ ಪರಿಣಾಮವಾಗಿ, ಬಳಸದ ದೇವಾಲಯ ಪಾಳುಗುಡಿಯಾಗುತ್ತದೆ. ಪಾಳುಗುಡಿ ನೆಲಕಚ್ಚಿ ಅದೃಶ್ಯವಾಗುತ್ತದೆ. ಮಾನವ ಲಕ್ಷಾಂತರ ವರ್ಷಗಳಿಂದ ನಿರ್ಮಿಸುತ್ತಿರುವ ಸ್ಮಾರಕಗಳಲ್ಲಿ ಉಳಿದುಕೊಂಡಿರುವುದು ಗಣನೆಗೇ ಬಾರದಷ್ಟು ಕಡಿಮೆ. ಮುಂದೊಂದು ದಿನ (ಸಹಸ್ರಾರು ಕೋಟಿ ವರ್ಷಗಳ ನಂತರ !) ಪ್ರಪಂಚದ ಎಲ್ಲೆಡೆ ಉಷ್ಣಶಕ್ತಿ ಸಮವಾಗಿ ಹರಡಿ ಇನ್ನು ಯಾವುದೇ ಭೌತಿಕ ಬದಲಾವಣೆ ಸಾಧ್ಯವಾಗದಂತಹ ಸ್ಥಿತಿಗೆ ವಿಶ್ವ ಜಾರುಗುತ್ತದೆ.

ಶಾಖ ಚಲನೆಯ ಎರಡನೆಯ ನಿಯಮದ ಪರಿಣಾಮವಾಗಿ, ವ್ಯವಸ್ಥೆಯಿಂದ ಅವ್ಯವಸ್ಥೆಯ ಕಡೆಗೆ ಎಲ್ಲ ಪ್ರತ್ಯೇಕ ಕೂಟಗಳೂ ಚಲಿಸಬೇಕು. ಆದರೆ, ಜೀವಿಗಳ ಆಂತರಿಕ ವ್ಯವಸ್ಥೆ ಅವು ಬದುಕಿರುವವರೆಗೆ ನಶಿಸದೇ ಉಳಿಯುತ್ತದೆ. ನಿರ್ಜೀವ ಜಗತ್ತಿನಿಂದ ಜೀವಜಗತ್ತು ಬೇರೆಯಾಗಿ ಕಾಣಲು ಜೀವಿಗಳ ಈ ಆಂತರಿಕ ವ್ಯವಸ್ಥೆಯೇ ಕಾರಣ. ಜೈವಿಕ ಕ್ರಿಯೆ ನಿಂತೊಡನೆ, ದೇಹದ ವ್ಯವಸ್ಥೆ ಪ್ರಕೃತಿಯ ಇತರ ವ್ಯವಸ್ಥೆಗಳಂತೆ ಹಾಳಾಗುತ್ತದೆ. ಅಲ್ಪಕಾಲದಲ್ಲಿಯೇ ಪ್ರಕೃತಿಯಲ್ಲಿ ಲೀನವಾಗುತ್ತದೆ. ಮೇಲುನೋಟಕ್ಕೆ, ಜೀವಿಗಳು ಶಾಖ ಚಲನೆಯ ಎರಡನೆಯ ನಿಯಮಕ್ಕೆ ವಿರುದ್ಧವಾಗಿ ಬದುಕುವಂತೆ ತೋರುತ್ತವೆ. ಆದರೆ, ಶಾಖ ಚಲನ ಶಾಸ್ತ್ರದ ಎರಡನೆಯ ನಿಯಮ ಅನ್ವಯಿಸುವುದು ಹೊರಗಿನ ಯಾವ ಸಂಪರ್ಕವೂ ಇಲ್ಲದ ಕೂಟಗಳಿಗೆ ಮಾತ್ರ. ಅಂತಹ ಪರಿಸರದಲ್ಲಿ ಅವ್ಯವಸ್ಥೆ ಹೆಚ್ಚಾಗದೇ ವಿಧಿಯಿಲ್ಲ. ಜೀವಿಗಳು ಹೊರವಿಶ್ವದ ಸಂಪರ್ಕವಿಲ್ಲದ ಪ್ರತ್ಯೇಕ ಕೂಟಗಳಲ್ಲ. ಅವ್ಯವಸ್ಥೆಯನ್ನು ದೂರವಿಡಲು ಎಲ್ಲ ಜೀವಿಗಳೂ ಸತತ ಹೋರಾಟ ನಡೆಸುತ್ತವೆ. ತಮ್ಮ ಆಂತರಿಕ ವ್ಯವಸ್ಥೆ ಉಳಿಸಿಕೊಳ್ಳಲು ತಾವು ವಾಸಿಸುತ್ತಿರುವ ಪರಿಸರದ ಅವ್ಯವಸ್ಥೆಯನ್ನು ಹೆಚ್ಚಿಸುತ್ತವೆ. ಈ ಆಂತರಿಕ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ಹೋರಾಟಕ್ಕೆ ಶಕ್ತಿಯ ಬಳಕೆ ಅಗತ್ಯ. ಆದ್ದರಿಂದ, ನಮ್ಮ ದೇಹದ ವ್ಯವಸ್ಥೆ ಹೊರ ಪ್ರಪಂಚದಲ್ಲಿ ಲೀನವಾಗಿ ಹಂಚಿಹೋಗದಿರಲು ಶಕ್ತಿ ನೀಡುವ ಆಹಾರ ಅತ್ಯಗತ್ಯ. ದೇಹಕ್ಕೆ ಶಕ್ತಿಯ ಸತತ ಪೂರೈಕೆಯಿಲ್ಲದೆ ಅದರ ವ್ಯವಸ್ಥೆ ಉಳಿಯಲಾರದು. ಆದ್ದರಿಂದ, ನಾವು ಏನೂ ಕೆಲಸ ಮಾಡದಿದ್ದರೂ, ಆಂತರಿಕ ವ್ಯವಸ್ಥೆ ಕಾಪಾಡಿಕೊಳ್ಳಲು, ಅದಕ್ಕಾಗಿ ದೇಹದಲ್ಲಿ ನಡೆಯಬೇಕಾಗುವ ರಾಸಾಯನಿಕ ಕ್ರಿಯೆಗಳಿಗೆ ಅಗತ್ಯವಾದ ಶಕ್ತಿಯನ್ನು ಗಳಿಸಲು ಆಹಾರ ಸೇವಿಸಲೇಬೇಕು. ಸಸ್ಯಗಳನ್ನು ಬಹಳ ಕಾಲ ಬೆಳಕಿಲ್ಲದ ತಾಣದಲ್ಲಿಟ್ಟರೆ, ಸೂರ್ಯಕಿರಣಗಳ ಶಕ್ತಿ ಲಭ್ಯವಾಗದೆ ಅವುಗಳ ಆಂತರಿಕ ವ್ಯವಸ್ಥೆ ಕುಸಿಯುತ್ತದೆ. ಆಹಾರ ಸೇವಿಸದಿದ್ದರೆ ನಮ್ಮ ದೇಹದ ವ್ಯವಸ್ಥೆಯೂ ಹಾಳಾಗುತ್ತದೆ. ಹೀಗೆ ನಮ್ಮ ದೈಹಿಕ ಕ್ರಿಯೆಗಳಿಗೆ ಬೇಕಾದ ಶಕ್ತಿಯನ್ನು ಪಡೆಯುವುದಕ್ಕೆ ಮಾತ್ರವಲ್ಲದೆ, ನಮ್ಮ ದೇಹದ ಆಂತರಿಕ ವ್ಯವಸ್ಥೆಯನ್ನು ಕಾಪಾಡಿಕೊಳ್ಳಲೂ ಆಹಾರ ಬೇಕಾಗುತ್ತದೆ. ಜಿಹ್ವಾ ಚಾಪಲ್ಯವು ನಮ್ಮ ಆಂತರಿಕ ವ್ಯವಸ್ಥೆ ಉಳಿಸಿಕೊಳ್ಳಲು, ಬದುಕಿ ಉಳಿಯಲು, ಅತ್ಯಗತ್ಯವಾಗಿ ಬೇಕಾಗಿರುವ ಆಹಾರಕ್ಕಾಗಿ ನಾವು ಸತತ ಹಂಬಲಿಸುತ್ತಿರುವಂತೆ ನೋಡಿಕೊಳ್ಳುತ್ತದೆ.

ಎಮ್. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸಾಯನ್ಸ್
ಬೆಂಗಳೂರು - ೫೬೦ ೦೧೨

# ಬಿಳಿಗಿರಿಯ ಬನದಲ್ಲಿ ಪರಿಸರ ಪ್ರವಾಸ

ದಿಲ್ಲಿ ದೂರದರ್ಶನ ಸುದ್ದಿ ಜಾಲದಲ್ಲಿ ''ಕಣ್ಣಿಗೆ ಕಂಡದ್ದು'' ಒಂದು. ಆಯಾ ದಿನದ ಸುದ್ದಿ ಪ್ರಸಾರವಾದ ನಂತರ ಕೊನೆಗೆ ದೇಶದಲ್ಲಿ ಅತ್ಯಂತ ಉಲ್ಲಾಸದಾಯಕ ಹವಾಮಾನ ಎಲ್ಲಿದೆ ಎಂದು ಸುದ್ದಿ ಬಿತ್ತರಿಸಿದಾಕೆ ಉಲಿಯುತ್ತಾಳೆ. ಶಿಲಾಂಗ್, ಗಿರ್, ವಿಶಾಖಪಟ್ನಂ ಮತ್ತು ಬಿಳಿಗಿರಿರಂಗನ ಬೆಟ್ಟ ಎಂಬ ತಾಣಗಳನ್ನು ತಪ್ಪು ತಪ್ಪಾದ ಬೇಜವಾಬ್ದಾರಿ ಉಚ್ಚಾರಣೆಯಲ್ಲಿ ಗಿಳಿ ಪಾಠ ಒಪ್ಪಿಸುತ್ತಾಳೆ. ಅಂಥ ಉಲ್ಲಾಸ ತರುವ ತಾಣ ಕರ್ನಾಟಕದಲ್ಲಿದೆ ಎಂಬುದು ನಾವು ನಿಜಕ್ಕೂ ಹೆಮ್ಮೆ ಪಡಬೇಕಾದ ಸಂಗತಿ.

ಗಿಡಮೂಲಿಕೆ ಆಸಕ್ತಿಯ ನಾನು, ಪರಿಸರ ಕಾಳಜಿಯ ಹೇಮಂತ, ಪ್ರಕಾಶ, ರೇಖಾ, ರಂಜನಿ ಮತ್ತು ಚಂದ್ರಕಲಾ ಬಿಳಿಗಿರಿಯ ಕಾಡು ನೋಡಹೊರಟೆವು. ರಾಜ್ಯ ರಾಜಧಾನಿಯಿಂದ ಕೇವಲ ೫ ತಾಸಿನ ಪಯಣ. ಮಳವಳ್ಳಿ, ಕೊಳ್ಳೇಗಾಲ, ಯಳಂದೂರಿನ ಮೂಲಕ ಬೆಟ್ಟ ಏರುವ ಹಾದಿ ಪಯಣಿಗರಿಗೆ ಒಂದು ಮುನ್ಸೂಚನೆ. ಸಂಜೆ ಆರರಿಂದ ಬೆಳಗ್ಗೆ ಆರರ ತನಕ ಬೆಟ್ಟ ರಸ್ತೆ ಬಂದ್. ಕರ್ನಾಟಕ ಅರಣ್ಯ ಇಲಾಖೆಯ ತಡೆಗಾವಲು, ಹಗಲಿರುಳಿನ ಪಹರೆ ಪ್ರಶಂಸಾರ್ಹ. ಕೊಳ್ಳೇಗಾಲ ದಾಟುತ್ತಲೇ ರಸ್ತೆ ಕವಲೊಡೆಯುತ್ತದೆ. ಎಡಕವಲು ಮಲೆ ಮಹದೇಶ್ವರ ಬೆಟ್ಟದ್ದು. ಬಲಕವಲಿನ ಹಸಿರು ಬಯಲಿನ ಪೈರು ರಾಶಿಯ ನಡುವಣ ರಸ್ತೆ ಬಿಳಿಗಿರಿಗೊಯ್ಯುತ್ತದೆ. ಭೂಪಟದಲ್ಲಿ ಗೋಡಂಬಿ ಆಕಾರದ ಕರ್ನಾಟಕದ ದಕ್ಷಿಣ ಅರ್ಥಾತ್ ಗೋಡಂಬಿ ಬೀಜದ ಬುಡದ ಪ್ರಸಿದ್ಧ ಗಿರಿಧಾಮದ್ವಯಗಳಿವು: ಕರ್ನಾಟಕದ ಶ್ರೀಶೈಲ ಮಹದೇಶ್ವರ ಬೆಟ್ಟ, ಗಿರಿವಾಸಿ ಸೋಲಿಗರ ನೆಮ್ಮದಿಯ ತಾಣ ಶ್ವೇತಾಚಲ ಅರ್ಥಾತ್ ಬಿಳಿಗಿರಿ. ಸೋಲಿಗರು ಮಲೆಮಹದೇಶ್ವರನ ಒಕ್ಕಲು. ಬಿಳಿಗಿರಿಯ ಮಕ್ಕಳು.



ಆನೆ ಕಿತ್ತ ತೊಗಟೆಯ ಅಳಿದುಳಿದ ಪಾಲು

ಬೆಟ್ಟ ಹತ್ತಿರವಾಗುತ್ತಿದ್ದಂತೆ ಬಿ. ರಂ. ಬೆಟ್ಟ...... ಕಿ. ಮೀ. ಎಂಬ ದೂರಸೂಚಿ ಕಲ್ಲುಗಳು ನಿಮ್ಮನ್ನು ಸ್ವಾಗತಿಸುತ್ತವೆ. ಬೆಟ್ಟದ ಪರಿಸರ ಕಂಡ ಮೇಲೆ ಇಲ್ಲಿಗೆ ಬೀರ್, ರಂ ಪ್ರಿಯರು ವಿಹಾರಿಗಳಾಗಿ ಇನ್ನೂ ಬರಲಾರಂಭಿಸಿಲ್ಲ ಎಂಬುದನ್ನು ಮನಗಾಣುವಿರಿ. ದಕ್ಷಿಣ ಭಾರತದಾದ್ಯಂತ ಮೂಲೆ ಮೂಲೆ ಸುತ್ತಿದ ಪ್ರವಾಸ ಪ್ರೇಮಿ ಡಾ|| ಪ್ರಕಾಶ್ ಹೇಳುತ್ತಾರೆ : 'ಬಿಳಿಗಿರಿ ರಂಗನ ಬೆಟ್ಟಕ್ಕೆ ಜನಸಾಮಾನ್ಯರು ವೀರಪ್ಪನ್ ಭಯದಿಂದ ಹೋಗುತ್ತಿಲ್ಲ' ಎಂದು. ಇದ್ದರೂ ಇರಬಹುದು. ಅವರು ನೀಡಿದ ಮತ್ತೊಂದು ಕಾರಣವೂ ಸಮಂಜಸ. ಘಟ್ಟ ಸಾಲಿನ ಏಕವಾಹನ ಯೋಗ್ಯ ರಸ್ತೆಯೊಂದೇ ಜಿಲ್ಲಾ ಕೇಂದ್ರ ಚಾಮರಾಜನಗರಕ್ಕೆ ಇರುವ ಸಂಪರ್ಕ ಸೇತು. ಘಟ್ಟದ ಅತ್ತಣ ಇಳಿಜಾರಿಗಿಳಿದರೆ ದಿಂಬಂ ವಲಯದ ತಮಿಳುನಾಡು. ಎರಡೂ ರಾಜ್ಯಗಳು ಕೈ ಮಿಲಾಯಿಸಿ ರಸ್ತೆ ಮಾಡಿಬಿಟ್ಟರೆ ಇಂದು ಕೊಡಗಿಗೊದಗಿದ ಗತಿ ಬಿಳಿಗಿರಿ ರಂಗನ ಬೆಟ್ಟಕ್ಕೂ ಒದಗೀತು ಎಂಬ ಭಯ ಡಾ|| ಪ್ರಕಾಶರಿಗಿದೆ.

ಗಿರಿ ಏರುತ್ತಿದ್ದಂತೆ ನವಿಲಿನ ಲಾಸ್ಯ ಸ್ವಾಗತಿಸಿತು. ಮುಳ್ಳು ಹಂದಿಯೊಂದು ಅಡ್ಡಹಾದಿಯಲ್ಲಿ ಮರೆಯಾಯಿತು. ರಸ್ತೆ ಅಗಲಗೊಳಿಸಲೆಂದು ಬೆಟ್ಟದರ್ಧ ಏರಿ ನಿಂತಿದ್ದ ಭಾರೀ ಬುಲ್‌ಡೋಜರ್ ಕಂಡು ಹೇಮಂತನ ಎದೆ ಡವಗುಟ್ಟಿತು. ಪುಟ್ಟ ಕಾಡುಕೋಳಿ ಮರಿಗಳು ನೀರಂಚಿನ ಪೊದರಿನಲ್ಲಿ ಮರೆಯಾದವು. ಬಸ್ಸು ಏದುಬ್ಬಸ ಬಿಡುತ್ತಾ ಬೆಟ್ಟ ಏರಿ ಒಳ ಕಮರಿಯತ್ತ ಇಳಿಮುಖವಾಯಿತು. ಅದಾಗಲೇ ಬಿಳಿಗಿರಿ ರಂಗನ ಬೆಟ್ಟದ ತಪ್ಪಲು ಗೋಚರಿಸಿತು. ಏಟ್ರೀ ಎಂಬ ಪರಿಸರಾಧ್ಯಯನ ಸಂಸ್ಥೆಯ ಆವರಣ, ಔಷಧೀಯ ಸಸ್ಯಗಳ ಕಾವಲು ಕ್ಷೇತ್ರ ದಾಟುತ್ತಲೇ ದೊಡ್ಡ ಕೆರೆ ಕಂಡಿತು. ಕೆರೆಯ ಮಗ್ಗುಲಲ್ಲಿ ಕೆರೆ ದಿಂಬು ಪೋಡು. ಇದ್ದುದರಲ್ಲಿ ಇದೀಗ ಕೊಂಚ ಉಸ್ತುವಾರಿಗೊಂಡ ಹೆಂಚಿನ ಪುಟ್ಟ ಪುಟ್ಟ ಮನೆ ಸಮೂಹ. ಸೋಲಿಗರ ವಾಸಸ್ಥಾನಕ್ಕೆ ಅವರ ವಿಶಿಷ್ಟ ಬಿಚ್ಚುಗನ್ನಡದಲ್ಲಿ ಪೋಡು ಎನ್ನುವರು. ಎಡಮಗ್ಗುಲಲ್ಲಿ ವಿಶ್ವಖ್ಯಾತಿಯ ಡಾ|| ಸುದರ್ಶನರ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದ ವಿಶಾಲ ಆವರಣ. ಮಲಗಿದ ಹೆಬ್ಬಾವಿನಂತೆ ರಸ್ತೆ ಮುಂದೆ ಸಾಗುತ್ತದೆ. ಅದು ಬಿಳಿಗಿರಿಯ ಪ್ರಮುಖ ಆಕರ್ಷಣಾ ಕೇಂದ್ರವಾದ ದೇಗುಲಕ್ಕೊಯ್ಯುತ್ತದೆ.

ನಾಲ್ಕು ನೂರು ಕಡಿದು ಮೆಟ್ಟಿಲೇರಲು ನಮ್ಮ ತಂಡದ ಕೆಲವರು ಉಸ್ಸಪ್ಪಾ ಎನ್ನತೊಡಗಿದರು. ಚಿಟಿಕೆ ಹಾಕುವಷ್ಟರಲ್ಲಿ ಮೆಟ್ಟಿಲೇರಿದ ಪ್ರಕಾಶ ಉಳಿದವರನ್ನು ಅಣಕಿಸುತ್ತಿದ್ದ. ಮುನ್ನೂರೈವತ್ತು ವರ್ಷದಷ್ಟು ಪುರಾತನ ಶಿಲಾ ದೇಗುಲ ಸಮುಚ್ಚಯ ಇದು. ನಿಂತ ಭಂಗಿಯ ಕರಿಕಲ್ಲಿನ ಬಿಳಿಗಿರಿ ರಂಗನಾಥ. ಪಕ್ಕದಲ್ಲಿ ಪದ್ಮಾವತಿ. ಸ್ವಚ್ಛ ಆವರಣ. ಸ್ವಚ್ಛಂದ ವಾತಾವರಣ. ದೇಗುಲದ ಎಡಮಗ್ಗುಲಲ್ಲಿ ಬೇಲಿಯೊಳಗಿಂದ ಕೆಳನಿರುಕಿಸುವ ಸೌಕರ್ಯ. ವ್ಯೂ ಪಾಯಿಂಟ್ ಎಷ್ಟು ಸುಂದರ, ಸುರಮ್ಯ ಎಂದರೆ ಹಗಲಾಗಲಿ, ರಾತ್ರಿಯಾಗಲಿ, ಕಣ್ಣು ಮತ್ತು ಕಾಲು ಕೀಳುವುದು ಬೇಡ ಎಂದೆನಿಸುವಷ್ಟು.

ಹಗಲಲ್ಲಿ ಹಣಿಕಿ ಹಾಕಿದಾಗ ಕೆಳಗೆ ಕಾಣುವುದು ಕಣ್ಣೆಟುಕುವಷ್ಟು ವಿಸ್ತಾರವಾದ ಹಸಿರಿನ ಹಚ್ಚಡ. ವಿಮಾನದಲ್ಲಿ ಕುಳಿತು ಕೆಳನೋಡುವಂತೆ ಭಾಸ. ಹಸಿರಿನ ವೈವಿಧ್ಯಮಯ ಪತ್ತಾರಗಳು. ಎಳೆಹಸಿರು, ತಿಳಿಹಸಿರು, ಗಿಣಿ ಹಸಿರು, ಸಾದಾ ಹಸಿರು, ಊದಾ ಹಸಿರು, ಹಚ್ಚ ಹಸಿರು ಬಣ್ಣದ ಎತ್ತರ ತಗ್ಗಿನ ವೃಕ್ಷ ಸಮೂಹಗಳ ವಿವಿಧ ನಿಶಾನೆಗಳು. ಅಲ್ಲಲ್ಲಿ ಹೂದಳೆದ ಕೆಂಪು, ಬಿಳಿ ಬೊಟ್ಟಿಕ್ಕುವ ತರು ವಿನ್ಯಾಸಗಳು. ಜಗದಗಲ, ಮುಗಿಲಗಲ, ಆಕಾಶದಷ್ಟಗಲದ ಹಸಿರು ಕೊಡೆಯಡಿ ಭೂರಮೆಯ ದಿವ್ಯ ಸಿಂಗಾರ. ಹೊಟ್ಟೆಯ ಕರೆಗೆ ಓಗೊಟ್ಟು ಬೆಟ್ಟದ ಬುಡದ ದರ್ಶಿನಿಗೆ ಬಂದು ಹೊಟ್ಟೆ ತುಂಬಿಸಿಕೊಂಡೆವು. ಬಿಲ್ಲು ಮೂರಂಕಿ ತಲುಪದ್ದನ್ನು ಕಂಡು ರೇಖನಿಗೆ ಅಚ್ಚರಿ. 'ಅಬ್ಬಬ್ಬಾ ! ಬೆಂಗಳೂರಿನಲ್ಲಿ ಕನಿಷ್ಠ ಮುನ್ನೂರು ರೂ. ಆಗುತ್ತಿತ್ತು' ಎಂದು ಉದ್ಗರಿಸಿದಳಾಕೆ.

ಜನ ಕಂಡರೆ ನಾಚುವ, ಮುದುಡಿ ಮಾಯವಾಗುವ ಸೋಲಿಗ ಗಂಡು, ಹೆಣ್ಣುಗಳನ್ನು ಮಾತಿಗೆಳೆದು ಸಮಯ ಕಳೆದೆವು. ರಾತ್ರಿ ಮತ್ತೊಮ್ಮೆ ಬೆಟ್ಟ ಏರುವ ತವಕ. ರಂಜನಿಗೆ ರಂಗನ ದರ್ಶನದ ಚಿಂತೆ. ಹೇಮಂತನಿಗೆ ರಾತ್ರಿಯಲ್ಲಿ ವ್ಯೂ ಪಾಯಿಂಟ್ ಹೇಗೆ ಕಾಣುವುದೆಂಬ ಕುತೂಹಲ. ರಂಜನಿಯ ವಶೀಲಿಯಿಂದ ದರ್ಶನ ಭಾಗ್ಯ ತುರ್ತಾಗಿ ಮುಗಿಸಿ ಬೇಲಿಯಂಚಿಗೆ ಧಾವಿಸಿದೆವು. ಬಾನಂಗಳದ ಚುಕ್ಕೆಗಳ ಚಿತ್ತಾರ ಇಳೆಯೆಂಬ ಕನ್ನಡಿಯಲ್ಲಿ ಪ್ರತಿಫಲಿಸುತ್ತಿದ್ದಂತೆ ಭಾಸವಾಯಿತು. ಹಗಲಿನ ಹಸಿರು ಹಚ್ಚಡ ಮಾಯವಾಗಿ ಕಪ್ಪು ದುಪ್ಪಟ ಆವರಿಸಿತ್ತು. ಅಲ್ಲಲ್ಲಿ ಸಾಲು ಸಾಲಾಗಿ ಮಿಂಚಿ ಮಿನುಗುವ ವಿದ್ಯುದ್ದೀಪರಂಜಿತ ಹಳ್ಳಿ ಪಟ್ಟಣಗಳು. ರೇಖಾ ಉದ್ಗರಿಸಿದಳು : 'ಅಗೋ ಅದು ಮೈಸೂರು, ಇದು ಚಾಮರಾಜನಗರ. ದೂರದಲ್ಲಿ ಕಾಣುವುದು ನಂಜನಗೂಡು.' ಪ್ರಕಾಶ ರೇಗಿಸಿದ : 'ಅಲ್ಲಿ ದೂರದಲ್ಲಿ ಕನ್ನಂಬಾಡಿ, ಹತ್ತಿರದಲ್ಲಿರುವುದು ಕೊಳ್ಳೇಗಾಲ,

---

ಡಾ|| ಸತ್ಯನಾರಾಯಣ ಭಟ್, ಪಿ.

---

*ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಒಂದಾಗುವ ನಿಸರ್ಗ ರಮ್ಯತಾಣ ಬಿಳಿಗಿರಿ ರಂಗನ ಬೆಟ್ಟ. ಅಲ್ಲಿರುವ ಆನೆಗಳ ಕೃಪೆಯಿಂದ ಅರಣ್ಯ ಸಂಪತ್ತು ಇನ್ನೂ ಉಳಿದಿದೆ ಎನ್ನುತ್ತಾರೆ ಪರಿಸರ ವಿಜ್ಞಾನಿ ಹರೀಶ್ ಭಟ್. ಕುರುಚಲು, ಎಲೆ ಉದುರಿಸುವ ಮತ್ತು ಸದಾ ಹರಿದ್ವರ್ಣದ ಅರಣ್ಯಗಳು, ಕೆರೆಗಳು, ನದಿ ಹಾಗೂ ಹುಲ್ಲುಗಾವಲುಗಳು ಈ ವಲಯದ ವೈಶಿಷ್ಟ್ಯ. ತೀರಾ ಕನಿಷ್ಠ ಸೌಲಭ್ಯ ಹಾಗೂ ರಸ್ತೆ ಸಂಪರ್ಕದ ದೆಸೆಯಿಂದ ಈ ಬೆಟ್ಟದಲ್ಲಿ ಇನ್ನೂ ಕನ್ನೆಕಾಡು ಉಳಿದಿದೆ.*

ಓಹೋ ಬೆಂಗಳೂರು ಕಾಣಿಸಿತು.' ಯಾರು ಯಾವ ಊರೆಂದರೂ ಸೈ. ಹಗಲಲ್ಲಿ ದಿಕ್ಕು ದೆಸೆ ಗಮನಿಸಿ ಗುರುತಿಸಿದ್ದರೆ ರಾತ್ರಿ ನಿಖರವಾಗಿ ಹೇಳಬಹುದು. ಲಂಬಾಣಿ ಹೆಂಗಸಿನ ಕಪ್ಪು ದಿರಿಸಿನಲ್ಲಿ ಕಸೂತಿ ಹಾಕಿ ಪೋಣಿಸಿದ ಗಾಜಿನ ಮಣಿಗಳಂತೆ ಬಿಳಿಗಿರಿಯಿಂದ ಇಳೆಯ ರಮ್ಯತೆ ಕಂಗೊಳಿಸುತ್ತಿತ್ತು. ಕತ್ತಲೆಯ ಗರ್ಭದಲ್ಲಿ ಬೆಳಕಿನ ಚಿತ್ತಾರದ ಹಿಂಡುಗಳು ಗೋಚರಿಸುತ್ತಿದ್ದುವು.

ಅಲ್ಲಿಯ ಸರಳ ಅತಿಥಿಗೃಹದಲ್ಲಿ ವಾಸ್ತವ್ಯ. ಬೆಳಗಿನ ವೇಳೆ ಚಾರಣ ಆರಂಭವಾಯಿತು. ಪುಟ್ಟರುದ್ರ, ಮಲ್ಲಯ್ಯನೆಂಬ ಈರ್ವರು ತರಬೇತಿ ವಿದ್ಯಾರ್ಥಿಗಳ ಮಾರ್ಗದರ್ಶನ. ದೊಡ್ಡ ಸಂಪಿಗೆ ತನಕ ಕಾಲ್ನಡಿಗೆ. ವಾಹನ ದೊರೆತರೆ ಕ್ಯಾತೇಗೌಡನ ಗುಡಿ ನಮ್ಮ ಗುರಿ. ದಿಂಡಲು ಮರ ಎಣಿಕೆ ಪ್ರಕಾಶನ ಕಾರ್ಯ. ಅಣಿಲೆ, ತಾರೆ ಮರ ಎಣಿಸಿದ್ದು ಹೇಮಂತ. ಕಾಯಿ ಬಿಟ್ಟ ನೆಲ್ಲಿಮರ ರಂಜನಿ, ರೇಖಾರಿಗೆ ಪ್ರಿಯ. ರುದ್ರಾಕ್ಷಿ ಪ್ರಭೇದ, ಮತ್ತಿ, ಹುನಗಲು, ಕಾಡತ್ತಿ, ತೊರೆಮತ್ತಿ, ಮುಳ್ಳು ಬೂರಲ ಹೀಗೆ ಗುರುತಿಸಿ ಹೆಸರು ಹೇಳುತ್ತಾ ನಡೆದವನು ನಾನು. ತೋಳುದ್ದ ಅಂಗೈ ಅಗಲದ ಕಾಯಿ ಜೋತಾಡಿಸಿಕೊಂಡ ಗಣಪೆ (Entada Seandars) ಬಳ್ಳಿ ಕಂಡು ಎಲ್ಲರಿಗೂ ಅಚ್ಚರಿ. ಬಳ್ಳಿಯ ಗಾತ್ರವೂ ಭಾರಿ. ತೊಡೆ ಗಾತ್ರದ ಬಳ್ಳಿಯಲ್ಲಿ ಜೋಕಾಲಿಯಾಡಿದೆವು. ಅಂಗೈ ಅಗಲದ ಚಪ್ಪಟೆ ಬೀಜವುಳ್ಳ ಆ ಬಳ್ಳಿಗೆ ಚಪ್ಪೆ ಬಳ್ಳಿ ಎಂಬ ಗಿರಿಜನ ಹೆಸರು. ಹೊಂಬಾಗೆ, ಚುಜ್ಜಲು, ಕಾಡು ಜಾಯಿಕಾಯಿ ಮರಗಳ ಸಾಲು ಸ್ವಾಗತಿಸುತ್ತಿತ್ತು. ಸೀಗೆ ಬಳ್ಳಿಯ ಬಳುಕು ಕಂಡು ಮುಂದೆ ಸಾಗಿದಾಗ ಬಳ್ಳಿ ಮುತ್ತುಗದ ಭಾರಿ ತೊನೆದಾಟ ರಂಜಿಸಿತು. ಲಿಂಬೆ ಬಣ್ಣ ಹಾಗೂ ಗಾತ್ರದ ಮಗ್ಗಾರೆ ಕಾಯಿಯ ಮುಳ್ಳು ಮರ ಆಕರ್ಷಿಸಿತು. ಆಯುರ್ವೇದ ಅಭ್ಯಸಿಸುವ ಸಂಗಡಿಗರಿಗೆ ಭಾರೀ ಖುಷಿ. ಕೈಗೆಟುಕಿದ, ಎಟುಕದ ಕಾಯಿಗಳೆಲ್ಲವನ್ನೂ ಕಿತ್ತು ಸಂಗ್ರಹಿಸಿಕೊಂಡರು.

ದೊಡ್ಡ ಸಂಪಿಗೆ ಹತ್ತಿರವಾಗುತ್ತಿದ್ದಂತೆ ಜೌಗಿನಲ್ಲಿ ಮಳಲ್‌ಕಡು ಮೊಸಳೆಕೆರೆ ಎದುರಾಯಿತು. ಕೆರೆ ತುಂಬಾ ಕೆಸರು ನೀರು. ದೂರದಂಚಿನಲ್ಲಿ ಧಡ್ಡೆಂದು ಸದ್ದಾಯಿತು. ಕುರುಚಲು ಪೊದರು ಸಂದಿನಿಂದ ಮೊಸಳೆ ನೀರಿಗೆ ಧುಮುಕಿತ್ತು. ಮಲ್ಲಯ್ಯ ಹೇಳಿದ : ಆನೆ ಹಿಂಡು ಈ ಕೆರೆಗೆ ನೀರು ಕುಡಿಯಲು ಬರುವುದು ಸಾಮಾನ್ಯವಂತೆ. ರಸ್ತೆಯ ಬದಿಯಲ್ಲಿ ನೀರಿನ ಮಡುವಿನ ಮಧ್ಯೆಯ ದಿಬ್ಬವೊಂದರಲ್ಲಿ ಕೊಳವೆ ಬಾವಿ ತೋಡಲಾಗಿತ್ತು. ಸಮೀಪದಲ್ಲೆಲ್ಲೂ ಜನವಸತಿ ಇಲ್ಲದ ದಟ್ಟಕಾಡು. ಪ್ರಾಣಿ ಸಂಕುಲಕ್ಕೆ ನೀರಾಸರೆ ಹನ್ನೆರಡು ತಿಂಗಳೂ ಉಪಲಬ್ಧ. ಹಾಗಿದ್ದರೆ ಕೊಳವೆ ಬಾವಿ ಉದ್ದೇಶ ಏನಿತ್ತು ? ಅದರ ಹಂಗೇಕೆ ನಮಗೆ ! ಆದರೆ ಹತ್ತಿರ ಹೋಗಿ ಗಮನಿಸಿದಾಗ ನೀರು ಜಗ್ಗುವ ರಟ್ಟೆ ಗಾತ್ರದ ಕಬ್ಬಿಣ ಹಿಡಿಯನ್ನು ಬಿದಿರು ಕಡ್ಡಿ ಬಗ್ಗಿಸುವಂತೆ ಎಲ್ ಆಕಾರಕ್ಕೆ ಬಗ್ಗಿಸಲಾಗಿತ್ತು. ಎಲಾ ಹೀಗೇಕೆ ಎಂದು ಅಚ್ಚರಿ ನಮಗೆ. ಮಲ್ಲಯ್ಯ ವಿವರಣೆ ನೀಡಿದ. ಕಿಲಾಡಿ ಆನೆಗೂ ಈ ಕೊಳವೆ ಬಾವಿ ಕಿರಿಕಿರಿ ಎನಿಸಿತಂತೆ. ಒಂದು ದಿನ ಹಿಡಿದು ನೀರು ಜಗ್ಗಲೆಂದು ಒತ್ತಿ ನೋಡಿತೋ ಏನೋ. ಅಂತೂ ಆನೆ ಬಗ್ಗಿಸಿದ ಹಿಡಿ ನೇರಗೊಳಿಸಲು ಮತ್ತಾರಿಂದಲಾದೀತು ?

ದೊಡ್ಡ ಸಂಪಿಗೆ ಹಾದಿಯಲ್ಲಿ ಕಿರಿಗುಡ್ಡದಂತೆ ಬಿದ್ದಿದ್ದ ಹಸಿ ಲದ್ದಿ ಕಾಣಿಸಿತು. ಹಿಂದಿನ ರಾತ್ರಿ ಆ ಹಾದಿಯಲ್ಲಿ ಆನೆ ಹಿಂಡು ದಾಟಿದ್ದನ್ನು ಮಾರ್ಗದರ್ಶಿ ಗುರುತಿಸಿದ. ಬಿದಿರ ಮೆಳೆಗಳನ್ನು ಲಟಲಟನೆ ಮುರಿಯುತ್ತಾ ಆ ತಗ್ಗಿನಗುಂಟ ಸಾಗಿದ್ದ ಕರಿವಿಂಡಿನ ದೃಶ್ಯ ಊಹಿಸಿಕೊಂಡೆವು. ರೇಖಾ ಉದ್ಗರಿಸಿದಳು: 'ಆ ಕೊರಕಲಿನಲ್ಲಿ ಆನೆ ಹೇಗೆ ಸಾಗಿತು, ಖಂಡಿತ ಅಸಾಧ್ಯ.' ಆದರೆ ನಂಬಲೇಬೇಕಾದ ಸತ್ಯ ಅದಾಗಿತ್ತು. ಏಳೆಂಟು ಆನೆಗಳು ಸಾಗಿಹೋದ ಸ್ಪಷ್ಟ ಹೆಜ್ಜೆ ಗುರುತುಗಳು ಅಲ್ಲಿ ಪಡಿಮೂಡಿತ್ತು. ಹೇಮಂತ ಆನೆ ಲದ್ದಿಯನ್ನು ಕಾಗದ ಪೊಟ್ಟಣದಲ್ಲಿ ಸಂಗ್ರಹಿಸಿದ. ರಂಜನಿ ಕೇಳಿದಳು : 'ಏಕೆ ಸಂಗ್ರಹಿಸಿದ್ದಿ ?' ಹೇಮಂತ ಉತ್ತರಿಸಿದ : 'ಬೆಟ್ಟ ಏರಲು ಬೆಚ್ಚುವ ಸಹಪಾಠಿ ಹರಿಣಿಗೆ ಬೇಗಡೆಯಲ್ಲಿ ಸುತ್ತಿ ಪಾರಿತೋಷಕವೀಯಲು.' ನಿಜ. ಆಯುರ್ವೇದ ವೈದ್ಯದಲ್ಲಿ ಆನೆ ಲದ್ದಿಯ ಉಪಯೋಗ ಕೆಲವೆಡೆ ಇದೆ.

ಉತ್ತರ ಕನ್ನಡದಲ್ಲಿ ಕೌಲವಿ ಎಂದು ಕರೆಯುವ ಮರ ತೋರಿಸಿ ಪುಟ್ಟರುದ್ರ ಹೇಳಿದ: ''ಸ್ವಾಮಿ, ಆ ಮರ ನೋಡಿ. ಡೊಳ್ಳೆಮರ.'', ಟೆನಿಸ್ ಬಾಲ್ ಗಾತ್ರ ಆಕಾರದ ಕಾಯಿ ಮರ ತುಂಬ ತುಂಬಿತ್ತು. ''ಆನೆಗೆ ಈ ಕಾಯಿ ಬಲು ಪ್ರಿಯ. ಆದರೆ ಡೊಳ್ಳೆ ಕಾಯಿ ತಿಂದಾಗ ಮತ್ತು ಏರುತ್ತದೆ. ಹುಚ್ಚಾಬಟ್ಟೆ ವರ್ತಿಸುತ್ತದೆ'' ಎಂಬ ವಿವರಣೆ ನೀಡಿದ. ಲೆಸಿಥಿಡೇಸೀ ಕುಟುಂಬದ 'ಕರೇಯ ಅರ್ಬೋರೀರ' ಎಂಬ ದ್ವಿನಾಮದ ಈ ಮರಕ್ಕೆ ದಕ್ಷಿಣ ಕನ್ನಡಿಗರು ದಡ್ಡಾಲ ಎಂದು ಕರೆವರು. ತೊಗಟೆನಾರು ಹೂಕಟ್ಟಲು ಬಳಸುತ್ತಾರೆ. ಮಲ್ಲಯ್ಯ ಮತ್ತೊಂದು ಮರ ತೋರಿಸಿದ : 'ಮರ ಬೆಂಡೆ ಅಂದರೆ ಆನೆಗೆ ಬಲು ಪ್ರೀತಿ. ನಾರು ಮೇಯಲು ಬಲು ಮೋಜು.' ಕುತೂಹಲಗೊಂಡು ಹತ್ತಿರ ಹೋಗಿ ಮರ ಗುರುತಿಸಿದೆ. ಕಿಡಿಯಾ ಕೇಲ್ಸಿನಾ. ಬೆಂಡೆಯ ಕುಲದ್ದೇ ಮರ. ರಟ್ಟೆ ಗಾತ್ರ ಕಾಂಡದ ಮರ. ಸೂರ್ಯನ ಬೆಳಕಿಗಾಗಿ ಕತ್ತು ಚಾಚಿ ಮುಗಿಲೆತ್ತರಕ್ಕೆ ನಿಂತಿತ್ತು. ಬೋರ್‌ವೆಲ್ ನಡು ಮುರಿಯಬಲ್ಲ ಆನೆಗೆ ಈ ಮರ ಹುಲ್ಲು ಕಡ್ಡಿಗೆ ಸಮ. ಆದರೆ ಮರ ಮುರಿಯದ ಆನೆ ಬಾಳೆ ಹಣ್ಣು ಸುಲಿದಂತೆ ಕೇವಲ ಹೊರನಾರನ್ನಷ್ಟೇ ಸುಲಿದು ಭಕ್ಷಿಸುತ್ತದೆ.

ರಂಜನಿ ಕಿಡಿಯಾ ಮರ ಎಣಿಸಹತ್ತಿದಳು. 'ಸರ್, ನೋಡಿ. ಅದೂ ಮರಬೆಂಡೆ ತಾನೇ ?' ಕೊಂಚ ಬಣ್ಣ ಬದಲಾಗಿದ್ದ ಭಾರಿ ಮರದ ಬೊಡ್ಡೆ ತೋರಿಸಿದಳು ರಂಜನಿ. ಅದು ಕಿಡಿಯಾ ಆಗಿರಲಿಲ್ಲ. ಟಿಲಿಯೇಸೀ ಕುಲದ ಗ್ರೀವಿಯಾ ಟಿಲಿಯಫೋಲಿಯಾ. ಪುಟ್ಟರುದ್ರ ಹೇಳಿದ: 'ಅದು ದಡಸಲ. ಸಿಹಿ ಹಣ್ಣು ತಿನ್ನುತ್ತೇವೆ.' ಸಂಸ್ಕೃತದ ಧನ್ವನ ಸೋಲಿಗರ ಬಾಯಿಯಲ್ಲಿ ದಡಸಲ. ಪ್ರಕಾಶ ಒಂದಿನಿತು ತೊಗಟೆ ಕಿತ್ತು ನೆಕ್ಕಿ ನೋಡಿದ. 'ಸಾರ್, ಸಿಹಿಯಾಗಿದೆ.' ರೇಖಾ ಲೇವಡಿ ಮಾಡಿದಳು: 'ಮುಂದಿನ ಜನ್ಮದಲ್ಲಿ ನೀನು ಆನೆಯಾಗಿಯೇ ಹುಟ್ಟುವಿಯಂತೆ.' ರಂಜನಿ ಸೇರಿಸಿದ ವಾಕ್ಯ ಹೀಗಿತ್ತು : 'ಬಿಳಿಗಿರಿ ಬೆಟ್ಟಕ್ಕೇ ಬಂದುಬಿಡು. ಆದರೆ ಹೆಣ್ಣಾನೆಯಾಗಿಬಿಡು. ಇಲ್ಲದಿದ್ದರೆ ವೀರಪ್ಪನ್ ಮರಿಗಳ್ಯಾರಾದರೂ ನಿನ್ನ ದಂತ ಮುರಿದುಬಿಟ್ಟಾರು.' ಆನೆಗಳಿಗೆ ಮರ ಬೆಂಡೆಯಂತೆಯೇ ದಡಸಲವೂ ಪ್ರಿಯ ಎಂದು ಪುಟ್ಟರುದ್ರ ತಿಳಿದದ್ದು ಅಂದೇ.

ಸರಗೂರು ಸಮೀಪದ ಪುಟ್ಟರುದ್ರನಿಗೆ ಆನೆ ಹಿಂಡು ಕಂಡಾಗ ಬಾಲ್ಯದಿಂದಲೂ ಖುಷಿಯಂತೆ. ಒಮ್ಮೆ ಪೈರೆಲ್ಲಾ ನುಚ್ಚುನುರಿ ಮಾಡಿ, ಕಬ್ಬಿನ ಗದ್ದೆ ಮಣ್ಣು ಮುಕ್ಕಿಸಿದ ಕತೆ ಬಣ್ಣಿಸಿದ. ಅಷ್ಟಾದರೂ ಅವರ ಸರಗೂರಿನಲ್ಲಿ ವಿದ್ಯುತ್ ತಂತಿ ಬೇಲಿ ಮಾಡುವುದಿಲ್ಲವಂತೆ. ಚೈತ್ರ ಹುಣ್ಣಿಮೆಗೆ ಸೋಲಿಗರು ಆನೆ ರಾಯನ ಪ್ರೀತಿಗೆ ರೊಟ್ಟಿ ಹಬ್ಬ ಮಾಡುತ್ತಾರಂತೆ. ಮುತ್ತುಗದೆಲೆಯಲ್ಲಿ ರೊಟ್ಟಿ ತಟ್ಟಿ ಕುಂಬಳಕಾಯಿ ಕಡಿದು ನೈವೇದ್ಯ ನೀಡುತ್ತಾರೆ. ರಾತ್ರಿಯೆಲ್ಲಾ ಕುಣಿದು ಕುಪ್ಪಳಿಸಿ ಕರಿರಾಯನ ಅಭಯ ಬೇಡುತ್ತಾರಂತೆ. ದೊಡ್ಡ ಸಂಪಿಗೆ ಮರ ತಲುಪಿದಾಗ ಸೋಲಿಗರ ಗುಂಪೇ ನೆರೆದಿತ್ತು. ಸೋಲಿಗ ಗುರು ತಮ್ಮಡಿ ಮುಳ್ಳು ಹಾವಿಗೆ ಧರಿಸಿ ನ್ಯಾಯ ಬಗೆಹರಿಸುತ್ತಿದ್ದ. ಎಣ್ಣೆ ಕಾಣದ ಗುಂಗುರು ಕೂದಲ ಮಕ್ಕಳು, ಬಟ್ಟೆ ಮಾಸಿದ ಹಿರಿಯರು ಸಾಲಾಗಿ ಕುಳಿತಿದ್ದರು. ಕಾಯಿಬೆಲ್ಲ ಬಾಳೆಹಣ್ಣು ಹಾಕಿದ ಹುಗ್ಗಿ ಪ್ರಸಾದ ಹಸಿದ ಹೊಟ್ಟೆಯಲ್ಲಿ ಪರಮಾನ್ನವೆನಿಸಿತು. ದಿಬ್ಬದ ಪೋಡಿಗೆ ಹೋಗಿ ಹುಲ್ಲು ಚಾವಣಿ ಒಳಗೆ ಹಣಿಕಿ ಹಾಕಿದ ರಂಜನಿ ಸೋಲಿಗ ಹುಡುಗಿಯಿಂದ ಬೈಸಿಕೊಂಡಳು. ಸೋಲಿಗರ ಗುಡಿಸಲೊಳಗೆ ಇತರರು ಕಾಲಿರಿಸಬಾರದಂತೆ. ಮುರುಕಲು ಅಟ್ಟಳಿಗೆಯ ತುದಿ ಏರಿದ ಹೇಮಂತ ಛಾಯಾಚಿತ್ರಕ್ಕಾಗಿ ಪೋಸು ಕೊಡುತ್ತಿದ್ದಾಗ ಸೋಲಿಗರ ನಾಯಿ ಬೊಗಳುತ್ತಿತ್ತು. ಭಾರ ಹೆಜ್ಜೆಯಲ್ಲಿ ತಂಗುದಾಣಕ್ಕೆ ಬಂದಾಗ ಕೆರೆಯಲ್ಲಿ ಬಿಳಿಗಿರಿರಂಗನ ತೆಪ್ಪೋತ್ಸವ ನಡೆದು ಜನರು ಚದುರುತ್ತಿದ್ದರು. ಬಿಳಿಗಿರಿ ರಂಗನಾಥನನ್ನು ಸೋಲಿಗರು ರಂಗಭಾವನೆಂದು ಕರೆಯುತ್ತಾರೆ. ಉತ್ಸವಮೂರ್ತಿ ಹೊತ್ತ ತೇರು ಗುಡಿಯತ್ತ ಮರಳುತ್ತಿತ್ತು. ಸೋಲಿಗರು ಹಿಂಬಾಲಿಸುತ್ತಿದ್ದರು.



*ಆನೆಯಿಂದ ತೊಗಟೆ ಕೀಳಿಸಿಕೊಂಡ ಭಾರಿ ಗಾತ್ರದ ಬೆಂಡೆಮರ*

**ಡಾ|| ಸತ್ಯನಾರಾಯಣ ಭಟ್, ಪಿ.**
೨೯, ೫ನೇ ರಸ್ತೆ ಕೊನೆ, ವೆಂಕಟಪ್ಪ ಕಾಲೋನಿ
ಸಂಜಯನಗರ, ಬೆಂಗಳೂರು - ೯೪

# ರಾಮ ತ್ರೇತಾಯುಗದವನೇ?

ರಾಮಾಯಣದ ಕಾಲದ ಬಗ್ಗೆ ಜಿಜ್ಞಾಸೆ ಇರುವುದು ನಿಜವಾದರೂ ಸಾಮಾನ್ಯ ಜನರಲ್ಲಿ ರಾಮನ ಕಾಲದ ಬಗ್ಗೆ ಯಾವ ಸಂಶಯವೂ ಇಲ್ಲ. ರಾಮಾಯಣ ನಡೆದದ್ದು ತ್ರೇತಾಯುಗದಲ್ಲಿ. ಮಹಾಭಾರತ ನಡೆದದ್ದು ದ್ವಾಪರಯುಗದಲ್ಲಿ. ಈಗ ನಡೆಯುತ್ತಿರುವುದು ಕಲಿಯುಗ. ಇದು ಸಾಮಾನ್ಯವಾದ ನಂಬಿಕೆ. ಈ ನಂಬಿಕೆಯ ಪ್ರಕಾರ ಈ ವರ್ಷದವರೆಗೆ ಅಂದರೆ ಕ್ರಿ.ಶ. ೨೦೦೦ದವರೆಗೆ ರಾಮಾಯಣ ನಡೆದು ೯೦೦,೦೦೦ ವರ್ಷಗಳಾದವು. ಬಾಲಕಾಂಡದ ಮುನ್ನುಡಿಯಲ್ಲಿ ಡಿ.ವಿ.ಜಿ.ಯವರು ತಿಳಿಸಿದಂತೆ ಅದರ ವಿವರ ಹೀಗಿದೆ.

*ತ್ರೇತಾಯುಗದ ಅವಶಿಷ್ಟ ೩೦,೦೦೦ ವರ್ಷಗಳು*
*ದ್ವಾಪರಯುಗ ೮,೬೪,೦೦೦ ವರ್ಷಗಳು*
*ಕಲಿಯುಗ ೬,೦೦೦ ವರ್ಷಗಳು. ೬೦೦೨ ಎಂದು ಕೂಡ ಕೆಲವರು ಹೇಳುತ್ತಾರೆ.*
*ಒಟ್ಟು ೯೦೦,೦೦೦ ವರ್ಷಗಳು.*

ಬಾಲಕಾಂಡದ ಮುನ್ನುಡಿಯನ್ನು ಬರೆಯುತ್ತಾ ಡಿ.ವಿ.ಜಿ. ಯವರು ಪಾಶ್ಚಾತ್ಯರು ಇದನ್ನು ಒಪ್ಪಲಾರರು ಎನ್ನುತ್ತಾರೆ. ಅದಕ್ಕೆ ಅವರು ಕಾರಣವನ್ನು ಕೊಡುತ್ತಾ ಭಾರತೀಯ ಸಂಸ್ಕೃತಿ ಪಾಶ್ಚಾತ್ಯ ಸಂಸ್ಕೃತಿಗಿಂತ ಪುರಾತನವಾದದ್ದೆಂದು ಅವರು ಒಪ್ಪಲು ಅವರಿಗೆ ಮನಸ್ಸುಬಾರದು ಎನ್ನುತ್ತಾರೆ. ಆದರೆ ೧೯೨೧ರಲ್ಲಿ ಹರಪ್ಪ ಮೊಹೆಂಜೊದಾರೊಗಳ ಉತ್ಖನನದ ನಂತರ ಸಿಂಧೂ ಕಣಿವೆಯ ಕಾಲ ಸುಮಾರು ಕ್ರಿ. ಪೂ. ೨೫೦೦ ಎಂದು ತಿಳಿಯಿತು. ಆ ಸಂಸ್ಕೃತಿ ಜಗತ್ತಿನ ಪುರಾತನ ಸಂಸ್ಕೃತಿಗಳಲ್ಲಿ ಒಂದು ಎಂದು ಎಲ್ಲರೂ ಒಪ್ಪಿದ್ದಾರೆ. ಉಳಿದ ಪುರಾತನ ಸಂಸ್ಕೃತಿಗಳು ಚೀನಾ, ಬೆಬಿಲೋನಿಯಾ ಮತ್ತು ಈಜಿಪ್ಟಿನ ಸಂಸ್ಕೃತಿಗಳು ಪಾಶ್ಚಾತ್ಯವಲ್ಲ ಎಂಬುದನ್ನು ನಾವು ಗಮನಿಸಬೇಕು. ಅದನ್ನು ಪಾಶ್ಚಾತ್ಯರು ಒಪ್ಪಿಕೊಂಡಿಲ್ಲವೆ? ಅವರು ಸಾಕಷ್ಟು ಸಂಶೋಧನೆ ಮಾಡಿಯೇ ಈ ನಿರ್ಧಾರಕ್ಕೆ ಬಂದಿದ್ದಾರೆ. ಅದಕ್ಕೆ ಅವರು ಪುರಾವೆಗಳನ್ನು ಒದಗಿಸುತ್ತಾರೆ. ಪಾಶ್ಚಾತ್ಯರ ಪ್ರಕಾರ ರಾಮಾಯಣ ಕ್ರಿ. ಪೂ. ೫೦೦ ರಿಂದ ಕ್ರಿ. ಶ. ೩೦೦ ರವರೆಗಿನ ಕಾಲದಲ್ಲಿ ಬರೆದಿರಬಹುದು. ಆದರೆ ರಾಮ ಭಕ್ತರು ರಾಮಾಯಣ ೯೦೦,೦೦೦ ವರ್ಷಗಳ ಹಿಂದೆ ನಡೆದದ್ದು ಎನ್ನುತ್ತಾರೆ. ಅಂದರೆ ಆಗ ನಾಗರಿಕತೆ ಅಷ್ಟೊಂದು ಬೆಳೆದಿತ್ತು ಎಂಬುದನ್ನು ಸಿದ್ಧಪಡಿಸಬೇಕಾಗುತ್ತದೆ. ನಂಬಿಕೆ ಬೇರೆ, ಸತ್ಯ ಬೇರೆ. ನಾವು ಏನನ್ನು ಬೇಕಾದರೂ ನಂಬಬಹುದು. ಆದರೆ ಅದನ್ನು ಇತರರು ನಂಬಬೇಕು ಎಂದು ನಾವು ಬಯಸಿದರೆ ಅದು ಸತ್ಯ ಎಂಬುದನ್ನು ಸಾಕ್ಷಿ ಪುರಾವೆಗಳೊಂದಿಗೆ ಸಿದ್ಧಪಡಿಸಿ ತೋರಿಸಬೇಕಾಗುತ್ತದೆ. ಆಗ ಮಾತ್ರ ಇತರರು ನಂಬುತ್ತಾರೆ. ರಾಮಾಯಣ ೯೦೦,೦೦೦ ವರ್ಷಗಳ ಹಿಂದೆ ನಡೆದಿದ್ದಾದರೆ ನಮ್ಮ ಸಂಸ್ಕೃತಿ ಅದಕ್ಕೂ ಪ್ರಾಚೀನ ಎಂದಾಯಿತು. ನಮ್ಮ ಸಂಸ್ಕೃತಿ ಅಷ್ಟೊಂದು ಪ್ರಾಚೀನ ಎಂದು ಸಿದ್ಧಪಡಿಸಲು ನಮ್ಮಿಂದ ಸಾಧ್ಯವೇ?

ಮಾನವನ ವಿಕಾಸ ನಿರಂತರವಾಗಿ ನಡೆದಿದೆ. ಆದರೂ ಆ ಕಾಲದಲ್ಲಿ ವಿಕಾಸ ಹೇಗಿತ್ತೆಂದರೆ ವಿಕಾಸವೇ ಇಲ್ಲವೇನೋ ಎನ್ನಿಸುವಷ್ಟು ನಿಧಾನ. ಮನುಷ್ಯ ಎರಡು ಕಾಲುಗಳ ಮೇಲೆ ನಿಲ್ಲುವುದನ್ನು ಕಲಿತದ್ದೇ ಸುಮಾರು ೫ ಲಕ್ಷ ವರ್ಷಗಳ ಹಿಂದೆ ಎಂದು ವಿಜ್ಞಾನ ಹೇಳುತ್ತದೆ. ಕಬ್ಬಿಣದ ಯುಗ ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಇತ್ತು. ಇದೇ ಕಾಲದಲ್ಲಿ ಅಂದರೆ ಕಬ್ಬಿಣದ ಯುಗದಲ್ಲಿ ಕುದುರೆ ಸವಾರಿ ಮತ್ತು ನಗರಗಳ ನಿರ್ಮಾಣ ಆಯಿತು. ಇದೇ ಸುಮಾರಿಗೆ ರಾಮಾಯಣವನ್ನು ಬರೆದಿರಬೇಕು. ಅಥವಾ ಅದಕ್ಕಿಂತ ಮುಂಚಿನದಾದರೆ ನಗರದ ಭವನಗಳ ವರ್ಣನೆಗಳು ನಂತರ ಸೇರಿಸಿದ್ದಾಗಿರಬೇಕು. ಉತ್ಪ್ರೇಕ್ಷೆ ಮಾಡುವುದು ಸಂಪ್ರದಾಯಸ್ಥರ ಚಟವಾಗಿಬಿಟ್ಟಿದೆ. ಉತ್ಪ್ರೇಕ್ಷೆಗೂ ಒಂದು ಮಿತಿ ಇದ್ದರೆ ಚೆನ್ನಾಗಿರುತ್ತದೆ. ಅದು ಕೂಡ ಒಂದು ಅಲಂಕಾರವಾದ್ದರಿಂದ ಸಾಹಿತ್ಯದಲ್ಲಿ ಅದು ಸುಂದರವಾಗಿರುತ್ತದೆ. ಆದರೆ ಇತಿಹಾಸದ ಪುಟಗಳಲ್ಲಿ ಅದಕ್ಕೆ ಸ್ಥಾನವಿರಬಾರದು. ಅಲ್ಲಿ ನಮಗೆ ಬೇಕಾದದ್ದು ಘಟನೆಗಳು, ಪುರಾವೆಗಳು ಮತ್ತು ದಾಖಲೆಗಳು. ರಾಮಾಯಣ ಒಂದು ಕಾವ್ಯ ಮಾತ್ರ ಆಗಿದ್ದರೆ ನಮ್ಮ ಅಡ್ಡಿಯೇನೂ ಇಲ್ಲ. ಆದರೆ ರಾಮ ನಿಜವಾಗಿಯೂ ಬದುಕಿದ್ದ, ರಾಮಾಯಣದಲ್ಲಿ ಇರುವುದೆಲ್ಲ ಅಕ್ಷರಶಃ ಸತ್ಯ ಎಂದು ಹೇಳುವುದಾದರೆ ಮಾತ್ರ ಅದನ್ನು ಕಣ್ಣುಮುಚ್ಚಿ ಒಪ್ಪಲು ಸಾಧ್ಯವಾಗುವುದಿಲ್ಲ.

ತೆಕ್ಕಂಜ ಜಯಶಂಕರ ಭಟ್ಟರ ಪ್ರಕಾರ ರಾಮಾಯಣ ಮತ್ತು ಮಹಾಭಾರತ ಯುದ್ಧಗಳು ನಡೆದದ್ದು ಒಂದೇ ಶತಮಾನದಲ್ಲಿ, ಕೆಲವೇ ವರ್ಷಗಳ ಅಂತರದಲ್ಲಿ. ಅದಕ್ಕೆ ಅವರು ಸಾಕ್ಷಿಗಳನ್ನು ಒದಗಿಸುತ್ತಾರೆ (**ಕಸ್ತೂರಿ** : ಮಾರ್ಚ್ ೧೯೯೭, ಶ್ರೀರಾಮನು ಮಹಾಭಾರತ ಕಾಲದವನೆ ?). ಕೆಲವು ವ್ಯಕ್ತಿಗಳು ರಾಮಾಯಣ ಮತ್ತು ಮಹಾಭಾರತ ಎರಡರಲ್ಲೂ ಕಾಣಿಸಿಕೊಳ್ಳುತ್ತಾರೆ. ಉದಾಹರಣೆಗೆ, ವಿಶ್ವಾಮಿತ್ರ ಮತ್ತು ವಸಿಷ್ಠರು. ವಿಶ್ವಾಮಿತ್ರರಿಗೆ ಪರಶುರಾಮ ವಾವೆಯಲ್ಲಿ ಮೊಮ್ಮಗ. ಆತ ರಾಮನೊಂದಿಗೆ ವಿಶ್ವಾಮಿತ್ರನ ಎದುರಿನಲ್ಲಿಯೇ ಕಾದಿ ಸೋತುಹೋದವ. ಅವನೇ ಕರ್ಣನ ಗುರುವಾಗಿದ್ದ. ಅವನನ್ನು ಯುಧಿಷ್ಠಿರ ವನವಾಸ ಕಾಲದಲ್ಲಿ ಕಂಡಿದ್ದ. ಮಹಾಭಾರತ ಯುದ್ಧಕಾಲ ದಲ್ಲಿ ಪರಶುರಾಮ ಮರಣ ಹೊಂದಿದ್ದ. ಅಭಿಮನ್ಯುವಿನ ಮರಣಕ್ಕಾಗಿ ದುಃಖಿಸುತ್ತಿದ್ದ ಯುಧಿಷ್ಠಿರನಿಗೆ ವ್ಯಾಸರು ಸಮಾಧಾನಪಡಿಸುತ್ತ ಎಂತೆಂಥ ಮಹಾಪುರುಷರಿಗೆ ಮೃತ್ಯುವನ್ನು ಜಯಿಸಲು ಆಗಿಲ್ಲ ಅಂದಮೇಲೆ ಅಭಿಮನ್ಯು ಸತ್ತಿದ್ದು ವಿಶೇಷವಲ್ಲ ಎಂದು ಹದಿನಾರು ಜನರ ಉದಾಹರಣೆ ಕೊಡುತ್ತಾರೆ. ಅವರಲ್ಲಿ ಪರಶುರಾಮನೂ ಒಬ್ಬ. ರಾಮ ಸೀತೆಯರು ನೋಡುವಾಗ ಅನಸೂಯ ಹಣ್ಣು ಹಣ್ಣು ಮುದುಕಿ. ಆಕೆಯ ಮಗ ದೂರ್ವಾಸರಿಂದಲೇ ಕುಂತಿ ಕರ್ಣನನ್ನು ಪಡೆದದ್ದು. ಮಾರ್ಕಂಡೇಯ ಯುಧಿಷ್ಠಿರನನ್ನು ವನವಾಸದಲ್ಲಿ ಕಂಡು ನಿನ್ನನ್ನು ನೋಡಿದರೆ ರಾಮನನ್ನು ವನವಾಸದಲ್ಲಿ ಕಂಡಂತೆ ಆಗಿದೆ ಎನ್ನುತ್ತಾರೆ. ಅಂದರೆ ಅವರು ಇಬ್ಬರನ್ನೂ ವನವಾಸಕಾಲದಲ್ಲಿ ಕಂಡಿದ್ದರು. ಇವು ಪ್ರಮುಖವಾದ ಉದಾಹರಣೆಗಳು. ಅವರು ಇನ್ನೂ ಕೆಲವು ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಹನುಮಂತ ಭೀಮನನ್ನು ಕಂಡು ರಾಮಕಥೆಯನ್ನು ತಿಳಿಸಿದ್ದ. ವಿಭೀಷಣನಿಂದ ಸಹದೇವ ಕಪ್ಪಕಾಣಿಕೆಯನ್ನು ಪಡೆದದ್ದು ಮುಂತಾದವುಗಳು ಇವೆ. ದುರ್ಯೋಧನನ ಸ್ನೇಹಿತನಾದ ಚಾರ್ವಾಕ ಯುಧಿಷ್ಠಿರನನ್ನು ದೂಷಿಸಿದ್ದಕ್ಕಾಗಿ ಬ್ರಾಹ್ಮಣರು ಆತನನ್ನು ಹೊಡೆದು ಕೊಲ್ಲುತ್ತಾರೆ. ಆ ಚಾರ್ವಾಕನ ಶಿಷ್ಯ ಜಾಬಾಲಿ ಭರತನೊಂದಿಗೆ ಅರಣ್ಯಕ್ಕೆ ಬಂದು ರಾಮನನ್ನು ಮರಳಿ ಅಯೋಧ್ಯೆಗೆ ಕರೆದುಕೊಂಡು ಹೋಗಲು ಬಂದಿರುತ್ತಾನೆ. ಅವನನ್ನು ವೇದ ನಿಂದಕನೆಂದು ರಾಮ ದೂಷಿಸುತ್ತಾನೆ. ಮಹಾಭಾರತ ಮತ್ತು ರಾಮಾಯಣ ಇವೆರಡನ್ನೂ ತಾಳೆನೋಡಿ ಈ ಮೇಲಿನ ಸಾಕ್ಷಿಗಳನ್ನು ಒದಗಿಸಿದ್ದಾರೆ. ಆದರೆ ರಾಮನ ಕಾಲದ ಬಗ್ಗೆ ರಾಮಾಯಣವೇ ಏನು ಹೇಳುತ್ತದೆ ನೋಡೋಣ.

ಉತ್ತರಕಾಂಡದಲ್ಲಿ ಬರುವ ಒಂದು ಘಟನೆಯನ್ನು ನೋಡಿ. ರಾಮನ ರಾಜ್ಯದಲ್ಲಿ ಒಬ್ಬ ಬ್ರಾಹ್ಮಣನ ಮಗನು ಮರಣ ಹೊಂದಿದನು. ಆಗ ಬ್ರಾಹ್ಮಣನು ರಾಮನ ಅರಮನೆಯ ಎದುರಿಗೆ ಬಂದು ಗೋಳಾಡಿದ. ''ಇತರ ರಾಜ್ಯದಲ್ಲಿ ಹುಡುಗರಿಗೆ ಸಾವಿನ ಭಯವಿಲ್ಲ. ರಾಮನ ರಾಜ್ಯದಲ್ಲಿ ಚಿಕ್ಕ ಹುಡುಗರಿಗೆ ಸಾವು ಬಂದಿತಲ್ಲ! ವಿಧಿಪೂರ್ವಕವಾಗಿ ಪಾಲಿಸದಿದ್ದರೆ ರಾಜನ ತಪ್ಪುಗಳಿಂದ ಪ್ರಜೆಗಳ ವಿಪತ್ತು ಸಂಭವಿಸುತ್ತದೆ. ರಾಜ ದುರ್ಮಾರ್ಗಿಯಾಗಿದ್ದರೆ ಪ್ರಜೆಗಳಿಗೆ ಅಕಾಲ ಮೃತ್ಯು ಬರುತ್ತದೆ. ಈ ರಾಜ್ಯದಲ್ಲಿ ಯಾವುದೊ ಅಕಾರ್ಯ ನಡೆದಿದೆ, ಅದರ ಹೊಣೆ ರಾಜನದು'' ಎಂದು ದುಃಖಿಸುತ್ತಾನೆ. ರಾಮ ದುಃಖಿತನಾಗಿ ಅದಕ್ಕೇನು ಉಪಾಯವೆಂದು ವಿಚಾರಿಸಲು ತನ್ನ ಮಂತ್ರಿಗಳನ್ನು ಕಳಿಸಿದನು. ಅದೇ ಸಮಯಕ್ಕೆ ನಾರದ ವಸಿಷ್ಠ ವಾಮದೇವಾದಿ ಎಂಟು ಜನ ದ್ವಿಜರೂ ಬಂದರು. ರಾಮ ಅವರಿಗೆ ಪರಿಸ್ಥಿತಿಯನ್ನು ವಿವರಿಸಿ ಪರಿಹಾರವನ್ನು ಕೇಳಿದನು. ಆಗ ನಾರದರು ಚಾತುರ್ವರ್ಣ್ಯವನ್ನೂ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ) ಯುಗಕ್ಕೆ ತಕ್ಕಂತೆ ಅವರ ಸ್ಥಾನಮಾನವನ್ನೂ ವಿವರಿಸುತ್ತಾರೆ. ಕೃತಯುಗದಲ್ಲಿ ಬ್ರಾಹ್ಮಣರು ಮಾತ್ರ ತಪಸ್ಸು ಮಾಡುತ್ತಿದ್ದರು. ಕ್ಷತ್ರಿಯರು ಅವರ ಕೆಳಗೆ. ಅವರಿಗೆ ತಪಸ್ಸಿನ ಅಧಿಕಾರ ಇಲ್ಲ. ತ್ರೇತಾಯುಗದಲ್ಲಿ ಕ್ಷತ್ರಿಯರು ಪ್ರಬಲರಾಗಿ ಅವರೂ ಬ್ರಾಹ್ಮಣರಿಗೆ ಸಮಾನರೆನಿಸಿದರು. ತ್ರೇತಾಯುಗದಲ್ಲಿಯೇ ಕೃಷಿ ಮುಂತಾದ ಉದ್ಯೋಗಗಳು ಪ್ರಾರಂಭವಾದವು. ದ್ವಾಪರಯುಗದಲ್ಲಿ ವೈಶ್ಯರು ತಪಸ್ಸಿನ ಅಧಿಕಾರವನ್ನು ಪಡೆದರು. ಮುಂದೆ ಬರುವ ಕಲಿಯುಗದಲ್ಲಿ ಶೂದ್ರರಿಗೂ ತಪಸ್ಸಿನ ಅಧಿಕಾರ ಬರುತ್ತದೆ ಎಂದು ವಿವರಿಸುತ್ತಾರೆ. ಕೃತ, ತ್ರೇತಾ ಮತ್ತು ದ್ವಾಪರ ''ಮೂರು ಯುಗಗಳಿಂದ ಮೂರು ವರ್ಣದವರಿಗೆ ತಪಸ್ಸು ಪ್ರಾಪ್ತವಾಗಿ ಸ್ವಧರ್ಮವೆಂದು ವ್ಯವಸ್ಥಿತವಾಯಿತು,'' ಎಂದಿದೆ. ವ್ಯವಸ್ಥಿತವಾಯಿತು ಎನ್ನುವಲ್ಲಿ ಭವಿಷ್ಯತ್ಕಾಲವಿಲ್ಲ. ನಾರದರು ವಿವರಿಸುವಾಗಲೇ ಅವು ನಡೆದಿದ್ದವು. ಆದ್ದರಿಂದಲೇ 'ಆವಿಶತ್' ಎಂದು ಭೂತಕಾಲವನ್ನು ಉಪಯೋಗಿಸಲಾಗಿದೆ.

ಎಸ್. ನಳಿನಿ

ಆದ್ದರಿಂದ ಅದು ದ್ವಾಪರಕಾಲವೇ ಆಗಿರಬೇಕು. ಅದು ಎಲ್ಲರೂ ನಂಬುವಂತೆ ತ್ರೇತಾಯುಗವೇ ಆಗಿದ್ದರೆ ''ಮುಂದೆ ಬರುವ ದ್ವಾಪರದಲ್ಲಿ ವೈಶ್ಯರಿಗೆ ತಪಸ್ಸಿನ ಅಧಿಕಾರ ಬರುವುದು'' ಎಂದಿರಬೇಕಿತ್ತು. ಹಾಗಿಲ್ಲದೆ ವೈಶ್ಯರು ತಪಸ್ಸಿನ ಅಧಿಕಾರ ಪಡೆದರು ಎಂದಿದೆ. ಮುಂದೆ ಬರುವ ಕಲಿಯುಗದಲ್ಲಿ ಶೂದ್ರರಿಗೂ ತಪಸ್ಸಿನ ಅಧಿಕಾರ ಬರುತ್ತದೆ ಎಂದು ಹೇಳಬೇಕಾದರೆ ಆ ಮಾತು ದ್ವಾಪರದಲ್ಲಿಯೇ ಹೇಳಿರಬೇಕು ಎಂಬುದನ್ನು ಯಾರಾದರೂ ಒಪ್ಪಲೇಬೇಕು. ನಂತರ ನಾರದರು ರಾಮನಿಗೆ ಬಾಲಕನ ಮರಣದ ಕಾರಣವನ್ನು ತಿಳಿಸುತ್ತಾ ''ನಿನ್ನ ರಾಜ್ಯದಲ್ಲಿ ಶೂದ್ರನೊಬ್ಬನು ತಪಸ್ಸನ್ನಾಚರಿಸುತ್ತಿದ್ದಾನೆ; ಅದರ ಪರಿಣಾಮವಾಗಿ ಈ ಬಾಲಕ ಮರಣಹೊಂದಿದ್ದಾನೆ. ಅದರ ಹೊಣೆ ನಿನ್ನದು. ಆದ್ದರಿಂದ ಎಲ್ಲಿ ಅಧರ್ಮ ನಡೆದಿದೆ ಎಂದು ಹುಡುಕಿ ಅದನ್ನು ಪರಿಹರಿಸು,'' ಎನ್ನುತ್ತಾರೆ. ಶೂದ್ರನು ದ್ವಾಪರದಲ್ಲಿ ತಪಸ್ಸು ಮಾಡುತ್ತಿರುವುದರಿಂದ ಬ್ರಾಹ್ಮಣ ಬಾಲಕ ಮರಣ ಹೊಂದಿದ್ದಾನೆ. ದ್ವಾಪರಯುಗದಲ್ಲಿ ಶೂದ್ರ, ತಪಸ್ಸು ಮಾಡುವುದು ಅಧರ್ಮ ಎಂದು ನಾರದರು ತಿಳಿಸುತ್ತಾರೆ. ಅನುವಾದಕರಾದ ರಂಗನಾಥಶರ್ಮರು ತಮ್ಮ ಅಡಿಟಿಪ್ಪಣಿಯಲ್ಲಿ ''ದ್ವಾಪರದಲ್ಲಿಯೇ ಶೂದ್ರನಿಗೆ ತಪಸ್ಸು ಅತ್ಯಂತ ಅಧರ್ಮವಾಗಿರುವಾಗ ತ್ರೇತಾಯುಗದಲ್ಲಿ ಎಷ್ಟು ಅಧರ್ಮವಾಗಿರಬೇಡ ಎಂದು ಅಭಿಪ್ರಾಯ'' ಎಂದು ತಿಳಿಸಿದ್ದಾರೆ. ಇದೇ ಮಾತನ್ನು ನಾರದರೇ ಹೇಳಬಹುದಿತ್ತಲ್ಲವೆ ? ಅಂದರೆ ಶೂದ್ರನು ತಪಸ್ಸು ಮಾಡುವುದು ದ್ವಾಪರದಲ್ಲಿಯೇ ಅಧರ್ಮವಾಗಿರುವಾಗ ಈಗಿನ ತ್ರೇತಾಯುಗದಲ್ಲಿ ಅದೆಷ್ಟು ಅಧರ್ಮ ವಾಗಿರಬೇಡ ! ಅದರ ಪರಿಣಾಮ ವಾಗಿಯೇ ಬಾಲಕ ಮರಣ ಹೊಂದಿದ್ದಾನೆ ಎಂದು ಸ್ಪಷ್ಟವಾಗಿ ಹೇಳುತ್ತಿರಲಿಲ್ಲವೆ ? ವಿದ್ವಾನ್ ರಂಗನಾಥಶರ್ಮರು ಸ್ಪಷ್ಟವಾದ ನೇರವಾದ ಮಾತಿಗೆ ಸುತ್ತು ಬಳಸಿ ವಿವರಣೆ ಕೊಟ್ಟು ರಾಮ ತ್ರೇತಾಯುಗದವನೇ ಎಂದು ಸಾಧಿಸಲು ಪ್ರಯತ್ನಿಸಿದ್ದಾರೆ. ರಾಮ ಇದನ್ನೆಲ್ಲಾ ಕೇಳಿ ತನ್ನ ರಾಜ್ಯದಲ್ಲಿ ಎಲ್ಲಿ ಅಧರ್ಮ ನಡೆದಿದೆ ಎಂದು ಹುಡುಕುತ್ತಾ ಹೋಗುತ್ತಾನೆ. ಆಗ ಅವನಿಗೆ ಒಬ್ಬ ತಪಸ್ವಿ ತಪಸ್ಸು ಮಾಡುವುದು ಕಾಣಿಸುತ್ತದೆ. ಆತನಲ್ಲಿಗೆ ಹೋಗಿ ನೀನು ಯಾರು ? ನಿನ್ನ ತಪಸ್ಸಿನ ಉದ್ದೇಶವೇನು ? ನೀನು ಬ್ರಾಹ್ಮಣನೊ, ಕ್ಷತ್ರಿಯನೊ, ವೈಶ್ಯನೊ, ಶೂದ್ರನೊ ? ಎಂದು ಕೇಳುತ್ತಾನೆ.




ಆ ತಪಸ್ವಿ (ಶಂಬೂಕನೆಂದು ಆತನ ಹೆಸರು) ತಾನು ಶೂದ್ರನೆಂದು ಒಪ್ಪಿಕೊಳ್ಳುತ್ತಾನೆ. ರಾಮ ತಕ್ಷಣ ತನ್ನ ಖಡ್ಗದಿಂದ ಆತನ ತಲೆಯನ್ನು ಕಡಿದುಹಾಕುತ್ತಾನೆ.

ಇದೊಂದೇ ಘಟನೆಯಿಂದ ರಾಮಾಯಣದ ಕಾಲವನ್ನು ನಿರ್ಧರಿಸಲಾಗದು. ಈಗ ಇನ್ನೊಂದು ಉದಾಹರಣೆಯನ್ನು ನೋಡಿ. ಶಂಬೂಕವಧೆಯ ನಂತರ ರಾಮನೂ ದೇವತೆಗಳೂ ಅಗಸ್ತ್ಯರ ಆಶ್ರಮಕ್ಕೆ ಹೋದರು. ಅಗಸ್ತ್ಯರು ರಾಮನಿಗೆ ಒಂದು ಆಭರಣವನ್ನು ಕೊಡುತ್ತಾರೆ. ಅದನ್ನು ಸ್ವೀಕರಿಸಿದ ರಾಮ ಆ ಆಭರಣ ಅವರ ಕೈಗೆ ಬಂದದ್ದು ಹೇಗೆ ಎಂದು ವಿಚಾರಿಸುತ್ತಾನೆ. ಅದಕ್ಕೆ ಅಗಸ್ತ್ಯರು ''ರಾಮ, ಹಿಂದಿನ ತ್ರೇತಾಯುಗದಲ್ಲಿ ನಡೆದ ಒಂದು ವೃತ್ತಾಂತವನ್ನು ಕೇಳು'' ಎಂದು ತಮಗೆ ಆಭರಣ ದೊರಕಿದ ಕತೆಯನ್ನು ಹೇಳಲು ಪ್ರಾರಂಭಿಸುತ್ತಾರೆ. ಅವರು ಸ್ಪಷ್ಟವಾಗಿ ''ಹಿಂದಿನ ತ್ರೇತಾಯುಗದಲ್ಲಿ'' ಎಂದಿದ್ದಾರೆ. ಅವರು ರಾಮನ ಎದುರಿನಲ್ಲಿ ''ಹಿಂದಿನ ತ್ರೇತಾಯುಗದಲ್ಲಿ'' ಎನ್ನಬೇಕಾದರೆ ಹಿಂದಿನ ಮತ್ತು ಇಂದಿನ ಎಂದು ಎರಡು ತ್ರೇತಾಯುಗಗಳು ಇದ್ದವೆ ? ನಾವು ಹಾಗೇನೂ ಕೇಳಿಲ್ಲವಲ್ಲ! ಇಲ್ಲವಾದರೆ ''ಹಿಂದಿನ ತ್ರೇತಾಯುಗದ'' ನಂತರ ''ಇಂದಿನ ದ್ವಾಪರವೇ'' ಆಗಬೇಕಲ್ಲದೆ ಬೇರೆಯಾಗಲು ಸಾಧ್ಯವಿಲ್ಲ. ಅಂದರೆ ಅವರು ಕತೆ ಹೇಳುವ ಕಾಲ ಮುಂದಿನ ದ್ವಾಪರಯುಗ ಎಂದಾಯಿತು. ಇಷ್ಟು ನೇರವಾಗಿ ಹೇಳಿದ ಮೇಲೆ ನಮಗೆ ಬೇರೆ ಪುರಾವೆ ಬೇಕೆ ರಾಮ ದ್ವಾಪರಯುಗದಲ್ಲಿದ್ದ ಎನ್ನಲು ? ಅಂಗೈ ನೆಲ್ಲಿಯಂತೆ ಇಷ್ಟು ಸ್ಪಷ್ಟವಾಗಿರುವಾಗ ರಾಮ ತ್ರೇತಾಯುಗದವನು ಎಂಬ ಅಭಿಪ್ರಾಯ ಬೆಳೆದದ್ದು ಹೇಗೆಂದು ನನಗೆ ತಿಳಿಯಲಿಲ್ಲ. ಏಕೆಂದರೆ ರಾಮ ತ್ರೇತಾಯುಗದಲ್ಲಿದ್ದ ಎನ್ನಲು ಯಾವ ಸುಳಿವೂ ರಾಮಾಯಣದಲ್ಲಿ ಇಲ್ಲ. ಅದಕ್ಕೆ ಬದಲಾಗಿ ಆತ ದ್ವಾಪರದಲ್ಲಿದ್ದ ಎನ್ನಲು ಸಾಕಷ್ಟು ಪುರಾವೆಗಳಿವೆ.

ಎಸ್. ನಳಿನಿ
೪೪, ಲಕ್ಷ್ಮೀಕೇಶವ, ಕರುಣೇಶ್ವರ ನಗರ
ಗುಲಬರ್ಗಾ - ೫೮೫ ೧೦೨




*೧೫-೪-೨೦೦೧ ರಂದು ಬೆಂಗಳೂರಿನ ಯವನಿಕಾ ಸಭಾಂಗಣದಲ್ಲಿ ನವಕರ್ನಾಟಕ ಇತ್ತೀಚೆಗೆ ಪ್ರಕಟಿಸಿರುವ ನಾಲ್ಕು ಮಹತ್ವದ ಕೃತಿಗಳ ಬಿಡುಗಡೆ ಸಮಾರಂಭ ನಡೆಯಿತು. ಮಾನ್ಯ ಶ್ರೀ ಜಿ. ಟಿ. ನಾರಾಯಣರಾವ್ ಅವರ ಪ್ರಧಾನ ಸಂಪಾದಕತ್ವದ 'ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ', ಶ್ರೀ ಎನ್. ಎಸ್. ವೆಂಕಟರಾಮ್ ಅವರ 'ನವಕರ್ನಾಟಕ ಕೈಪಿಡಿ - ರಂಗಭೂಮಿ', ಶ್ರೀ ಕೋ. ಚೆನ್ನಬಸಪ್ಪನವರ ಕಾದಂಬರಿ 'ಬೇಡಿ ಕಳಚಿತು-ದೇಶ ಒಡೆಯಿತು' ಮತ್ತು ಪ್ರೊ|| ಜಿ. ವೆಂಕಟಸುಬ್ಬಯ್ಯನವರ 'ಇಗೋ ಕನ್ನಡ ಸಂಪುಟ-೨' - ಈ ನಾಲ್ಕು ಕೃತಿಗಳನ್ನು ಡಾ|| ಚಂದ್ರಶೇಖರ ಕಂಬಾರ ಬಿಡುಗಡೆ ಮಾಡಿದರು. ಕೃತಿಗಳ ಕುರಿತು ಪತ್ರಕರ್ತ ಶ್ರೀ ನಾಗೇಶ ಹೆಗಡೆ, ಡಾ|| ವಿಜಯಾ, ಡಾ|| ಜಿ. ಶ್ರೀನಿವಾಸರಾಜು ಮತ್ತು ಡಾ|| ಶ್ರೀನಿವಾಸ ಹಾವನೂರ ಮಾತನಾಡಿದರು ಕೃತಿಗಳ ಲೇಖಕರಲ್ಲದೆ ಬಹುಸಂಖ್ಯೆಯ ಓದುಗರು ಭಾಗವಹಿಸಿದ್ದರು.*

# ಯೋಗಪ್ರವೇಶ-೨೦

## ಜಿ. ರಾಮಕೃಷ್ಣ

ಸಾಮಾನ್ಯವಾಗಿ ಯೋಗಾಸನಗಳನ್ನು ಮಾಡುವವರು ಶೀರ್ಷಾಸನದಿಂದ ಪ್ರಾರಂಭಿಸಿ ಶವಾಸನದಿಂದ ಮುಕ್ತಾಯಗೊಳಿಸುವುದು ರೂಢಿ. ಆದರೆ ವ್ಯಾಯಾಮದ ಮಧ್ಯೆ ಬೇಕೆನಿಸಿದಾಗೆಲ್ಲಾ ಸ್ವಲ್ಪ ಹೊತ್ತು ಶವಾಸನ ಮಾಡುವುದು ನಿಷಿದ್ಧವಲ್ಲ ; ಬದಲಾಗಿ ಅದು ಅವಶ್ಯಕ ಮತ್ತು ಒಳ್ಳೆಯದು. ಉದಾಹರಣೆಗೆ, ಶೀರ್ಷಾಸನವನ್ನೋ ಸರ್ವಾಂಗಾಸನವನ್ನೋ ಮಾಡಿಯಾದ ಮೇಲೆ ಉಸಿರಾಟವು ಯಥಾಸ್ಥಿತಿಗೆ ಬರುವವರೆಗೆ ಮುಂದಿನ ಆಸನ ಮಾಡದಿರುವುದು ಉಚಿತ. ಅಂತಹ ಸಂದರ್ಭಗಳಲ್ಲೆಲ್ಲಾ ಎಷ್ಟು ಕಾಲ ಅಗತ್ಯವೋ ಅಷ್ಟು ಕಾಲ ಶವಾಸನವನ್ನು ಮಾಡುವುದು ಸರಿಯಾದ ಕ್ರಮ. ಶವಾಸನವೆಂದರೆ ನಿದ್ರಾಸನವಲ್ಲವೆಂಬುದನ್ನು ಗಮನಿಸಬೇಕು. ಎಷ್ಟೋ ವೇಳೆ ಶವಾಸನ ಮಾಡುವಾಗ ನಿದ್ದೆ ಬಂದುಬಿಡುತ್ತದೆಂದು ಕೆಲವರ ಅನುಭವ. ಅವರಿಗೆ ನಿದ್ದೆ ಮಾಡಿದ್ದೇ ಲಾಭ. ಅದು ಕೆಡುಕಲ್ಲದಿದ್ದರೂ ಶವಾಸನವೆಂದಂತೂ ಎನಿಸಿಕೊಳ್ಳುವುದಿಲ್ಲ. ಎಲ್ಲ ಆಸನಗಳೂ ಜಾಗ್ರದವಸ್ಥೆಯವೇ; ಯಾವುದೂ ಸ್ವಪ್ನಾವಸ್ಥೆಯದಲ್ಲ.

ಎಲ್ಲ ಮಾಂಸಖಂಡಗಳಿಗೂ ಸಂಪೂರ್ಣವಾದ ಸಡಿಲಿಕೆ ದೊರೆಯಬೇಕಾದ (ಅಥವಾ ನೀಡಬೇಕಾದ) ಆಸನ ಇದು. ಹೇಳಿದಷ್ಟೇ ಸುಲಭವಾಗಿ ಈ ಆಸನವನ್ನು ಮಾಡಲಾಗದೆಂಬುದು ನಮ್ಮೆಲ್ಲರ ಕೊರತೆ. ಬೆನ್ನಿನ ಮೇಲೆ ಮಲಗಿ ಕಾಲುಗಳನ್ನು ಚಾಚುವುದಷ್ಟೇ ಇದಕ್ಕೆ ಬೇಕಾದ ಸಿದ್ಧತೆ. ಎರಡೂ ಕೈಗಳನ್ನು ಶರೀರದಿಂದ ತುಸು ದೂರಕ್ಕೆ ಸರಿಸಿ ಬಿಗುಪು ಇಲ್ಲದಂತೆ ಇರಿಸಿಕೊಳ್ಳಬೇಕು. ಬೆರಳುಗಳನ್ನು ಮಡಿಸುವ ಅಗತ್ಯವಿಲ್ಲ. ನಾವು ಮಲಗಿದ್ದಾಗ ಸಹ ಮಾಂಸಖಂಡಗಳು ಸ್ವಲ್ಪ ಮಟ್ಟಿಗೆ ಸಂಕುಚಿತಗೊಂಡಿರುತ್ತವೆ. ಈ ಕನಿಷ್ಠ ಸಂಕುಚಿತ ಸ್ಥಿತಿಯೂ ಇಲ್ಲದಷ್ಟು ಸಡಿಲಿಕೆ ಶವಾಸನದಲ್ಲಿ ಸಿದ್ಧಿಸಬೇಕು. ಇದಕ್ಕೆ ಸಾಕಷ್ಟು ಏಕಾಗ್ರತೆ ಬೇಕು. ಅಷ್ಟು ದೀರ್ಘವೂ ಅಲ್ಲದ, ಹ್ರಸ್ವವೂ ಅಲ್ಲದ, ಉಸಿರಾಟದಲ್ಲಿ ತೊಡಗಿ ಮನಸ್ಸನ್ನು ಅದರ ಮೇಲೆ ಕೇಂದ್ರೀಕರಿಸುವುದು ಉತ್ತಮ ಹಾದಿ. ಶರೀರದ ಒಂದೊಂದು ಅಂಗವನ್ನೂ ಭಾವಿಸಿಕೊಂಡು, ಅದು ಸಡಿಲಗೊಳ್ಳುತ್ತಿದೆಯೆಂಬ ಪ್ರಜ್ಞೆ ಬೆಳೆಸಿಕೊಳ್ಳುತ್ತಾ ಅದನ್ನು ಎಷ್ಟು ಸಾಧ್ಯವೋ ಅಷ್ಟು ಸಡಿಲವಾಗಿ ಬಿಡಬೇಕು. ಆ ಅಂಗವು ಕ್ಷಣಕಾಲ ನಮ್ಮದಾಗಿಲ್ಲವೋ ಅಥವಾ ನಮ್ಮಿಂದ ಬೇರ್ಪಟ್ಟಿದೆಯೋ ಎಂಬ ಭಾವನೆಯನ್ನು ತಾಳುವುದೂ ಸಾಧ್ಯ. ಎಲ್ಲ ಅಂಗಗಳಿಗೂ ಇದು ಅನ್ವಯವಾದಾಗ ಶವಾಸನವು ಪೂರ್ಣಗೊಳ್ಳುತ್ತದೆ. ಎದೆ, ಹೊಟ್ಟೆ, ಕೈ ಕಾಲುಗಳು, ಮಿದುಳು - ಹೀಗೆ ಈ ಕ್ರಮದಲ್ಲಿ ಸಡಿಲಿಕೆಯನ್ನು ಯತ್ನಿಸಬಹುದು. ಕಣ್ಣುಗಳನ್ನು ಮುಚ್ಚಿ ತಲೆಯನ್ನು ಒಂದು ಕಡೆಗೆ ವಾಲಿಸಿಬಿಡುವುದು ಅಗತ್ಯ. ಕಣ್ಣು ಮುಚ್ಚದೆಯೂ ಶವಾಸನ ಮಾಡಲು ಅಭ್ಯಂತರವಿಲ್ಲ.

ಉಸಿರಾಟದಲ್ಲಿ ಒಂದು ಲಯವನ್ನು ಗಳಿಸಿಕೊಳ್ಳುವುದು ಈ ಆಸನದ ಒಂದು ಅವಿಭಾಜ್ಯ ಅಂಗ. ಮೊದಲಿಗೆ, ಉಸಿರಾಟವನ್ನು ಹತೋಟಿಗೆ ತರುವ ಬದಲು ಸುಮ್ಮನೆ ಅದನ್ನು ಗಮನಿಸುತ್ತಿದ್ದರೆ ಸಾಕು. ಕ್ರಮೇಣ ಸ್ವಲ್ಪ ದೀರ್ಘವಾದ ಉಚ್ಛ್ವಾಸ - ನಿಃಶ್ವಾಸಗಳತ್ತ ಮುನ್ನಡೆಯಬೇಕು. ಆದರೆ ಅದು ಅತಿದೀರ್ಘವಾಗಿ, ಕೂಡಲೆ ಉಸಿರು ತೆಗೆದುಕೊಳ್ಳಬೇಕೆನಿಸುವಷ್ಟು ಆಗಬಾರದು. ಮುಂದಿನ ಹೆಜ್ಜೆ, ಉಸಿರಾಡುವಾಗ ಹೊಟ್ಟೆಯ ಏರಿಳಿತಕ್ಕೆ ಸಂಬಂಧಿಸಿದ್ದು. ಅದೂ ಉಸಿರಾಟದ ಲಯದ ಭಾಗವಾಗುತ್ತದೆ. ಇಷ್ಟೆಲ್ಲಾ ಮಾಡುವಾಗ ಮನಸ್ಸು ಎಲ್ಲೆಲ್ಲೋ ಹರಿಯಹೊರಡುತ್ತಿರುತ್ತದೆ. ವಿಪರೀತ ಆಜ್ಞೆಗಳಿಂದ ಮನಸ್ಸನ್ನು ಕಟ್ಟಿಹಾಕಲಾಗುವುದಿಲ್ಲ. ಲಯಬದ್ಧ ಉಸಿರಾಟದ ವೀಕ್ಷಣೆಯಿಂದ ನಿಧಾನವಾಗಿ ಮನಸ್ಸಿನ ಮೇಲೆ ಹತೋಟಿ ಉಂಟಾಗುತ್ತದೆ. ನರಗಳಿಗೆ ಶವಾಸನವು ಉಪಚಾರ ನೀಡುವುದರಿಂದ ನಿದ್ರಾವಸ್ಥೆ ಬಂದುಬಿಡಬಹುದು; ಆದರೆ ಮನಸ್ಸು ಉಸಿರಾಟದ ವೀಕ್ಷಣೆಯಲ್ಲಿ ಏಕಾಗ್ರತೆ ಸಾಧಿಸಿದರೆ ನಿದ್ರೆ ಆವರಿಸುವುದಿಲ್ಲ.

ಮಾಂಸಖಂಡಗಳಿಗೆ, ರಕ್ತಚಲನೆಗೆ ಹಾಗೂ ನರಗಳಿಗೆ ಈ ಆಸನವು ನವೀನತೆಯನ್ನು ತಂದುಕೊಡುತ್ತದೆ. ರಕ್ತದೊತ್ತಡ ಇರುವವರು ಇದನ್ನು ಅಭ್ಯಾಸ ಮಾಡುವುದು ಆರೋಗ್ಯಕರ. ಆಸನಗಳನ್ನು ಮಾಡಿ ಮುಗಿಸುವಾಗ ಶವಾಸನಕ್ಕೆ ಎಂಟು - ಹತ್ತು ನಿಮಿಷಗಳನ್ನು ಮೀಸಲಾಗಿರಿಸುವುದು ಒಳ್ಳೆಯದು. ವ್ಯಾಯಾಮದ ಮಧ್ಯೆ ಅಗತ್ಯಕ್ಕೆ ತಕ್ಕಂತೆ ಒಂದು ಒಂದೂವರೆ ನಿಮಿಷ ಸಾಕು.

ಹಠಪ್ರದೀಪಿಕೆಯು ಈ ಆಸನವನ್ನು ವಿವರಿಸುವುದು ಹೀಗೆ : ಉತ್ತಾನಂ ಶವವದ್ಭೂಮೌ ಶಯನಂ ತಚ್ಛವಾಸನಮ್। ಶ್ವಾಸನಂ ಶ್ರಾಂತಿಹರಂ ಚಿತ್ತ



ವಿಶ್ರಾಂತಿಕಾರಕಂ॥ (೧.೩೨). ಯಾವುದೇ ಆಸನವು ಕಟ್ಟಕಡೆಗೆ ಮನಸ್ಸಿಗೆ ಆಹ್ಲಾದ ಮತ್ತು ವಿಶ್ರಾಂತಿಯನ್ನು ದೊರಕಿಸಿಕೊಡಬೇಕು; ವಿಶೇಷತಃ ಶವಾಸನವು ಅದನ್ನು ಮಾಡುತ್ತದೆ. ಕಾಲುಗಳನ್ನು ನೇರವಾಗಿ ಪಕ್ಕಪಕ್ಕದಲ್ಲಿ ಇರಿಸದೆ ಅಗಲಿಸುವುದು, ಕೈಗಳನ್ನು ಮುಕ್ತವಾಗಿ ಬಿಡುವುದು, ತಲೆಯನ್ನು ವಾಲಿಸುವುದು, ಉಸಿರಾಟದಲ್ಲಿ ಒಂದು ಲಯ ಉಂಟುಮಾಡುವುದು - ಇವೆಲ್ಲಾ ಈ ಉದ್ದೇಶದ ಪೂರೈಕೆಗೆ ಪೂರಕವಾಗಿರುತ್ತವೆ. ಮನಸ್ಸಿಗೆ ಹಾಗೂ ಹೃದಯಕ್ಕೆ ಉಲ್ಲಾಸ ತರುವ ಈ ಆಸನವನ್ನು ಯಾವುದೇ ಕಾರಣಕ್ಕೆ ಬೆನ್ನ ಮೇಲೆ ಮಲಗಲಾಗದವರು ಅಭ್ಯಾಸ ಮಾಡಲಾಗುವುದಿಲ್ಲ.

ಮಯೂರಾಸನ, ಉತ್ಕಟಾಸನ, ನೌಕಾಸನ, ವೃಶ್ಚಿಕಾಸನ, ಉಗ್ರಾಸನ ಮುಂತಾದ ಹತ್ತಾರು ಬೇರೆ ಆಸನಗಳನ್ನು ಘೇರಂಡ ಸಂಹಿತೆ ಮುಂತಾದ ಗ್ರಂಥಗಳು ಪ್ರತಿಪಾದಿಸಿವೆ. ಅವನ್ನೆಲ್ಲಾ ಇಲ್ಲಿ ವಿವರಿಸಹೋಗುವುದಿಲ್ಲ. ಈವರೆಗೆ ಚರ್ಚಿಸಲಾಗಿರುವ ಆಸನಗಳು ಸಾಮಾನ್ಯ ವ್ಯಾಯಾಮಕ್ಕೆ ಸಾಕಾಗುತ್ತವೆಂಬ ಆಶಯವನ್ನು ಸ್ವಾಮಿ ಕುವಲಾಯನಂದರು ಆಗಾಗ್ಗೆ ಪ್ರಕಟಿಸುತ್ತಿದ್ದರು. ಹಠ ಪ್ರದೀಪಿಕೆಯು ಹೇಳುವಂತೆ ಎಷ್ಟೋ ಆಸನಗಳ ಪೈಕಿ ನಾಲ್ಕು ಶ್ರೇಷ್ಠವಾದವು: ಸಿದ್ಧ, ಪದ್ಮ, ಸಿಂಹ ಮತ್ತು ಭದ್ರ (೧.೩೪). ಅವುಗಳಲ್ಲೂ ಸಿದ್ಧಾಸನವು ಏಕಾಗ್ರತೆಗೆ ಉತ್ತಮವಾದದ್ದು. ಏಕಾಗ್ರತೆಯೊಟ್ಟಿಗೆ ಶರೀರ ವ್ಯಾಯಾಮವೂ ಅಗತ್ಯವಾದ್ದರಿಂದ ಉತ್ಕೃಷ್ಟವಾದ ಕೆಲವು ಆಸನಗಳನ್ನು ಈವರೆಗೆ ಪರಿಚಯಿಸಿಕೊಡಲಾಗಿದೆ. ಅವುಗಳ ಜೊತೆಗೆ ಇನ್ನೂ ಕೆಲವನ್ನು ಅಭ್ಯಾಸ ಮಾಡಲಿಚ್ಛಿಸುವವರು ಹಾಗೆ ಮಾಡಲು ಯಾವ ಅಂಜಿಕೆಯನ್ನೂ ಇಟ್ಟುಕೊಳ್ಳಬೇಕಾಗಿಲ್ಲ.

❑❑❑



# ನಂಬಿಕೆಗಳು

**ಜೆ. ಕೃಷ್ಣಮೂರ್ತಿ**

**ನಂ**ಬಿಕೆ ಮತ್ತು ಜ್ಞಾನ ಬಹಳ ಆಪ್ತವಾಗಿ ಆಸೆಯೊಂದಿಗೆ ಹೆಣೆದುಕೊಂಡಿವೆ. ನಾವು ಈ ಎರಡು ವಿಷಯಗಳನ್ನು ಅರ್ಥಮಾಡಿಕೊಂಡರೆ, ನಮ್ಮ ಆಸೆ ಹೇಗೆ ಕೆಲಸ ಮಾಡುತ್ತದೆ ಮತ್ತು ಅದರ ಸಂಕೀರ್ಣತೆಗಳೇನು, ಎಂದು ಅರ್ಥ ಮಾಡಿಕೊಳ್ಳಬಹುದಾಗಿದೆ.

ನಾವು ವಿಚಾರ ಮಾಡದೆ, ಅವಿವೇಕದಿಂದ 'ಸರಿ' ಎಂದು ಒಪ್ಪಿಕೊಳ್ಳುವ ವಿಷಯವೆಂದರೆ 'ನಂಬಿಕೆ'. ನಾನು ನಂಬಿಕೆಗಳನ್ನು ವಿರೋಧ ಮಾಡುತ್ತಿಲ್ಲ. ಈ ನಂಬಿಕೆಗಳನ್ನು ನಾವು ಏಕೆ ಒಪ್ಪಿಕೊಳ್ಳುತ್ತೀವಿ ಎನ್ನುವುದನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಿದ್ದೇನೆ. ರಾಜಕೀಯ, ಧಾರ್ಮಿಕ, ರಾಷ್ಟ್ರೀಯ ಮತ್ತು ಇತರೆ ನಂಬಿಕೆಗಳು ಜನರನ್ನು ವಿಭಜಿಸಿ ಬೇರ್ಪಡಿಸುತ್ತವಲ್ಲದೆ, ಸಂಘರ್ಷ, ಗೊಂದಲ ಮತ್ತು ದ್ವೇಷಗಳನ್ನು ಹುಟ್ಟುಹಾಕುತ್ತವೆ. ಆದರೂ ನಾವು ಇವುಗಳನ್ನು ಕೈಬಿಡಲು ಸಿದ್ಧರಿಲ್ಲ. ಹಿಂದೂಗಳ, ಕ್ರಿಶ್ಚಿಯನ್ನರ, ಬೌದ್ಧ ಧರ್ಮದವರ - ಹೀಗೆ ಅಗಣಿತ ಮತೀಯ ಮತ್ತು ರಾಷ್ಟ್ರೀಯ ನಂಬಿಕೆಗಳು, ಹಲವು ರಾಜಕೀಯ ಸಿದ್ಧಾಂತಗಳು ಎಲ್ಲವೂ ಒಂದರೊಡನೆ ಒಂದು ಸ್ಪರ್ಧಿಸಿ, ಒಂದನ್ನೊಂದು ಮತಾಂತರ ಮಾಡಲು ಪ್ರಯತ್ನಿಸುತ್ತವೆ. ಈ ನಂಬಿಕೆಗಳು ಜನರನ್ನು ವಿಭಜಿಸುತ್ತವೆ, ಅಸಹನೆಯನ್ನು ಹುಟ್ಟುಹಾಕುತ್ತವೆ. ಈ ಪ್ರಪಂಚದಲ್ಲಿ ನಾವು ನಂಬಿಕೆಗಳಿಲ್ಲದೆ ಬದುಕಲು ಸಾಧ್ಯವೇ ? ಒಂದು ನಂಬಿಕೆ ಬದಲು ಇನ್ನೊಂದು ನಂಬಿಕೆಯನ್ನು ಅದಲು ಬದಲು ಮಾಡುವುದಲ್ಲ, ಬದಲಾಗಿ "ಎಲ್ಲ ನಂಬಿಕೆಗಳಿಂದ" ಮುಕ್ತರಾಗಲು ಸಾಧ್ಯವೇ ? ನಮಗೆ ಪ್ರತಿಯೊಂದನ್ನೂ ಕ್ಷಣದಿಂದ ಕ್ಷಣಕ್ಕೆ ಹೊಚ್ಚ ಹೊಸದಾಗಿ ಸಂಧಿಸುವ ಸಾಮರ್ಥ್ಯವಿರಬೇಕು. ನಿಯಂತ್ರಿತವಾದ ಹಿಂದಿನ ಪ್ರತಿಕ್ರಿಯೆಗಳಿಂದ ಮತ್ತು ಭೂತಕಾಲದ ಸಂಗ್ರಹಿತ ಪರಿಣಾಮಗಳಿಂದ ಜೀವನವನ್ನು ನೋಡದೆ ಯಾವುದಿದೆಯೋ ಅದನ್ನು ಹಾಗೆಯೇ ಗ್ರಹಿಸಲು ಈ ನಂಬಿಕೆಗಳಿಲ್ಲದಿದ್ದರೆ ಸಾಧ್ಯವಾಗುತ್ತದೆ.

ನಂಬಿಕೆಯನ್ನು ಒಪ್ಪಿಕೊಳ್ಳುವ ಪ್ರಬಲ ಆಸೆಗೆ ಕಾರಣ ನಮ್ಮ ಭಯ. ಒಂದು ವೇಳೆ ನಮಗೆ ನಂಬಿಕೆಗಳೇ ಇಲ್ಲದಿದ್ದರೆ ನಮ್ಮ ಜೀವನ ಏನಾಗುತ್ತಿತ್ತು ? ಆಗ ನಾವು ಮುಂದೇನಾಗಬಹುದೆಂಬುದರ ಬಗ್ಗೆ ಬಹಳ ಭಯಭೀತರಾಗಿರುತ್ತಿದ್ದೆವಲ್ಲವೇ ? ನಮಗೆ ಒಂದು ವೇಳೆ ನಂಬಿಕೆಯಾಧರಿತ ಕ್ರಿಯಾ ಪದ್ಧತಿ - ಅದು ದೇವರಲ್ಲಾಗಲಿ, ಕಮ್ಯುನಿಸಂ ತತ್ವದ ಮೇಲಾಗಲಿ, ಸಮಾಜವಾದ, ಸಾಮ್ರಾಜ್ಯವಾದ ಅಥವಾ ಯಾವುದೇ ತರಹದ ಧಾರ್ಮಿಕ ಸೂತ್ರ ಅಥವಾ ನಾವು ಗಟ್ಟಿಯಾಗಿ ನಿಯಂತ್ರಿತವಾಗಿಡುವ ಮೌಢ್ಯ – ಇಲ್ಲದಿದ್ದರೆ, ಸಂಪೂರ್ಣ ನಮ್ಮನ್ನೇ ನಾವು ಕಳಕೊಂಡಂತಿರುತ್ತೇವೆಯಲ್ಲವೇ ? ನಿಜವಾಗಿಯೂ 'ನಾನೇನೂ ಅಲ್ಲ,' ನಾನು 'ಪೂರ್ಣಖಾಲಿ' ಎಂದು ಒಪ್ಪಿಕೊಳ್ಳಲು ಭಯ ಅಲ್ಲವೇ ? ಆದರೆ ಒಂದು ಕಪ್ ಉಪಯೋಗಕ್ಕೆ ಬರುವುದು ಅದು ಖಾಲಿಯಿದ್ದಾಗಲೇ. ನಂಬಿಕೆಗಳಿಂದ, ಮೌಢ್ಯಗಳಿಂದ, ಸೂಕ್ತಿಗಳಿಂದ ಸದಾ ತುಂಬಿದ ಮನಸ್ಸು ನಿಜವಾಗಿಯೂ ಸೃಜನಶೀಲ ಮನಸ್ಸಾಗಲು ಸಾಧ್ಯವಿಲ್ಲ. ಅದೊಂದು ಕೇವಲ ಪುನರಾವರ್ತನೆಯ ಯಾಂತ್ರಿಕ ಮನಸ್ಸು. ಆ ಖಾಲಿತನದ ಭಯ, ಒಂಟಿತನದ ಸ್ಥಗಿತತೆಯ ಜೊತೆಗೆ ಜೀವನದಲ್ಲಿ ಯಶಸ್ಸು ಸಾಧಿಸಲಿಲ್ಲ, ಏನೋ ಒಂದು ಸ್ಥಾನ-ಮಾನಕ್ಕೆ ಏರಲಿಲ್ಲ ಎನ್ನುವುದೇ ಒಂದು ಕಾರಣವಲ್ಲವೇ ? ನಾವೇಕೆ ನಂಬಿಕೆಗಳನ್ನು ಆಸಕ್ತಿಯಿಂದ, ದುರಾಸೆಯಿಂದ ಒಪ್ಪಿಕೊಳ್ಳುತ್ತೇವೆ ? ನಂಬಿಕೆಗಳನ್ನು ಒಪ್ಪಿಕೊಳ್ಳುವುದರ ಮೂಲಕ ನಮ್ಮನ್ನು ನಾವು ಅರ್ಥ ಮಾಡಿಕೊಳ್ಳುತ್ತೇವೆಯೇ ? ಅದರ ಬದಲು ಧಾರ್ಮಿಕ ಅಥವಾ ರಾಜಕೀಯ ನಂಬಿಕೆ ನಮ್ಮನ್ನು ನಾವು ಅರಿಯಲು ತೊಡಕಾಗುತ್ತದೆ. ನಮ್ಮಲ್ಲಿರುವ ಅನೇಕ ನಂಬಿಕೆಗಳನ್ನು ಕಿತ್ತು ಹಾಕಿದರೆ, ನಮ್ಮಲ್ಲಿ ಉಳಿಯುವುದು ಏನು ? ನಮ್ಮ ಮನಸ್ಸು ಗುರುತಿಸಿರುವ ಯಾವುದೇ ನಂಬಿಕೆಗಳಿಲ್ಲದೇ ಇದ್ದರೆ, ಮನಸ್ಸು ತನ್ನನ್ನು ತಾನೆ ಅದು ಹೇಗಿದೆಯೋ ಹಾಗೆ ನೋಡಿಕೊಳ್ಳಲು ಸಾಧ್ಯ. ಆಗ ನಿಜವಾಗಿಯೂ ತನ್ನನ್ನು ತಾನು ಅರಿಯುವ ಪ್ರಕ್ರಿಯೆ ಪ್ರಾರಂಭವಾಗುತ್ತದೆ.

ಈ ನಂಬಿಕೆ ಮತ್ತು ಜ್ಞಾನದ ಪ್ರಶ್ನೆ ಬಹಳ ಕುತೂಹಲಕರ ಸಮಸ್ಯೆಯಾಗಿದೆ. ಬಹಳ ಬುದ್ಧಿಜೀವಿ, ಬಹಳ ಸುಸಂಸ್ಕೃತವಂತ, ಬಹಳ ಅಧ್ಯಾತ್ಮಿಯಾದಷ್ಟು ಅವರ ಅರಿವಿನ ಸಾಮರ್ಥ್ಯ ಕಡಿಮೆಯಾಗುತ್ತದೆ. ಅನಾಗರಿಕರು ಅಗಣಿತ ಮೂಢ ನಂಬಿಕೆಗಳನ್ನು ಈ ಆಧುನಿಕ ಯುಗದಲ್ಲೂ ಹೊಂದಿದ್ದಾರೆ. ಬಹಳ ಯೋಚನಾಪರರು, ಬಹಳ ಜಾಗೃತರು, ಬಹಳ ಎಚ್ಚರದಿಂದಿರುವವರು ಬಹುಶಃ ಕಡಿಮೆ ನಂಬುವವರಾಗಿದ್ದಾರೆ. ನಂಬಿಕೆ ಬಂಧನಕಾರಿಯಾದ್ದರಿಂದ, ನಂಬಿಕೆ ಪ್ರತ್ಯೇಕತೆಯನ್ನು ಸೃಷ್ಟಿಸುವುದರಿಂದ, ಅದನ್ನು ಪ್ರಪಂಚದಾದ್ಯಂತ ನೋಡುತ್ತಿದ್ದೇವೆ. ಇದನ್ನು ಆರ್ಥಿಕ ಮತ್ತು ರಾಜಕೀಯ ಪ್ರಪಂಚ ಮತ್ತು ಅಧ್ಯಾತ್ಮ ಪ್ರಪಂಚದಲ್ಲೂ ಕಾಣುತ್ತಿದ್ದೇವೆ. 'ನಾನು ದೇವರಿಲ್ಲ' ಎಂದು ನಂಬುತ್ತೇನೆ. 'ನೀವು ದೇವರಿದ್ದಾನೆ' ಎಂದು ನಂಬುತ್ತೀರಿ. ನಾನು ಖಾಸಗಿ ಉದ್ಯಮದಲ್ಲಿ ನಂಬಿಕೆಯಿಟ್ಟರೆ, ನೀವು ಎಲ್ಲ ಆಡಳಿತ, ರಾಜ್ಯಶಕ್ತಿ ವ್ಯಕ್ತಿಯ ಕೈಯಲ್ಲಿರಬೇಕೆಂದು ನಂಬುತ್ತೀರಿ. ನೀವು 'ಜಗತ್ ರಕ್ಷಕ ಒಬ್ಬನೇ ಇದ್ದಾನೆ,' ಅವನ ಮೂಲಕ ನಿಮ್ಮ ಗುರಿ ಸಾಧಿಸಬಹುದೆಂದು ನಂಬುತ್ತೀರಿ. ಆದರೆ ನಾನು ಆ ರೀತಿ ನಂಬುವುದಿಲ್ಲ. ಆಗ ನಾನು ನನ್ನ ನಂಬಿಕೆಗಳನ್ನು, ನೀವು ನಿಮ್ಮ ನಂಬಿಕೆಗಳನ್ನು ಪ್ರತಿಪಾದಿಸುತ್ತಿರುತ್ತೇವೆ. ಆದರೂ ನಾವಿಬ್ಬರೂ ಪ್ರೇಮ, ಶಾಂತಿ, ಮಾನವಕುಲದ ಒಗ್ಗಟ್ಟು, ಸಾಮರಸ್ಯದ ಜೀವನ-ಇಂತಹ ಮಾತುಗಳನ್ನಾಡುತ್ತೇವೆ. ಆಗ ಈ ಮಾತುಗಳಿಗೆ ಬೆಲೆಯಿಲ್ಲ. ಏಕೆಂದರೆ ನಂಬಿಕೆಯೆನ್ನುವುದೇ ಪ್ರತ್ಯೇಕಿಸುವಂಥಹದು. ನಾನು ಬ್ರಾಹ್ಮಣ, ನೀನು ಕ್ರಿಶ್ಚಿಯನ್. ನಾನು ಮುಸ್ಲಿಂ, ನೀವು ಇನ್ನೊಂದು - ಹೀಗೆ ನಾವು ನಮ್ಮನ್ನು ಪ್ರತ್ಯೇಕಿಸಿಕೊಂಡು ವಿಭಜಿಸಿಕೊಂಡಿದ್ದೇವೆ. ಯಾರಿಗೆ ಶಾಂತಿ, ಹೊಸ ಪ್ರಪಂಚ ಕಟ್ಟುವುದು ಬೇಕಾಗಿದೆಯೋ ಆತ ನಿಜವಾಗಿಯೂ ಯಾವುದೇ ನಂಬಿಕೆಗಳಿಂದ ತನ್ನನ್ನು ತಾನು ಪ್ರತ್ಯೇಕಿಸಿಕೊಳ್ಳುವುದಿಲ್ಲ.

ಎಲ್ಲೆಲ್ಲಿ ಆಸೆ ಕೆಲಸ ಮಾಡುತ್ತದೆಯೋ ಅಲ್ಲೆಲ್ಲಾ ನಂಬಿಕೆ, ಪ್ರತ್ಯೇಕತಾ ವಿಧಾನ, ಕೆಲಸ ಮಾಡುತ್ತಿರುತ್ತದೆ. ಏಕೆಂದರೆ ನಾವು ಆರ್ಥಿಕವಾಗಿ, ಆಧ್ಯಾತ್ಮಿಕವಾಗಿ ಮತ್ತು ಅಂತರಂಗದಲ್ಲೂ ಭದ್ರತೆಯನ್ನು ಬಯಸುತ್ತಿರುವುದರಿಂದ ನಂಬಿಕೆಗಳನ್ನು ಬೆಳೆಸುತ್ತಿರುವುದು ಸುಸ್ಪಷ್ಟ. ನಾನು ಆರ್ಥಿಕ ಕಾರಣಗಳಿಗಾಗಿ ನಂಬಿಕೆಯಿಟ್ಟಿರುವವರ ಬಗ್ಗೆ ಮಾತನಾಡುವುದಿಲ್ಲ. ಏಕೆಂದರೆ ಅವರು ಬೆಳೆದು ದೊಡ್ಡವರಾಗುವುದೇ ಆ ಉದ್ಯೋಗ ನಂಬಿಕೊಂಡು ಬದುಕು ನಡೆಸಲಿಕ್ಕಾಗಿ. ನಾವು ಅನುಕೂಲಕ್ಕಾಗಿ ಸೌಕರ್ಯಗಳಿಗಾಗಿ ನಂಬಿಕೆಗಳಿಗೆ ಅಂಟಿಕೊಂಡವರ ಬಗ್ಗೆಯೂ ಮಾತನಾಡುವುದಿಲ್ಲ. ಬಹುಶಃ ನಮ್ಮಲ್ಲಿ ಅನೇಕರ ಬಗ್ಗೆ ಇದು ಹೀಗೆಯೇ ಇದೆ. ನಾವು ಅನೂಕೂಲಕ್ಕಾಗಿ ಕೆಲವು ವಿಷಯಗಳನ್ನು ನಂಬುತ್ತೀವಿ. ನಾವು ಆರ್ಥಿಕ ಕಾರಣಗಳನ್ನು ಬದಿಗಿಟ್ಟು ಇನ್ನೂ ಆಳವಾಗಿ ವಿಚಾರ ಮಾಡಬೇಕು. ಆರ್ಥಿಕ, ಸಾಮಾಜಿಕ, ಆಧ್ಯಾತ್ಮಿಕ ಅಥವಾ ಇನ್ನಾವುದೇ ಕಾರಣದಿಂದ ಪ್ರಬಲವಾಗಿ ನಂಬುವವರು ಸಾಮಾನ್ಯವಾಗಿ ಮಾನಸಿಕ ಭದ್ರತೆಯನ್ನು ಬಯಸುತ್ತಿದ್ದಾರಲ್ಲವೇ...? ಮತ್ತು ಅವರಲ್ಲಿ ನಿರಂತರತೆಯ ಬಯಕೆ ಇರುತ್ತದೆ. ನಾವಿಲ್ಲಿ ನಿರಂತರತೆ ಇದೆಯೋ ಇಲ್ಲವೋ ಅನ್ನುವುದರ ಬಗ್ಗೆಯೂ ಚರ್ಚಿಸುತ್ತಿಲ್ಲ. ನಾವಿಲ್ಲಿ ಕೇವಲ ನಂಬಲು ಇರುವ ತೀವ್ರ ಪ್ರೇರೇಪಣೆ ಮತ್ತು ಸತತ ತುಡಿತದ ಬಗ್ಗೆ ಚರ್ಚಿಸುತ್ತಿದ್ದೇವೆ.

ಶಾಂತಿಪ್ರಿಯ ಮನುಷ್ಯ, ಮಾನವ ಅಸ್ತಿತ್ವದ ಪೂರ್ಣ ವಿಧಾನವನ್ನು ಅರಿಯಬಯಸುವ ಮನುಷ್ಯ, ನಂಬಿಕೆಗಳಿಂದ ಬಂಧಿತನಾಗುವುದು ಸಾಧ್ಯವಿಲ್ಲ ಅಲ್ಲವೇ ? ಅಂತಹವನು ತನ್ನ ಆಸೆಯನ್ನು ತನ್ನ ಕೆಲಸದಲ್ಲಿ ಆತ್ಮವಿಶ್ವಾಸವಿಡುವ ಮೂಲಕ ಭದ್ರತೆ ಬಯಸುತ್ತಾನೆ. ದಯವಿಟ್ಟು ನಾನು ಇನ್ನೊಂದು ತುದಿಯಲ್ಲಿ ನಿಂತು ಅ-ಧರ್ಮ ಬೋಧಿಸುತ್ತಿದ್ದೇನೆಂದು ತಿಳಿಯದಿರಿ. ಅದು ನನ್ನ ಉದ್ದೇಶ ಅಲ್ಲವೇ ಅಲ್ಲ. ನಾವು ಎಲ್ಲಿಯವರೆಗೆ ನಂಬಿಕೆ ಹಿಂದಿರುವ ಆಸೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಜಗಳ, ಕಿತ್ತಾಟ, ಸಂಘರ್ಷ, ದುಃಖ, ಒಬ್ಬ ಮನುಷ್ಯನ ಮೇಲೆ ಇನ್ನೊಬ್ಬ ಮನುಷ್ಯ ಬೀಳುವುದು ಖಂಡಿತಾ ಇರುತ್ತದೆ. ಇದನ್ನು ನಾವು ಪ್ರತಿ ನಿತ್ಯದ ಜೀವನದಲ್ಲಿ ನೋಡುತ್ತಲಿದ್ದೇವೆ. ಒಂದು ವೇಳೆ ನಾನು ಇದನ್ನು ಮನಗಂಡರೆ, ಈ ಆಸೆಯ ವಿಧಾನ ನಂಬಿಕೆಯ ರೂಪ ತಾಳುತ್ತೆ ಎನ್ನುವ ಎಚ್ಚರ ನನಗಿದ್ದರೆ, ಆಂತರಿಕ ಭದ್ರತೆಯ ಅಭಿವ್ಯಕ್ತಿಯೇ ಈ ನಂಬಿಕೆ ಅಂತ ತಿಳಿದರೆ, ಆಗ ನಾನು, 'ಆ ನಂಬಿಕೆ ಈ ನಂಬಿಕೆ' ಎಂದು ನಂಬುವುದನ್ನು ಬಿಟ್ಟು, ಈ ಭದ್ರತೆಯ ಆಸೆಯಿಂದಲೇ ಮುಕ್ತನಾಗಲು ಬಯಸುತ್ತೇನಲ್ಲವೇ ? ಮನಸ್ಸು ಭದ್ರತೆಯ ಆಸೆಯಿಂದ ಮುಕ್ತವಾಗಬಲ್ಲುದೇ ? ಇದು ಸಮಸ್ಯೆಯೇ ಹೊರತು ಏನನ್ನು ನಂಬಬೇಕು, ಎಷ್ಟು ನಂಬಬೇಕೆಂಬುದಲ್ಲ. ಪ್ರಪಂಚದಲ್ಲಿ ಎಲ್ಲವೂ ಅನಿರ್ದಿಷ್ಟವಾಗಿರುವಾಗ ಇದು ಹೀಗೆಯೇ ಇರಬೇಕೆಂಬ ಖಚಿತತೆಯ ಬಯಕೆ ಕೇವಲ ಮಾನಸಿಕ ಭದ್ರತೆಯ ಅಭಿವ್ಯಕ್ತಿಗಳು.

ಮನಸ್ಸು, ಸ್ವಯಂ ಇಚ್ಛೆಯಿಂದ ಭದ್ರತೆಯ ಬಯಕೆಯಿಂದ ಬಿಡುಗಡೆ ಪಡೆಯಲು ಸಾಧ್ಯವೇ ? ನಮ್ಮ ಭದ್ರತೆಯ ಆಸೆಯಿಂದಲೇ ನಮಗೆ ನಮ್ಮ ಆಸ್ತಿ - ಪಾಸ್ತಿಗಳ ಸಹಾಯ, ಕುಟುಂಬದ ಅಗತ್ಯ ಇದೆ. ನಾವು ಆಂತರಿಕವಾಗಿ ಮತ್ತು ಆಧ್ಯಾತ್ಮಿಕವಾಗಿಯೂ ನಂಬಿಕೆಗಳ ಗೋಡೆ ರಚಿಸಿ ಭದ್ರತೆ ಬಯಸುವುದು ನಮ್ಮ ನಿರ್ದಿಷ್ಟತೆಯ ಹಂಬಲಿಕೆಯ ಸಂಕೇತ. ನಾನು ಒಬ್ಬ ವ್ಯಕ್ತಿಯಾಗಿ ಈ ತೀವ್ರ ಆಸೆ, ಭದ್ರತೆಯ ಹಂಬಲಿಕೆ ಹಾಗೂ ಇದರಿಂದುಂಟಾಗುವ ನಂಬಿಕೆಗಳಿಂದ ಮುಕ್ತನಾಗಬಲ್ಲೆನೇ ? ಒಂದು ವೇಳೆ ಹೀಗೆ ಮುಕ್ತರಾಗದಿದ್ದರೆ, ನಾವೇ ಜಗಳಗಳ ಮೂಲವಾಗುತ್ತೇವೆ. ನಾವು ಶಾಂತಿ ಸೃಷ್ಟಿಸುವುದಿಲ್ಲ. ನಮ್ಮ ಹೃದಯದಲ್ಲಿ ಪ್ರೇಮವಿರುವುದಿಲ್ಲ. ನಂಬಿಕೆ ಹಾಳುಮಾಡುತ್ತದೆ. ಇದನ್ನು ನಾವು ಪ್ರತಿನಿತ್ಯ ಜೀವನದಲ್ಲಿ ನೋಡುತ್ತಲಿದ್ದೇವೆ.

ನಾನೊಂದು ಬಯಕೆಯ ಪ್ರಕ್ರಿಯೆಯಲ್ಲಿದ್ದಾಗ, ಅದರಿಂದುಂಟಾಗುವ ನಂಬಿಕೆಗೆ ಅಂಟಿಕೊಂಡಾಗ, ನನ್ನನ್ನು ನಾನು ಗಮನಿಸಬಲ್ಲೆನೇ ? ಮನಸ್ಸು ಇದರಿಂದ ಸಂಪೂರ್ಣ

(೬೬ನೇ ಪುಟಕ್ಕೆ)

# ಸರಳ ಸಜ್ಜನಿಕೆಯ ದಿಟ್ಟ ಹೋರಾಟಗಾರ ಎ. ಜೆ. ಮುಧೋಳ

ಹಲವರಿಗೆ ಸಾರ್ವಜನಿಕ ಜೀವನ ಎಂಬುದು ಸಮೃದ್ಧ ಹುಲ್ಲುಗಾವಲು. ಬರಿಗೈಯಿಂದ ಈ ಬದುಕಿಗೆ ಬಂದವರು ಕೊಪ್ಪರಿಗೆಯಷ್ಟು ಬಾಚಿಕೊಂಡು ದುಂಡಗಾಗುತ್ತಾರೆ. ಇನ್ನು ಕೆಲವರಿರುತ್ತಾರೆ. ಬರಿಗೈಯಿಂದ ಬಂದು ಬರಿಗೈಯಿಂದ ಹೊರಟುಹೋಗುತ್ತಾರೆ. ಇದ್ದುದನ್ನು ಕಳೆದುಕೊಂಡು ಹೋದವರೂ ಸಾಕಷ್ಟಿದ್ದಾರೆ. ಇಂಥವರಿಂದಲೇ ಒಂದು ದೇಶದ ಬದುಕು ಅರ್ಥಪೂರ್ಣವಾಗುತ್ತದೆ. ಏಪ್ರಿಲ್ ಒಂದರಂದು ನಮ್ಮನ್ನಗಲಿದ ಕಮ್ಯುನಿಸ್ಟ್ ನಾಯಕ ಎ. ಜೆ. ಮುಧೋಳ ಈ ಸಾಲಿಗೆ ಸೇರಿದವರು. ಅವರ ಅಂತ್ಯಕ್ರಿಯೆಗೆ ಸೇರಿದ ಸಾವಿರಾರು ಜನ, ಕಣ್ಣೀರು ಹಾಕುತ್ತಿದ್ದ ಬೀಡಿ ಕಾರ್ಮಿಕರು ಈ ಕ್ರಾಂತಿಕಾರಿಯ ಪಾರದರ್ಶಕ ಬದುಕಿಗೆ ಸಾಕ್ಷಿಯಾಗಿ ನಿಂತವರು.

ಎಂಟು ದಶಕಗಳ ಹಿಂದೆ ಹೊಟ್ಟೆಪಾಡಿಗಾಗಿ ಹಮಾಲಿ ಮಾಡಲೆಂದು ಬಿಜಾಪುರ ಜಿಲ್ಲೆಯ ಮಹಾಲಿಂಗಪುರದಿಂದ ಹುಬ್ಬಳ್ಳಿಗೆ ಬಂದ ಜಂಗ್ಲಿ ಸಾಹೇಬ ಎಂಬ ಅನಕ್ಷರಸ್ಥ ಕೂಲಿಯ ಮಗ ಅಬ್ದುಲ್ ಜಬ್ಬಾರ್ ಮುಧೋಳ ಕಮ್ಯುನಿಸ್ಟ್ ಚಳವಳಿಯ ಉನ್ನತ ನಾಯಕನಾಗುತ್ತಾರೆಂದು ಯಾರೂ ನಿರೀಕ್ಷಿಸಿರಲಿಲ್ಲ.

ಉತ್ತರ ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಾರ್ಟಿಯನ್ನು ಕಟ್ಟಲೆಂದು ಬಂದ ಕೊಡಗಿನ ಮೊಣ್ಣಯ್ಯ, ಲೇಖಕ ಕುಳಕುಂದ ಶಿವರಾಯ (ನಿರಂಜನ) ಅವರ ಪ್ರಭಾವಕ್ಕೊಳಗಾದ ಎ. ಜೆ. ಮುಧೋಳ ಮಾರ್ಕ್ಸ್‌ವಾದದ ಪ್ರಾಥಮಿಕ ಪಾಠಗಳನ್ನು ಅವರಿಂದ ಕಲಿತರು. ಇದು ತಂದೆ ಜಂಗ್ಲಿ ಸಾಹೇಬರಿಗೆ ಗೊತ್ತಾಗಿ ಬೈದಾಗ ಮನೆ ಬಿಟ್ಟು ಪಾರ್ಟಿ ಆಫೀಸು ಸೇರಿದ ಮುಧೋಳರು ತಮ್ಮ ಸಂಕಲ್ಪ ಬದಲಿಸಲಿಲ್ಲ. ಪಾರ್ಟಿ ಆಫೀಸಿನಲ್ಲೇ ಪೇಪರ್ ಹಾಸಿಕೊಂಡು ಮಲಗಿ ಬದುಕು ರೂಪಿಸಿಕೊಂಡರು. ಬ್ರಿಟಿಷ್ ಪೊಲೀಸರ ಹದ್ದಿನ ಕಣ್ಣು, ಪಟ್ಟಭದ್ರ ಹಿತಾಸಕ್ತಿಗಳ ಉರಿಗಣ್ಣುಗಳನ್ನು ಎದುರಿಸಿ ಒಂದು ಹೊತ್ತಿನ ಊಟಕ್ಕೂ ಗತಿ ಇಲ್ಲದಂಥ ಸನ್ನಿವೇಶದಲ್ಲಿ ಕಮ್ಯುನಿಸ್ಟ್ ಪಾರ್ಟಿ ಸೇರಿದ ಮುಧೋಳರು ಅವಕಾಶ ವಂಚಿತ ಹಿನ್ನೆಲೆಯಿಂದ ಪ್ರವಾಹದ ತೆರೆಗಳಿಗೆ ಎದೆಕೊಟ್ಟು ಬೆಳೆದುಬಂದರು. ಎಸ್ಸೆಸ್ಸೆಲ್ಸಿ ತಲುಪುವ ಮುನ್ನವೇ ಶಾಲೆಗೆ ಶರಣು ಹೊಡೆದು ಮುಧೋಳರು ಕಮ್ಯುನಿಸ್ಟ್ ಪಾರ್ಟಿ ಎಂಬ ವಿಶ್ವವಿದ್ಯಾಲಯದಲ್ಲಿ ತಲೆಮಾರಿಗಾಗು ವಷ್ಟು ಕಲಿತರು. ಈ ಸಮಾಜದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳನ್ನೆಲ್ಲ ಗುರುತಿಸಿ ಸಮತಾ ಸಮಾಜ ಕಟ್ಟುವ ದಿಕ್ಕುದೆಸೆಗಳ ಬಗ್ಗೆ ಸ್ಪಷ್ಟ ದೃಷ್ಟಿಕೋನ ಬೆಳೆಸಿಕೊಂಡರು. ಕೊನೆಯವರೆಗೂ ಅದನ್ನು ಉಳಿಸಿಕೊಂಡರು. ೪೨ರ ಸ್ವಾತಂತ್ರ್ಯ ಚಳವಳಿಯ ನಂತರ ೫೪ರ ಕರ್ನಾಟಕ ಏಕೀಕರಣ ಚಳವಳಿ, ೬೧ರ ಗೋವಾ ವಿಮೋಚನಾ ಚಳವಳಿಗಳಲ್ಲಿ ಮುಧೋಳರು ಪ್ರಮುಖ ಪಾತ್ರ ವಹಿಸಿ ಸೆರೆವಾಸ ಅನುಭವಿಸಿದ್ದರು. ಮದುವೆಯಾದ ದಿನವೇ ಪೊಲೀಸರು ಅವರನ್ನು ಬಂಧಿಸಿ ಯರವಾಡ ಜೈಲಿಗೆ ಕೊಂಡೊಯ್ದಿದ್ದರು.

**ಸನತ್**

ನಾನು ತುಂಬ ಹತ್ತಿರದಿಂದ ನೋಡಿದ ಮುಧೋಳರಿಗೆ ಸ್ವಂತದ ಬದುಕೆಂಬುದು ಇರಲಿಲ್ಲ. ಪತ್ನಿ ರಷೀದಾ ಬೇಗಂ ಕುಟುಂಬದ ಎಲ್ಲವನ್ನೂ ನಿಭಾಯಿಸುತ್ತಿದ್ದರು. ಮುಂಜಾನೆ ಎದ್ದು ಬ್ಯಾಗಿನ ತುಂಬ ಕಾಗದ ಪತ್ರಗಳನ್ನು ತುಂಬಿಕೊಂಡು ಹೊರಬೀಳುತ್ತಿದ್ದ ಮುಧೋಳರ ಸುತ್ತ ನೂರೆಂಟು ಸಮಸ್ಯೆಗಳನ್ನು ಹೊತ್ತುಕೊಂಡ ನಾನಾ ಉದ್ದಿಮೆಗಳ ಕಾರ್ಮಿಕರು, ತಮ್ಮ ಬೀದಿಯಲ್ಲಿ ದೀಪವಿಲ್ಲ, ನಲ್ಲಿಯಲ್ಲಿ ನೀರು ಬರುವುದಿಲ್ಲ ಎಂಬಂಥ ಸಮಸ್ಯೆಗಳನ್ನು ಹೊತ್ತುಕೊಂಡು ಬಂದವರೇ. ಅವರೆಲ್ಲರನ್ನು ಕಾರ್ಮಿಕರ ಆಯುಕ್ತರ, ಭವಿಷ್ಯನಿಧಿಯ ಇಲ್ಲವೇ ನಗರಪಾಲಿಕೆ ಕಚೇರಿಗಳಿಗೆ ಕರೆದುಕೊಂಡು ಹೋಗಿ ಕೆಲಸ ಮಾಡಿಕೊಟ್ಟೇ ಮನೆಗೆ ವಾಪಸಾಗುವುದು ಮುಧೋಳರ ದಿನಚರಿ. ಈ ಕೆಲಸಗಳ ನಡುವೆ ಓದುವುದನ್ನು ಎಂದೂ ಬಿಡುತ್ತಿರಲಿಲ್ಲ. ಪ್ರತಿ ದಿನದ ಇಂಗ್ಲಿಷ್ - ಕನ್ನಡ ಪತ್ರಿಕೆಗಳನ್ನೆಲ್ಲ ಖರೀದಿಸಿ, ಓದಿ ಸರ್ಕಾರದ ಜನವಿರೋಧಿ ಕ್ರಮಗಳನ್ನು ಖಂಡಿಸಿ ಪತ್ರಿಕಾ ಹೇಳಿಕೆ ನೀಡುವುದು ಅವರ ನಿತ್ಯದ ಅಭ್ಯಾಸ. ಬರೀ ಪತ್ರಿಕಾ ಹೇಳಿಕೆಗಳನ್ನು ನೀಡಿ ಸುಮ್ಮನೆ ಕುಳಿತುಕೊಳ್ಳುವುದು ಅವರ ಜಾಯಮಾನವಲ್ಲ. ಜೀವನಾವಶ್ಯಕ ಪದಾರ್ಥಗಳ ಬೆಲೆ ಏರಿಕೆ ವಿರುದ್ಧ ನಿರಂತರ ಹೋರಾಟ ನಡೆಸಿದ ಹಿಂಮೆ ಅವರದು. ಒಮ್ಮೆ ತೀವ್ರ ಆಹಾರ ಅಭಾವ ಉಂಟಾದಾಗ ಅಕ್ರಮ ದಾಸ್ತಾನುದಾರರ ಮಳಿಗೆಗಳಿಗೆ ಜನರ ಜಾಥಾ ತೆಗೆದುಕೊಂಡು ಹೋಗಿ ಅವುಗಳನ್ನು ಜನರಿಗೆ ಮುಕ್ತಗೊಳಿಸಿದ ಖ್ಯಾತಿ ಮುಧೋಳರದು.



ದಿನವಿಡೀ ಜನರ ಕೆಲಸಕ್ಕಾಗಿ ಊರೆಲ್ಲ ಓಡಾಡಿ ರಾತ್ರಿ ಮನೆಗೆ ಬರುತ್ತಿದ್ದ ಮುಧೋಳರು ಊಟ ಮಾಡಿ ಮಲಗುತ್ತಿರಲಿಲ್ಲ. ನ್ಯೂ ಏಜ್, ಪೀಪಲ್ಸ್ ಡೆಮಾಕ್ರಸಿ, ಪಾರ್ಟಿ ಲೈಫ್, ಹೀಗೆ ಎಡಪಂಥೀಯ ಸಾಹಿತ್ಯವನ್ನು ರಾತ್ರಿಯೆಲ್ಲ ಕುಳಿತು ಅಧ್ಯಯನ ಮಾಡುತ್ತಿದ್ದರು. ಅವರ ಭಾಷಣಗಳಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ, ಟಾಟಾ ಬಿರ್ಲಾಗಳ ಲೂಟಿಯ ಅಂಕಿಸಂಖ್ಯೆಗಳು ಪುಂಖಾನುಪುಂಖವಾಗಿ ಹೊರಬೀಳುತ್ತಿದ್ದವು. ಪಕ್ಕದಲ್ಲಿ ಕುಳಿತವರ ಬೆನ್ನಿಗೆ ಹೊಡೆಯುತ್ತ ಹುರುಪಿನಿಂದ ಮಾತಾಡುತ್ತಿದ್ದ ಮುಧೋಳರಿಂದ ಏಟು ತಿಂದವರಲ್ಲಿ ದೇವರಾಜ ಅರಸು, ಬೊಮ್ಮಾಯಿ, ಬಸವರಾಜ ಹೊರಟ್ಟಿ, ಕೃಷ್ಣನ್ ಹೀಗೆ ನೂರಾರು ನಾಯಕರು ಸೇರಿದ್ದಾರೆ.

೧೯೮೫ರವರೆಗೆ ಪ್ರತಿ ಬಾರಿ ವಿಧಾನಸಭೆಗೆ ಸ್ಪರ್ಧಿಸುತ್ತಿದ್ದ ಮುಧೋಳರು ೧೯೮೩ರ ಚುನಾವಣೆಯಲ್ಲಿ ಬಿ.ಜೆ.ಪಿ.ಯ ಅಭ್ಯರ್ಥಿ ವಿರುದ್ಧ ಸ್ಪರ್ಧಿಸಿ ೨೫೦ ಮತಗಳ ಅಂತರದಲ್ಲಿ ಪರಾಭವಗೊಂಡರು. ಮತ ಎಣಿಕೆಯಲ್ಲಿ ನಡೆದ ಕರಾಮತ್ತಿನಿಂದಾಗಿ ಜನಪರ ಹೋರಾಟಗಾರನೊಬ್ಬ ಶಾಸನಸಭೆಗೆ ಹೋಗುವ ಅವಕಾಶ ತಪ್ಪಿಹೋಯಿತು. ಮುಧೋಳರು ಕೊನೆಗೂ ಶಾಸಕರಾಗಲಿಲ್ಲ. ಆದರೆ ಯಾವ ಶಾಸಕರಿಗಿಂತಲೂ ಅವರು ಕಡಿಮೆಯಿರಲಿಲ್ಲ.

ಮುಸ್ಲಿಂ ಅಲ್ಪಸಂಖ್ಯಾತ ಸಮುದಾಯದಲ್ಲಿ ಜನಿಸಿದ ಮುಧೋಳರು ಮಾರ್ಕ್ಸ್‌ವಾದಿ ಸಿದ್ಧಾಂತಕ್ಕೆ ಕೊನೆಯವರೆಗೂ ಬದ್ಧರಾಗಿ ಉಳಿದರು. ಅವರೆಂದೂ ನಮಾಜಿಗೆ ಹೋಗುತ್ತಿರಲಿಲ್ಲ. ವಿಧಾನಸಭಾ ಚುನಾವಣೆಗೆ ಸ್ಪರ್ಧಿಸಿದ ಸಂದರ್ಭದಲ್ಲಿ ವಿರೋಧಿಗಳು ಇದನ್ನೇ ಬಂಡವಾಳ ಮಾಡಿಕೊಂಡು 'ಆತನಿಗೆ ದೇವರಲ್ಲಿ ನಂಬಿಕೆಯಿಲ್ಲ' ಎಂದು ಅಪಪ್ರಚಾರ ಮಾಡಿದರು. ಆಗ ನಮಾಜಿಗೆ ಬರಲು ಮುಧೋಳರ ಮೇಲೆ ಒತ್ತಡ ಬಂತು. ಆದರೂ ಅವರು ಮಣಿಯಲಿಲ್ಲ. ಇದನ್ನೇ ಇಂದ್ರಜಿತ್ ಗುಪ್ತರು ಮುಧೋಳರ ಚನಾವಣಾ ಪ್ರಚಾರ ಸಭೆಯಲ್ಲಿ ನಮಾಜ್ ಮಾಡುವವರಿಗಿಂತಲೂ ಮುಧೋಳ ಒಳ್ಳೆಯ ಕೆಲಸ ಮಾಡಿದ್ದಾರೆ ಎಂದು ಹೇಳಿದ್ದರು.

ತಮ್ಮನ್ನು ಜಾತಿಯಿಂದ ಗುರುತಿಸಿದಾಗ ತುಂಬ ಯಾತನೆಪಡುತ್ತಿದ್ದ ಮುಧೋಳರು, 'ಹುಟ್ಟು ನನ್ನ ಆಯ್ಕೆಯಲ್ಲ. ಅಲ್ಪಸಂಖ್ಯಾತ ಜನಾಂಗದಲ್ಲಿ ಹುಟ್ಟಿದ್ದು ನನ್ನ ತಪ್ಪೇ ?' ಎಂದು ಕೇಳುತ್ತಿದ್ದರು. ತಾತ್ವಿಕವಾಗಿ ಅಂಥ ಎತ್ತರಕ್ಕೇರಿದ್ದರೂ ರಾಜಕೀಯವಾಗಿ ಅವರ ಬೆಳವಣಿಗೆಗೆ ಜಾತಿಯು ಅಡ್ಡಿಯಾಯಿತು. ಪಾಟೀಲ ಪುಟ್ಟಪ್ಪನವರು ಹೇಳುವಂತೆ ಮುಧೋಳರಂಥ ವ್ಯಕ್ತಿ ಪ್ರತಿಯೊಂದು ಸಮಾಜದಲ್ಲಿ ಜನಿಸಿದರೆ ಇಂಡಿಯಾ ಎಂಬ ದೇಶ ಇಂದು ಇಷ್ಟು ಕಷ್ಟಪಡುತ್ತಿರಲಿಲ್ಲ. ಆದರೆ ಅಂಥವರು ಇನ್ನೆಲ್ಲಿ ಸಿಗುತ್ತಾರೆ ? ಮನೆಮಾರು ಬಿಟ್ಟು ಬೀದಿಗೆ ಬಂದು ಜನರೊಟ್ಟಿಗೆ ಬದುಕಿ ಅವರಿಗಾಗಿ ಹೋರಾಡುವವರನ್ನು ಮಾರುಕಟ್ಟೆಯಲ್ಲಿ ಕೊಂಡು ತರಲು ಸಾಧ್ಯವೇ ? ಮುಧೋಳರಂಥ ಹೋರಾಟಗಾರರನ್ನು ರೂಪಿಸಿದ ಕಮ್ಯುನಿಸ್ಟ್ ಚಳವಳಿ ತನ್ನ ಅಂತಃಶಕ್ತಿಯನ್ನು ಉಳಿಸಿಕೊಂಡರೆ ಮಾತ್ರ ಇಂಥವರು ಬರಬಹುದು. ಮುಧೋಳರಂತಹವರ ಕಾರ್ಯನಿಷ್ಠೆ ಹೆಚ್ಚಾಗಿ ಪ್ರಕಾಶಕ್ಕೆ ಬರಲೆಂದಷ್ಟೇ ನಾವು ಆಶಿಸುವುದು. ❏❏❏

---

*(೬೫ನೇ ಪುಟದಿಂದ)*

ಮುಕ್ತವಾಗಬಲ್ಲದೇ ? ಒಂದರ ಬದಲು ಇನ್ನೊಂದು ನಂಬಿಕೆ ಕಂಡುಕೊಳ್ಳುವುದಲ್ಲ. ನಂಬಿಕೆಗಳಿಂದಲೇ ಮುಕ್ತರಾಗುವುದು ಸಾಧ್ಯವೇ ? ಇದಕ್ಕೆ ನೀವು ಶಾಬ್ದಿಕವಾಗಿ ''ಹೌದು ಅಥವಾ ಇಲ್ಲ'' ಎಂಬ ಉತ್ತರ ಹೇಳಲಾರಿರಿ. ನೀವು ಇದರಿಂದ ಮುಕ್ತವಾಗಲು ತೀವ್ರ ಬಯಕೆ ಇದ್ದರೆ ಖಂಡಿತ ಉತ್ತರ ಹೇಳುತ್ತೀರಿ. ಆಗ ನೀವು ಭದ್ರತೆಯ ಬಯಕೆಯಿಂದಲೇ ಮುಕ್ತರಾಗುವ ಅಂಶದತ್ತ ಬಂದಿದ್ದೀರೆಂದು ಅರ್ಥವಾಗುತ್ತದೆ. ನಿಮ್ಮನ್ನು ನಿರಂತರತೆಯತ್ತ ಕೊಂಡೊಯ್ಯುವ ಯಾವುದೇ ಆಂತರಿಕ ಭದ್ರತೆ ಸ್ಪಷ್ಟವಾಗಿ ಜಗತ್ತಿನಲ್ಲಿಲ್ಲ. ನಾವು ನಮ್ಮ ಸಣ್ಣ, ಪುಟ್ಟ ಸಾಮಾನ್ಯ ವಿಷಯಗಳನ್ನು ನೋಡಿಕೊಳ್ಳಲು, ಯಾರನ್ನು ನೋಡಬೇಕು, ಏನನ್ನು ಮಾಡಬೇಕು ಮತ್ತು ಹೇಗೆ ಕೆಲಸ ಮಾಡಬೇಕು ಎಂಬುದನ್ನು ತಿಳಿಸಲು ದೇವರೊಬ್ಬನಿದ್ದಾನೆ ಎಂದು ನಂಬುತ್ತೇವೆ. ಇದು ಬಾಲಿಶ ಮತ್ತು ಅಪರಿಪಕ್ವ ಯೋಚನೆ. ನಾವು ನಮ್ಮೆಲ್ಲರನ್ನೂ ಗಮನಿಸಲು ದೊಡ್ಡ ದೇವನೊಬ್ಬನಿದ್ದಾನೆ ಎಂದು ಯೋಚಿಸುತ್ತೇವೆ. ಅದು ಕೇವಲ ನಿಮ್ಮ ಸ್ವಂತ ಇಷ್ಟದ ಕಲ್ಪನೆ. ಇದು ನಿಜವಾಗಿಯೂ ಸತ್ಯವಲ್ಲ. ಸತ್ಯವೆನ್ನುವುದು ಇದಕ್ಕಿಂತ ಭಿನ್ನವಾಗಿದೆ.

ಕನ್ನಡಕ್ಕೆ : ಶಿವನಕೆರೆ ಬಸವಲಿಂಗಪ್ಪ
೧೯೧, ಮೂರನೆ ಮುಖ್ಯಬೀದಿ, ಪಿ.ಜೆ. ಬಡಾವಣೆ, ದಾವಣಗೆರೆ-೫೭೭೦೦೨

RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14







# ಮೈಸೂರು ಸ್ಯಾಂಡಲ್ ಆರೈಕೆ
# ...ಮಾತೃಪಾಲನೆ ತರುವಾಯ ಇದೇ ಪ್ರಶಸ್ತ

*Mysore Sandal*

## Baby Soap

ನಿಮ್ಮ ಮುದ್ದಿನ ಮಗುವಿಗಾಗಿಯೇ ವಿಶೇಷ ಆಸಕ್ತಿಯಿಂದ ಸೃಷ್ಟಿಸಲಾಗಿದೆ. ಅತಿ ಪರಿಶುದ್ಧ ಸಾಮಗ್ರಿಗಳಿಂದ ತಯಾರಾದದ್ದು - ಸೌಮ್ಯವಾದ ಶ್ರೀಗಂಧ ತೈಲ, ಪುಷ್ಟಿದಾಯಕ ಬಾದಾಮಿ ಎಣ್ಣೆ, ಮೃದುವಾದ ಗ್ಲಿಸರೀನ್ ಹಾಗೂ ಮತ್ತಿತರ ತೇವಾಂಶದಾಯಕ ಅಂಶಗಳಿಂದ ಕೂಡಿದ್ದು, ನಿಮ್ಮ ಮಗುವಿನ ಚರ್ಮವನ್ನು ಮೃದುವಾಗಿ, ಹೊಳಪುಳ್ಳದ್ದಾಗಿ ಹಾಗೂ ಸೋಂಕಿನಿಂದ ದೂರವಾಗಿ ಇಡುತ್ತದೆ.




*Mysore Sandal*

## Baby Powder

ಅತ್ಯಂತ ಉತ್ತಮವಾದ ಘಟಕಾಂಶಗಳಿಂದ ತಯಾರಾದದ್ದು - ನಿಮ್ಮ ಮಗುವಿನ ಮೃದುವಾದ ಚರ್ಮದ ಸ್ತರಗಳಲ್ಲಿನ ಬೆವರನ್ನು ಹೀರಲು ನೆರವಾಗುವ ಶ್ರೀಗಂಧ ಹಾಗೂ ಬಾದಾಮಿ ಇವುಗಳನ್ನು ಹೊಂದಿದೆ.

ಇದರಿಂದ ಚರ್ಮ ಕೆಂಪುಗಟ್ಟುವ ಸಂದರ್ಭಗಳು ಕಡಿಮೆ - ಅಲ್ಲದೆ ನಿಮ್ಮ ಮಗುವಿನ ಚರ್ಮವನ್ನು ಇಡೀ ದಿನ ಶುಷ್ಕವಾಗಿ ಹಾಗೂ ಪರಿಮಳಯುಕ್ತವಾಗಿಡುತ್ತದೆ.

ಅಂಗೀಕೃತವಾಗಿದೆ
ಚರ್ಮ ಹಾಗೂ ಮಕ್ಕಳ ತಜ್ಞರಿಂದ



ಹಾಗೂ ನಮ್ಮ ಆನ್-ಲೈನ್ ಸ್ಟೋರ್‌ನಲ್ಲಿ
**www.mysoresandal.com**
ವಿಸ್ತಾರ ಶ್ರೇಣಿಯಲ್ಲಿ ದೊರೆಯುವ ಉತ್ಪನ್ನಗಳನ್ನು ಖರೀದಿಸಿ




**ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ**
ಪಿ.ಬಿ.ನಂ.5531, ಬೆಂಗಳೂರು - ಪುಣೆ ಹೆದ್ದಾರಿ, ರಾಜಾಜಿನಗರ,
ಬೆಂಗಳೂರು - 560 055 ದೂರವಾಣಿ : 337 1106, 337 6922, 337 0469
ಫ್ಯಾಕ್ಸ್ : 080337 0498, ಈಮೇಲ್ : sandal@giasbg01.vsnl.net.in
ಶಾಖೆಗಳು : • ಕಲ್ಕತ್ತ • ಚೆನ್ನೈ • ಕಾನ್ಪುರ್ • ಮುಂಬೈ • ನವದೆಹಲಿ • ಹೈದರಾಬಾದ್

CANCO • BLR • KSDL • 1107 • 2000

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna